ಪ್ರಜಾವಾಣಿ

# 'ದಾರ್ಶನಿಕರ ನಡೆ, ನುಡಿ ಅನುಕರಿಸಿ'

## ಶ್ರೀರಾಮಕೃಷ್ಣ ವಿದ್ಯಾಶಾಲೆ: ಹಿರಿಯ ವಿದ್ಯಾರ್ಥಿಗಳ ಸಂವಾದದಲ್ಲಿ ವೂಡೆ ಪಿ.ಕೃಷ್ಣ

ಪ್ರಜಾವಾಣಿ ವಾರ್ತೆ

ಮೈಸೂರು: 'ಸ್ವಾಮಿ ವಿವೇಕಾನಂದರ ನುಡಿ, ಮಹಾತ್ಮ ಗಾಂಧೀಜಿ ನಡೆ ಅನುಸರಿಸಿದಾಗ ಬದುಕಿನ ಸ್ಪಷ್ಟತೆ ಅರಿಯುತ್ತದೆ. ಇಂತಹ ಮಹನೀಯರ ಜೀವನವನ್ನು ರಾಮಕೃಷ್ಣ ವಿದ್ಯಾಶಾಲೆ ನಮಗೆ ಪರಿಚಯಿಸಿದೆ' ಎಂದು ಶೇಷಾದ್ರಿಪುರಂ ಶೈಕ್ಷಣಿಕ ಟ್ರಸ್ಟ್‌ನ ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ತಿಳಿಸಿದರು.

ಇಲ್ಲಿನ ಯಾದವಗಿರಿಯ ಶ್ರೀರಾಮಕೃಷ್ಣ ವಿದ್ಯಾಶಾಲೆಯ ಹಿರಿಯ ವಿದ್ಯಾರ್ಥಿಗಳ ಸಂಘದ ಸುವರ್ಣ ಮಹೋತ್ಸವದ ಅಂಗವಾಗಿ ಶನಿವಾರ ಆಯೋಜಿಸಿದ್ದ ಸಾಧಕ ವಿದ್ಯಾರ್ಥಿಗಳ ಜೊತೆ ಸಂವಾದ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಸಮಾಜದಲ್ಲಿ ಗುರುತಿಸಿಕೊಳ್ಳುವುದಷ್ಟೇ ಅಲ್ಲದೆ, ಸ್ವಯಂಸೇವೆಯಲ್ಲೂ ತೊಡಗಬೇಕು. ಇದರಿಂದ



ಮೈಸೂರಿನ ಶ್ರೀರಾಮಕೃಷ್ಣ ವಿದ್ಯಾಶಾಲೆಯ ಹಿರಿಯ ವಿದ್ಯಾರ್ಥಿಗಳ ಸಂಘದ ಸುವರ್ಣ ಮಹೋತ್ಸವದ ಅಂಗವಾಗಿ ಶನಿವಾರ ಆಯೋಜಿಸಿದ್ದ ಸಾಧಕ ವಿದ್ಯಾರ್ಥಿಗಳ ಜೊತೆ ಸಂವಾದದಲ್ಲಿ ಹೈಕೋರ್ಟ್ ನ್ಯಾಯಾಧೀಶ ಆರ್.ದೇವದಾಸ್ ಮಾತನಾಡಿದರು – ಪ್ರಜಾವಾಣಿ ಚಿತ್ರ

ನಾಯಕತ್ವ ಗುಣವೂ ಬೆಳೆಯುತ್ತದೆ. ವಿದ್ಯಾಶಾಲೆಯಲ್ಲಿ ಪಠ್ಯದ ಹೊರತಾಗಿ ನಾನು ಓದಿರುವ ವಿಷಯಗಳು ಬದುಕಿನ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ನೆರವಾಗಿದೆ' ಎಂದು ವಿವರಿಸಿದರು.

ಪ್ರಗತಿಪರ ಕೃಷಿಕ ಎಚ್.ಕೆ.ಶ್ರೀಕಾಂತ, 'ದೇಶದಲ್ಲಿ ಕೃಷಿಗೆ ಉಜ್ವಲ ಭವಿಷ್ಯವಿದೆ. ಅದರಲ್ಲಿನ ಸೂಕ್ಷ್ಮತೆಗಳನ್ನು ಅರಿಯುವಲ್ಲಿ ನಾವು ಹಿಂದೆ ಬಿದ್ದಿದ್ದೇವೆ. ಹೀಗಾಗಿ ಕೃಷಿ ವಿಜ್ಞಾನದ ಅಧ್ಯಯನ ಅಗತ್ಯ. ನನ್ನ ಶಾಲೆ ಹೇಳಿಕೊಟ್ಟಿರುವಂತೆ ಜೀವನದ ಕೊನೆಯ ಹಂತದಲ್ಲಿ ವಿದ್ಯಾಸೇವೆಯಲ್ಲಿ ತೊಡಗಿಸಿಕೊಳ್ಳುವ ಆಲೋಚನೆ ಇದೆ' ಎಂದು ತಿಳಿಸಿದರು.

ಹೈಕೋರ್ಟ್ ನ್ಯಾಯಾಧೀಶ ಆರ್. ದೇವದಾಸ್ ಮಾತನಾಡಿ, 'ರಾಮಕೃಷ್ಣ ವಿದ್ಯಾಶಾಲೆಯಲ್ಲಿ ಹೇಳಿಕೊಡುವ ಶಿಸ್ತು, ಉದ್ಯೋಗ ವಲಯದ ಬೆಳವಣಿಗೆಗೆ ಸಹಕಾರಿಯಾಗಿದೆ. ಇಲ್ಲಿ ವಿದ್ಯಾರ್ಥಿ ಸರ್ವ ಕ್ಷೇತ್ರದ ಬಗ್ಗೆಯೂ ತಿಳಿದುಕೊಂಡಿರಬೇಕು ಎಂದು ಬಯಸುತ್ತಾರೆ. ಅಂಥ ಗುಣವಿರುವ ಅಭ್ಯರ್ಥಿಯನ್ನು ಎಲ್ಲಾ ಕ್ಷೇತ್ರವೂ ಕೈಬೀಸಿ ಕರೆಯುತ್ತದೆ' ಎಂದರು.

ಬೆಂಗಳೂರು ಉತ್ತರ ವಿಶ್ವವಿದ್ಯಾಲಯದ ಕುಲಪತಿ ನಿರಂಜನ ವಾನಳ್ಳಿ ಮಾತನಾಡಿ, 'ಬಂಧುತ್ವದ ಗುಣವನ್ನು ಈ ವಿದ್ಯಾಶಾಲೆ ಬೆಳೆಸುತ್ತದೆ' ಎಂದು ಹೇಳಿದರು.

ಬಳ್ಳಾರಿ ಜಿ.ಪಂ ಸಿಇಒ ರಾಮನ್ ಶಂಕನೂರು, ನೌಕಾದಳದ ನಿವೃತ್ತ ಕಮಾಂಡರ್ ರೋಹಿತ್ ಕೃಷ್ಣಮೂರ್ತಿ, ಭಾರತೀಯ ವಿದ್ಯಾಭವನದ ಕೆ.ಪಿ. ಉತ್ತಪ್ಪ, ಐಆರ್‌ಎಸ್ ಅಧಿಕಾರಿ ತೇಜ ಕುಮಾರ್, ಅಮೆರಿಕ ವಿಶ್ವವಿದ್ಯಾಲಯದ ಪತ್ರಿಕೋದ್ಯಮ ವಿಭಾಗ ಮುಖ್ಯಸ್ಥ ನಿಖಿಲ್ ಮೊರೊ, ವಾಣಿಜ್ಯೋದ್ಯಮಿ ಗೌರವ್ ರಾಣೆಬೆನ್ನೂರು ಇದ್ದರು.

ವಿಶ್ವ ವಾರಿಧಿ

31-12-2024, TUESDAY




ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಸ್ವಾಮಿ ಮಹಾಮೇಧಾನಂದಜಿ ಮಹಾರಾಜ್, ವೂಡೇ.ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಎಚ್. ಅನಿಲ್ ಕುಮಾರ್, ಬಿ.ಎಂ. ಪಾರ್ಥಸಾರಥಿ, ಎಸ್. ಶೇಷನಾಯರಾಯಣ, ಎಂ.ಎಸ್. ನಟರಾಜ್, ಡಾ.ಎಸ್.ಎನ್. ವೆಂಕಟೇಶ್ ಇದ್ದರು.

ಕೋಲಾರ ವಾಣಿ

31 Dec 2024 - Page 3




ಭಾನುವಾರ ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಸ್ವಾಮಿ ಮಹಾಮೇಧಾನಂದಜಿ ಮಹಾರಾಜ್, ವೂಡೇ.ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಎಚ್. ಅನಿಲ್‌ಕುಮಾರ್, ಬಿ.ಎಂ.ಪಾರ್ಥಸಾರಥಿ, ಎಸ್.ಶೇಷನಾಯರಾಯಣ, ಎಂ.ಎಸ್.ನಟರಾಜ್, ಡಾ.ಎಸ್.ಎನ್.ವೆಂಕಟೇಶ್ ಇದ್ದರು.

ಉದಯಕಾಲ
ಕನ್ನಡಿಗರ ಜೀವಾಳ

Dec 31, 2024

# ಸೇವೆಯಲ್ಲಿ ಒಳ್ಳೆಯ ಸಂಕಲ್ಪ, ನಿಸ್ಪೃಹತೆ, ಮಾನವೀಯತೆ ಇರಲಿ: ಮಹಾ ಮೇಧಾನಂದ ಜಿ ಮಹರಾಜ್

ಉದಯಕಾಲ ನ್ಯೂಸ್

ಯಲಹಂಕ: ಸೇವಾನಿರತ ನೌಕರರಲ್ಲಿ ಹಲವು ಮಾದರಿ ಯವರು ಇರುತ್ತಾರೆ. ಕೆಲವರು ವೇತನಕ್ಕಾಗಿ ತಮಗೆ ನಿಗದಿ ಪಡಿಸಿರುವ ಕೆಲಸವನ್ನು ಮಾಡುತ್ತಾರೆ. ಇನ್ನು ಕೆಲವರು ವೇತನದ ಜೊತೆಗೆ ಒಂದಷ್ಟು ಸೇವಾ ಮನೋಭಾವನೆಯಿಂದ ಕೆಲಸ ಮಾಡುತ್ತಾರೆ. ಇನ್ನೊಂದಷ್ಟು ಜನ ನಿಸ್ಪೃಹ ಸೇವೆಯ ಜೊತೆಗೆ ಸಂಸ್ಥೆಯ ಏಳಿಗೆಯ ಗುರಿಯೊಂದಿಗೆ, ಮಾನವೀಯತೆ ಯನ್ನು ಬೆರೆಸಿ ಕೆಲಸ ಮಾಡುತ್ತಾರೆ ಇಂಥವರಿಂದ ಸಂಸ್ಥೆಗಳು ಏಳಿಗೆ ಕಾಣುತ್ತವೆ ಎಂದು ಮೈಸೂರಿನ ರಾಮಕೃಷ್ಣ ನೈತಿಕ ಹಾಗೂ ಆಧ್ಯಾತ್ಮಿಕ ವಿದ್ಯಾಸಂಸ್ಥೆಯ ಮುಖ್ಯಸ್ಥರಾದ ಸ್ವಾಮಿ ಮಹಾಮೇಧಾನಂದಜಿ ಮಹರಾಜ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಸಮೂಹ ವಿದ್ಯಾ ಸಂಸ್ಥೆಗಳ ವತಿಯಿಂದ ಯಲಹಂಕದ



ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಆಯೋಜಿಸಿದ್ದ ಸ್ನೇಹ ಸಮ್ಮಿಲನ ಶೇಷಾದ್ರಿಪುರಂ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಹಿರಿಯ ನೌಕರರಿಗೆ ಸೇವಾ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ದಿವ್ಯ ಸಾನಿಧ್ಯ ವಹಿಸಿ ಮಾತನಾಡಿದ ಅವರು ಸಂಸ್ಥೆಯ ನೌಕರರ ಒಳ್ಳೆಯ ಸಂಕಲ್ಪದ ಸೇವೆ, ಆಡಳಿತ ಮಂಡಳಿಯ ಪ್ರೋತ್ಸಾಹದಾಯಕ ಆಡಳಿತ ನಿರ್ವಹಣೆಯಿಂದಾ ಗಿಯೇ ಶೇಷಾದ್ರಿಪುರಂ ವಿದ್ಯಾ ಸಂಸ್ಥೆ ಈ ಮಟ್ಟದ ಏಳಿಗೆ ಸಾಧಿಸಿ, ಜನಪ್ರಿಯ ವಿದ್ಯಾಸಂಸ್ಥೆಯಾಗಿ ಹೊರಹೊಮ್ಮಲು ಸಾಧ್ಯವಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್ ಆರ್ ಪಂಡಿತಾರಾಧ್ಯ ಮಾತನಾಡಿ ಶಿಕ್ಷಕರು ದೇಶದ ನಿರ್ಮಾತೃಗಳು, ಅವರು ಸಲ್ಲಿಸುವ ಪ್ರಾಮಾಣಿಕ ಸೇವೆ, ನೀಡುವ ಮೌಲ್ಯಯುತ ಶಿಕ್ಷಣದಿಂದಾಗಿ ದೇಶವನ್ನು ಬೆಳಗುವ ಹೊಸ ಪ್ರತಿಭೆಗಳು ಉದಯಿಸುತ್ತವೆ ಎಂದರು.

ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ, ನಾಡೋಜ ವೂಡೆ ಪಿ.ಕೃಷ್ಣ ಮಾತನಾಡಿ ಕಳೆದ 26 ವರ್ಷಗಳಿಂದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ನಿವೃತ್ತ ಹಿರಿಯ ನೌಕರ ರನ್ನು ಸನ್ಮಾನಿಸಿ ಗೌರವಿಸುವ ಮೂಲಕ ಅವರ ಅನುಪಮ ಸೇವೆಯನ್ನು ಸ್ಮರಿಸುವ ಕಾರ್ಯವನ್ನು ಶ್ರದ್ಧೆಯಿಂದ ಮಾಡಿಕೊಂಡು ಬಂದಿದೆ, ಇದೊಂದು ಅಪೂರ್ವ ಕ್ಷಣ ಎಂದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ 20 ಹಿರಿಯ ನೌಕರರಿಗೆ ಸೇವಾ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಇದೇ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯೂ ಹೆಚ್ ಅನಿಲ್ ಕುಮಾರ್, ಗೌರವ ಕೋಷಾಧ್ಯಕ್ಷ ಬಿ.ಎಂ. ಪಾರ್ಥಸಾರಥಿ, ಗೌರವ ಸಹ ಕಾರ್ಯದರ್ಶಿ ಎಸ್.ಶೇಷ ನಾರಾಯಣ, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್ .ನಟರಾಜ್, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್. ಎನ್. ವೆಂಕಟೇಶ್ ಸೇರಿದಂತೆ ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿದ್ದರು.

Vishwa Vaaridhi
31 Dec 2024 - Page 3



ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಸ್ವಾಮಿ ಮಹಾಮೇಧಾನಂದಜಿ ಮಹಾರಾಜ್, ಪ್ರೊಫೇ.ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಎಚ್. ಅನಿಲ್ ಕುಮಾರ್, ಬಿ.ಎಂ. ಪಾರ್ಥಸಾರಥಿ, ಎಸ್. ಶೇಷನಾರಾಯಣ, ಎಂ.ಎಸ್. ನಟರಾಜ್, ಡಾ.ಎಸ್.ಎನ್. ವೆಂಕಟೇಶ್ ಇದ್ದರು.

ಸಮ... ...ಗರ ಏಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ

Dec 31, 2024



ರಂಗಶ್ರೀ ಸಂಸ್ಥಾನ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಮತ್ತು ಬಸವ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ಶೇಷಾದ್ರಿಪುರಂನ ಕೇಂದ್ರ ಕಾಲೇಜನಲ್ಲಿ ಹಮ್ಮಿಕೊಂಡಿದ್ದ ವಚನ ಗಾಯನ ವಿಹಂಗಮ ಶತಕಂಠಗಳ ಸಮೂಹ ಕಾರ್ಯಕ್ರಮವನ್ನು ನಿವೃತ್ತ ಐಎಎಸ್ ಅಧಿಕಾರಿ ಡಾ.ಸಿ. ಸೋಮಶೇಖರ್ ಅವರು ಉದ್ಘಾಟಿಸಿದರು. ನಾಡೋಜ ಡಾ. ವೂಡೇ ಪಿ.ಕೃಷ್ಣ, ಸುಮಂಗಲಿ ಸೇವಾಶ್ರಮದ ಸಂಸ್ಥಾಪಕರಾದ ಡಾ.ಎಸ್.ಜಿ.ಸುಶೀಲಮ್ಮ, ಪ್ರೊ.ಮಂಜನಾಥ್ ಮತ್ತಿತರರಿದ್ದರು.

ಪ್ರಜಾವಾಣಿ
ಸೋಮವಾರ • ಡಿಸೆಂಬರ್ 30, 2024

ಮಹಾಮೇಧಾನಂದ ಸ್ವಾಮೀಜಿ ಅಭಿಪ್ರಾಯ

# 'ಪ್ರಗತಿ ಸಾಧಿಸಲು ಸಂಕಲ್ಪ ಮುಖ್ಯ'

ಪ್ರಜಾವಾಣಿ ವಾರ್ತೆ




ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಸ್ವಾಮಿ ಮಹಾಮೇಧಾನಂದಜಿ ಮಹಾರಾಜ್, ವೂಡೇ.ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಎಚ್. ಅನಿಲ್‌ಕುಮಾರ್, ಬಿ.ಎಂ. ಪಾರ್ಥಸಾರಥಿ, ಎಸ್. ಶೇಷನಾಯರಾಯಣ, ಎಂ.ಎಸ್. ನಟರಾಜ್, ಡಾ.ಎಸ್.ಎನ್. ವೆಂಕಟೇಶ್ ಇದ್ದರು

ಯಲಹಂಕ: ಯಾವುದೇ ಸಂಸ್ಥೆಗಳು, ಮನೆ ಅಥವಾ ವ್ಯಕ್ತಿ ಬೆಳವಣಿಗೆಯಾಗಲು ಸಂಕಲ್ಪ ಮಾಡುವುದು ಬಹಳಮುಖ್ಯ ಎಂದು ಮೈಸೂರಿನ ರಾಮಕೃಷ್ಣ ನೈತಿಕ ಹಾಗೂ ಆಧ್ಯಾತ್ಮಿಕ ವಿದ್ಯಾಸಂಸ್ಥೆಯ ಮುಖ್ಯಸ್ಥರಾದ ಸ್ವಾಮಿ ಮಹಾಮೇಧಾನಂದಜಿ ಮಹಾರಾಜ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ 'ಸ್ನೇಹ-ಸಮ್ಮಿಲನ' – ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ-ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸಿ ನಿವೃತ್ತರಾಗಿರುವ ಹಿರಿಯರಿಗೆ ನೀಡಿದ ಸೇವಾ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಇಬ್ಬರು ತಾಯಂದಿರಿಂದ ಆರಂಭವಾದ ಈ ಸಂಸ್ಥೆ ಇಂದು ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯೆಯನ್ನು ಧಾರೆಯೆರೆದಿದೆ. ಜೊತೆಗೆ ನೂರಾರು ಸಿಬ್ಬಂದಿ ಕೆಲಸ ಮಾಡಲು ಅವಕಾಶ ಮಾಡಿಕೊಟ್ಟಿದೆ. ಇವೆಲ್ಲದರ ಫಲವನ್ನೂ ಇವತ್ತು ನೋಡುತ್ತಿದ್ದೇವೆ' ಎಂದು ಹೇಳಿದರು. ಶಿಕ್ಷಣ ತಜ್ಞ ವೂಡೇ. ಪಿ.ಕೃಷ್ಣ ಮಾತನಾಡಿ, 'ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯು ಹಿಂದಿನಿಂದಲೂ ಗುಣಮಟ್ಟದ ಶಿಕ್ಷಣಕ್ಕೆ ಆದ್ಯತೆ ನೀಡುತ್ತಿದೆ. ಜೊತೆಗೆ ಭಾರತೀಯ ಕಲೆ, ಸಂಸ್ಕೃತಿ ಹಾಗೂ ಪರಂಪರೆಯ ಕುರಿತು ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುತ್ತಿದೆ' ಎಂದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಸಮೂಹ ವಿದ್ಯಾಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ 20 ಮಂದಿಗೆ ಸೇವಾಪ್ರಶಸ್ತಿ ಪ್ರದಾನ ಮಾಡಲಾಯಿತು.

ವಿಶ್ವ ವಾರಿಧಿ

26-12-2024, THURSDAY

# ಹನುಮಂತಪ್ಪರನ್ನು ಅರ್ಥ ಮಾಡಿಕೊಂಡರೆ ಜನ್ಮ ಸಾರ್ಥಕ: ಡಾ.ವೂಡೇ ಪಿ.ಕೃಷ್ಣ




ವಿಶ್ವ ವಾರಿಧಿ । ಬೆಂಗಳೂರು

ಮಹಾತ್ಮ ಗಾಂಧಿ ಮತ್ತು ರಾಜಾರಾಮ್ ಮೋಹನ ರಾಯ್ ಅವರನ್ನು ಅನುಸರಿಸಿ ಸಮಾಜದಲ್ಲಿ ಶ್ರೇಷ್ಠ ವ್ಯಕ್ತಿಯಾಗಿ ಬಾಳಿದ ಡಬ್ಲ್ಯೂ.ಹೆಚ್.ಹನುಮಂತಪ್ಪ ಅವರನ್ನು ಅರ್ಥ ಮಾಡಿಕೊಂಡರೆ ನಮ್ಮ ಜನ್ಮ ಸಾರ್ಥಕವಾಗುತ್ತದೆ ಎಂದು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರುಗಳು ಹಾಗೂ ಶಿಕ್ಷಣ ತಜ್ಞ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಹೇಳಿದರು.

ಇಲ್ಲಿನ ಗಾಂಧಿ ಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಅಧ್ಯಯನ ಕೇಂದ್ರ, ಶೇಷಾದ್ರಿಪುರಂ ಸಂಜೆ ಕಾಲೇಜು ಇವರ ವತಿಯಿಂದ ಹಮ್ಮಿಕೊಂಡ ಬ್ರಹ್ಮ ಸಮಾಜದ ಮುಖಂಡರು, ಗಾಂದಿಮಾರ್ಗಿ ಡಬ್ಲ್ಯೂ. ಹೆಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಕಳೆದ 41 ವರ್ಷಗಳಿಂದ ಇದೇ ಸಭಾಂಗಣದಲ್ಲಿ ನಾವು ಈ ಕಾರ್ಯಕ್ರಮ ಆಯೋಜಿಸಿಕೊಂಡು ಬರುತ್ತಿದ್ದೇವೆ. ಹನುಮಂತಪ್ಪನವರು ಐದು ದಶಕಗಳ ಕಾಲ ಬ್ರಹ್ಮ ಸಮಾಜವನ್ನು ರೂಢಿಸಿಕೊಂಡು ರಾಜಾರಾಮ ಮೋಹನರಾಯರ ಚಿಂತನೆಗಳನ್ನು ಜಾರಿಗೊಳಿಸಿದ್ದರು. ಕಾಯ, ವಾಚ, ಮನಸಾ ಒಂದೇ ಆಗಿದ್ದ ಹನುಮಂತಪ್ಪನವರು ಅಚಲವಾದ ಶಕ್ತಿ, ಧೈರ್ಯಕ್ಕೆ ಹೆಸರುವಾಸಿಯಾದ ರಾಜಾರಾಮ ಮೋಹನರಾಯರ ಪುತ್ಥಳಿ ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಬೆಂಗಳೂರಿನಲ್ಲಿ ಅವರ ಹೆಸರಿನಲ್ಲಿ ರಸ್ತೆ, ಬಡಾವಣೆ ನಿರ್ಮಿಸಿದ್ದಾರೆ. ಜನರ ಸಾಮಾಜಿಕ ಬದಲಾವಣೆಗೆ ತುಡಿಯುತ್ತಿದ್ದ ಅವರು ಮಹಾತ್ಮ ಗಾಂಧೀಜಿ ಅವರನ್ನೂ ಅನುಸರಿಸಿದ್ದರು ಎಂದರು.

ರಾಜಾರಾಮ ಮೋಹನರಾಯರು ಸ್ತ್ರೀ ಸ್ವಾತಂತ್ರ್ಯ ಸ್ತ್ರೀ ಹೋರಾಟಕ್ಕೆ ಬೆಂಬಲಿಸಿದ್ದರು. ವಿಲಿಯಮ್ ಬೆಂಟಿಕ್ ಎನ್ನುವ ಬ್ರಿಟಿಷ್ ಅಧಿಕಾರಿಯ ನೆರವಿನಿಂದ ಭಾರತದಲ್ಲಿದ್ದ ಸತಿ ಸಹಗಮನ ಪದ್ಧತಿಯನ್ನು ತೊಡೆದು ಹಾಕುವಲ್ಲಿ ಯಶಸ್ವಿಯಾಗಿದ್ದರು. ಅವರ ಬಗ್ಗೆ ಹನುಮಂತಪ್ಪನವರು ಅತೀವ ಅಭಿಮಾನ ಹೊಂದಿ ಕೃತಿಯನ್ನೂ ರಚಿಸಿದ್ದರು ಎಂದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ.ಎನ್.ಎಸ್.ಸತೀಶ್, ಕರ್ನಾಟಕ ಗಾಂಧೀಜಿ ಸ್ಮಾರಕ ನಿಧಿಯ ಗೌರವ ಕಾರ್ಯದರ್ಶಿ ಎಂ.ಸಿ.ನರೇಂದ್ರ, ಶೇಷಾದ್ರಿಪುರಂ ಸಂಜೆ ಕಾಲೇಜು ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕರಾದ ಡಾ.ಸತ್ಯಮಂಗಲ ಮಹಾದೇವ ವೇದಿಕೆಯ ಮೇಲೆ ಉಪಸ್ಥಿತರಿದ್ದರು.

# ಹನುಮಂತಪ್ಪರನ್ನು ಅರ್ಥ ಮಾಡಿಕೊಂಡರೆ ನಮ್ಮ ಜನ್ಮ ಸಾರ್ಥಕ: ಡಾ.ವೂಡೇ ಪಿ.ಕೃಷ್ಣ

ಬೆಂಗಳೂರು

ಮಹಾತ್ಮ ಗಾಂಧಿ ಮತ್ತು ರಾಜಾರಾಮ್ ಮೋಹನರಾಯ್ ಅವರನ್ನು ಅನುಸರಿಸಿ ಸಮಾಜದಲ್ಲಿ ಶ್ರೇಷ್ಠ ವ್ಯಕ್ತಿಯಾಗಿ ಬಾಳಿದ ಡಬ್ಲ್ಯೂ.ಹೆಚ್.ಹನುಮಂತಪ್ಪ ಅವರನ್ನು ಅರ್ಥ ಮಾಡಿಕೊಂಡರೆ ನಮ್ಮ ಜನ್ಮ ಸಾರ್ಥಕವಾಗುತ್ತದೆ ಎಂದು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರುಗಳು ಹಾಗೂ ಶಿಕ್ಷಣ ತಜ್ಞರಾದ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಹೇಳಿದರು.

ಇಲ್ಲಿನ ಗಾಂಧಿ ಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಅಧ್ಯಯನ ಕೇಂದ್ರ, ಶೇಷಾದ್ರಿಪುರಂ ಸಂಜೆ ಕಾಲೇಜು ಇವರ ವತಿಯಿಂದ ನಮ್ಮಕೊಂಡ ಬ್ರಹ್ಮ ಸಮಾಜದ ಮುಖಂಡರು, ಗಾಂಧಿವಾದಿ ಡಬ್ಲ್ಯೂ.ಹೆಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಕಳೆದ 41 ವರ್ಷಗಳಿಂದ ಇದೇ ಸಭಾಂಗಣದಲ್ಲಿ ನಾವು ಈ ಕಾರ್ಯಕ್ರಮ ಆಯೋಜಿಸಿಕೊಂಡು ಬರುತ್ತಿದ್ದೇವೆ. ಹನುಮಂತಪ್ಪನವರು ಐದು ದಶಕಗಳ ಕಾಲ ಬ್ರಹ್ಮ ಸಮಾಜವನ್ನು ರೂಢಿಸಿಕೊಂಡು ರಾಜಾರಾಮ ಮೋಹನರಾಯರ ಚಿಂತನೆಗಳನ್ನು ಜಾರಿಗೊಳಿಸಿದ್ದರು. ಕಾಯ, ವಾಚ, ಮನಸಾ ಒಂದೇ ಆಗಿದ್ದ ಹನುಮಂತಪ್ಪನವರು ಅಚಲವಾದ ಶಕ್ತಿ, ಧೈರ್ಯಕ್ಕೆ ಹೆಸರುವಾಸಿಯಾದ ರಾಜಾರಾಮ ಮೋಹನರಾಯರ ಪುತ್ಥಳಿ ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಬೆಂಗಳೂರಿನಲ್ಲಿ ಅವರ ಹೆಸರಿನಲ್ಲಿ ರಸ್ತೆ, ಬಡಾವಣೆ ನಿರ್ಮಿಸಿದ್ದಾರೆ. ಜನರ ಸಾಮಾಜಿಕ ಬದಲಾವಣೆಗೆ ತುಡಿಯುತ್ತಿದ್ದ ಅವರು ಮಹಾತ್ಮಗಾಂಧೀಜಿ ಅವರನ್ನೂ ಅನುಸರಿಸಿದ್ದರು ಎಂದರು.




ರಾಜಾರಾಮ ಮೋಹನರಾಯರು ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಹೋರಾಟಕ್ಕೆ ಬೆಂಬಲಿಸಿದ್ದರು. ವಿಲಿಯಮ್ ಬೆಂಟಿಕ್ ಎನ್ನುವ ಬ್ರಿಟೀಷ್ ಅಧಿಕಾರಿಯ ನೆರವಿನಿಂದ ಭಾರತದಲ್ಲಿದ್ದ ಸತಿ ಸಹಗಮನ ಪದ್ಧತಿಯನ್ನು ತೊಡೆದು ಹಾಕುವಲ್ಲಿ ಯಶಸ್ವಿಯಾಗಿದ್ದರು. ಸ್ತ್ರೀ ಶಿಕ್ಷಣದ ಮೊದಲ ಬಾಗಿಲು ತೆರೆದ ಅವರು ವಿಗ್ರಹಾರಾಧನೆಯನ್ನು ವಿರೋಧಿಸಿದ್ದರು. ವಿಶ್ವ ಭ್ರಾತೃತ್ವ, ಏಕ ದೈವ ಪ್ರೇಮ ಮೆರೆದಿದ್ದರು. ಅವರ ಬಗ್ಗೆ ಹನುಮಂತಪ್ಪನವರು ಅತೀವ ಅಭಿಮಾನ ಹೊಂದಿ ಕೃತಿಯನ್ನೂ ರಚಿಸಿದ್ದರು ಎಂದರು.

ಕುಪ್ಪಂ ದ್ರಾವಿಡ ವಿಶ್ವವಿದ್ಯಾಲಯದ ಕನ್ನಡ ಭಾಷೆ ಮತ್ತು ಅನುವಾದ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕ ಡಾ.ಎಂ.ಎಸ್.ಮರ್ಗಾ ಪ್ರವೀಣ ಅವರು 'ರಾಜಾ ರಾಮ್ ಮೋಹನ ರಾಯ್' ಅವರ ಬಗ್ಗೆ ಉಪನ್ಯಾಸ ನೀಡಿ, 1772-1883ರ ಕಾಲಘಟ್ಟದಲ್ಲಿ ಅನೇಕ ಸಾಮಾಜಿಕ ತಲ್ಲಣಗಳು, ಪಲ್ಲಟಗಳು ನಡೆದು ಪರಿವರ್ತನೆ ಆಗಲು ರಾಜಾರಾಮ ಮೋಹನರಾಯರು ಕಾರಣರಾಗಿದ್ದರು. ಅವರು ಧರ್ಮದ ವಿಚಾರ ಹೇಳುವಾಗ ಅವರ ಸ್ವಂತ ಸಮುದಾಯದವರೇ ವಿರೋಧ ವ್ಯಕ್ತಪಡಿಸಿದ್ದರು.

ಹೀನಾಯವಾಗಿ ನಿಂದಿಸಿದ್ದರು. ಅವರ ಮನೆಗೆ ಸಗಣಿ, ಎಲುಬುಗಳನ್ನು ತೂರಿ ಅವಮಾನ ಮಾಡಿದ್ದರು. ಅವರ ಪುತ್ರನ ಮದುವೆ ವೇಳೆ ಸಾಕಷ್ಟು ತೊಂದರೆಗಳನ್ನು ನೀಡಿದ್ದರು. 1828ರಲ್ಲಿ ಬ್ರಹ್ಮ ಸಮುದಾಯ ನಿರ್ಮಾಣ ಮಾಡಿದ್ದ ರಾಜಾರಾಮ ಮೋಹನರಾಯ್ ಅವರು ಹಿಂದೂಗಳ ವಿಗ್ರಹಾರಾಧನೆ ಕುರಿತು ಬರೆದದ್ದಕ್ಕೆ ಮುದ್ದು ಅವರ ಅಪ್ಪ, ಅಮ್ಮನ ವಿರೋಧಕ್ಕೆ ಒಳಗಾಗಿದ್ದರು. ಅವರ ಕಿರಿಯ ಪತ್ನಿ ಧರ್ಮದ ಬಗ್ಗೆ ಕೇಳಿದಾಗ, ಹಸುಗಳು ಹಲವು ವಿಧದ ಬಣ್ಣಗಳಲ್ಲಿದ್ದರೂ ಹಾಲು ಬಿಳಿದಾಗಿರುತ್ತದೆ. ಹಾಗೆಯೇ ಧರ್ಮಗಳು ಎಷ್ಟೇ ಇದ್ದರೂ ಧರ್ಮ ಒಂದೇ ಆಗಿರುತ್ತದೆ ಎಂದು ಮಾರ್ಮಿಕವಾಗಿ ಹೇಳಿದ್ದರು. ಅಂದಿನ ಕಾಲಘಟ್ಟದಲ್ಲಿ ರಾಜಾರಾಮ ಮೋಹನರಾಯರು ಸಾಕಷ್ಟು ಸಮಸ್ಯೆಗಳನ್ನು ಎದುರಿಸಿದ್ದರೂ ದೇಶ ಹಾಗೂ ವಿದೇಶಗಳಲ್ಲಿ ಪ್ರಸಿದ್ಧಿ ಪಡೆದಿದ್ದರು ಎಂದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ.ಎನ್.ಎಸ್.ಸತೀಶ್, ಕರ್ನಾಟಕ ಗಾಂಧೀಜಿ ಸ್ಮಾರಕ ನಿಧಿಯ ಗೌರವ ಕಾರ್ಯದರ್ಶಿ ಎಂ.ಸಿ.ನರೇಂದ್ರ, ಶೇಷಾದ್ರಿಪುರಂ ಸಂಜೆ ಕಾಲೇಜು ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕರಾದ ಡಾ.ಸತ್ಯಮಂಗಲ ಮಹಾದೇವ ವೇದಿಕೆಯ ಮೇಲೆ ಉಪಸ್ಥಿತರಿದ್ದರು.

ಶೇಷಾದ್ರಿಪುರಂ ಸಂಜೆ ಕಾಲೇಜಿನ ವಿದ್ಯಾರ್ಥಿನಿಯರಾದ ಮುಕ್ತಾ ಪಿ.ಪಾಟೀಲ್ ನಿರೂಪಿಸಿದರೆ, ಜಾಹ್ನವಿ ಮತ್ತು ಸಂಚಿತಾ ಭಜನೆ ಪ್ರಸ್ತುತಿಗೊಳಿಸಿದರು.

ವಿ.ಕೃತ್ತಿಕಾ ಸ್ವಾಗತಿಸಿದರೆ ವಿದ್ಯಾರ್ಥಿ ಯತೀಶ್ ಕುಮಾರ್ ಸಿ ವಂದಿಸಿದರು. ಕಾಲೇಜಿನ ಪ್ರಾಧ್ಯಾಪಕರು, ಬೋಧಕರು ಮತ್ತು ಬೋಧಕೇತರ ಸಿಬ್ಬಂದಿ, ವಿದ್ಯಾರ್ಥಿಗಳು ಪಾಲ್ಗೊಂಡಿದ್ದ ಈ ಕಾರ್ಯಕ್ರಮದ ಬಳಿಕ ರಾಷ್ಟ್ರಗೀತೆಯೊಂದಿಗೆ ಸಂಪನ್ನಗೊಳಿಸಲಾಯಿತು.

# ಇಂದಿನ ಆಮಂತ್ರಣ

## ಪ್ರಜಾವಾಣಿ

ಮಂಗಳವಾರ • ಡಿಸೆಂಬರ್ 24, 2024

ಡಬ್ಲ್ಯು.ಎಚ್. ಹನುಮಂತಪ್ಪ ಸ್ಮಾರಕ ದತ್ತಿ: 'ರಾಜಾ ರಾಮ್‌ಮೋಹನ್‌ರಾಯ್ ಅವರ ಚಿಂತನೆಗಳ ಪ್ರಸ್ತುತತೆ' ಉಪನ್ಯಾಸ: ಎಂ.ಎಸ್. ದುರ್ಗಾಪ್ರವೀಣ, ಅಧ್ಯಕ್ಷತೆ: ವೂಡೇ ಪಿ. ಕೃಷ್ಣ, ಉಪಸ್ಥಿತಿ: ಡಬ್ಲ್ಯು.ಡಿ. ಅಶೋಕ್, ಆಯೋಜನೆ: ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಅಧ್ಯಯನ ಕೇಂದ್ರ ಶೇಷಾದ್ರಿಪುರಂ ಸಂಜೆ ಕಾಲೇಜು, ಸ್ಥಳ: ಗಾಂಧಿ ಭವನ, ಕುಮಾರಕೃಪಾ ರಸ್ತೆ, ಸಂಜೆ 4



ವೂಡೇ ಪಿ. ಕೃಷ್ಣ

## ಉದಯವಾಣಿ

ಮಂಗಳವಾರ, ಡಿಸೆಂಬರ್ 24, 2024

• ಗಾಂಧೀ ಶಾಂತಿ ಪ್ರತಿಷ್ಠಾನ: 'ರಾಜಾ ರಾಮ್ ಮೋಹನ್ ರಾಯ್ ಅವರ ಚಿಂತನೆಗಳ ಪ್ರಸ್ತುತತೆ' ವಿಷಯ ಕುರಿತು ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮ. ಮುಖ್ಯ ಅತಿಥಿಗಳು: ಸಹಪ್ರಾಧ್ಯಾಪಕ ಡಾ. ಎಂ.ಎಸ್. ದುರ್ಗಾಪ್ರವೀಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ದತ್ತಿ ದಾನಿಗಳ ಪ್ರತಿನಿಧಿ ಡಬ್ಲ್ಯೂ.ಡಿ. ಅಶೋಕ್. ಸ್ಥಳ: ಬಾಪೂ ಸಭಾಂಗಣ, ಗಾಂಧೀ ಭವನ, ಕುಮಾರಪಾರ್ಕ್ ಪೂರ್ವ. ಸಂಜೆ 4ರಿಂದ.

## DECCAN HERALD

Tuesday
December 24, 2024

**Gandhi Peace Foundation, Karnataka Gandhi Memorial Fund, Centre for Gandhian Studies and Seshadripuram Evening College:** W H Hanumanthappa Memorial Endowment Lecture on 'Relevance of Raja Rammohan Roy's Thoughts' Lecture: MS Durgapraveena, chaired by Wooday P Krishna and WD Ashok participate, Gandhi Bhavan, Kumara Krupa Road, 4 pm.

ಪ್ರತಿನಿಧಿ

PAGE_08
18 Dec 2024

# ಆಳ್ವಾಸ್‌ನಲ್ಲಿ ಗಾಂಧಿ ವಿಚಾರ ಶಿಬಿರ



ಮೂಡುಬಿದಿರೆ: ದ್ವೇಷಿಸುವವರನ್ನು ಪ್ರೀತಿಸುವ, ಸಮಾಜದಿಂದ ಹೊರಗುಳಿದವರನ್ನು ಒಟ್ಟುಗೂಡಿಸುವ, ಕ್ಷಮಿಸುವ, ತಪ್ಪನ್ನು ಒಪ್ಪಿಕೊಳ್ಳುವ ಗುಣ ಹಾಗೂ ಸರಳತೆ ಈ 5 ಆದರ್ಶ ಗುಣಗಳಿಂದ ವಿಶ್ವಕ್ಕೆ ನಾಯಕನೆನಿಸಿಕೊಂಡವರು ಮಹಾತ್ಮ ಗಾಂಧೀಜಿ ಎಂದು ಬೆಂಗಳೂರು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ.ಡಾ.ವೂಡೇ ಪಿ.ಕೃಷ್ಣ ಹೇಳಿದರು.

ಆಳ್ವಾಸ್ ಕಾಲೇಜಿನ ಕನ್ನಡ ವಿಭಾಗ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತ ಆಶ್ರಯದಲ್ಲಿ 'ಮಹಾತ್ಮರನ್ನು ಅರ್ಥ ಮಾಡಿಕೊಳ್ಳಲು ಕೆಲವು ಪ್ರಶ್ನೆಗಳು' ಎಂಬ ವಿಷಯದ ಕುರಿತು ಕುವೆಂಪು ಸಭಾಂಗಣದಲ್ಲಿ ಎರಡು ದಿನಗಳ ಕಾಲ ನಡೆಯುವ ಗಾಂಧಿ ವಿಚಾರ ಶಿಬಿರ ಉದ್ಘಾಟಿಸಿ ಮಾತನಾಡಿದರು.

▶ ಆದರ್ಶದ ಗುಣಗಳನ್ನು ಮೈಗೂಡಿಸಿಕೊಂಡಿದ್ದವರು ಮಹಾತ್ಮ ಗಾಂಧೀಜಿ

ಭಾರತದ ನಿಜವಾದ ಶಕ್ತಿ ಆಧ್ಯಾತ್ಮ. ಆಧ್ಯಾತ್ಮವನ್ನು ರಾಜಕೀಯ ಬೆಳವಣಿಗೆ ಬಳಸಿಕೊಂಡು ಬಹುಜನರನ್ನು ಸಂಘಟಿಸಿ ದೇಶವನ್ನು ರೂಪಿಸಿದ ನಾಯಕ ಗಾಂಧೀಜಿ. ಇಂದು ನಮ್ಮ ದೇಶ ಉಳಿಯಬೇಕಾದರೆ ಮತ್ತು ಬೆಳೆಯಬೇಕಾದರೆ ಗಾಂಧಿ ಯುವ ಮನಸ್ಸರನ್ನು ಸಿದ್ಧ ಪಡಿಸಬೇಕಾಗಿದೆ ಎಂದ ಅವರು ಗಾಂಧಿ ಅವರನ್ನು ಅನುಕರಿಸುವ ಅವಶ್ಯಕತೆಯಿಲ್ಲ ಅನುಸರಿಸಿದರೆ ಸಾಕು. ಅವರ ತತ್ವಾದರ್ಶಗಳನ್ನು ಬದುಕಿನಲ್ಲಿ ಮೈಗೂಡಿಸಿಕೊಳ್ಳುವ ಪ್ರಯತ್ನ ಮಾಡಿಕೊಂಡರೆ ಅದೇ ಆದರ್ಶ ಎಂದರು.

ಆಳ್ವಾಸ್ ಶಿಕ್ಷಣ ಪ್ರತಿಷ್ಠಾನದ ಅಧ್ಯಕ್ಷ ಡಾ.ಎಂ ಮೋಹನ್ ಆಳ್ವ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿ, ರಾಜಕೀಯದಲ್ಲಿದ್ದುಕೊಂಡು ಅಧ್ಯಾತ್ಮಕ್ಕೂ ಒತ್ತು ನೀಡಿದವರು ಮಹಾತ್ಮರು. ಅವರ ಅಹಿಂಸೆ, ಸತ್ಯಾಗ್ರಹ ಹಾಗೂ ಸರಳತೆ ಎಂಬ ಮೂಲಮಂತ್ರಗಳನ್ನು ಅರ್ಥೈಸಿಕೊಂಡು ನಾವು ಅದನ್ನು ಅನುಸರಿಸಿದರೆ ಜಗತ್ತಿನಲ್ಲಿ ಯಾವುದೇ ಯುದ್ಧ, ಭ್ರಷ್ಟಾಚಾರ, ಅಥವಾ ಪರಿಸರ ಮಾಲಿನ್ಯವಾಗಲಿ ಸಂಭವಿಸುವುದಿಲ್ಲ. ಮಹಾತ್ಮರು ಅತೀ ಕಡಿಮೆ ಪದಗಳಲ್ಲಿ ದೊಡ್ಡ ಅರ್ಥವನ್ನು ಹುದುಗಿಸಿಟ್ಟಿದ್ದಾರೆ ಇದನ್ನು ಅರ್ಥ ಮಾಡಿಕೊಳ್ಳಬೇಕಾದದು ನಮ್ಮ ಸಾಮರ್ಥ್ಯ ಮತ್ತು ವಿವೇಚನೆಗೆ ಬಿಟ್ಟದ್ದು ಎಂದರು.

ಪ್ರಸಿದ್ಧ ಕವಯತ್ರಿ ಸವಿತಾ ನಾಗಭೂಷಣ್ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಆಳ್ವಾಸ್ ಕಾಲೇಜು ಪ್ರಾಂಶುಪಾಲ ಡಾ.ಕುರಿಯನ್ ಉಪಸ್ಥಿತರಿದ್ದರು. ವಿಚಾರ ಶಿಬಿರದ ಸಂಘಟನಾ ಕಾರ್ಯದರ್ಶಿ ಡಾ.ಯೋಗೀಶ್ ಕೈರೋಡಿ ಸ್ವಾಗತಿಸಿದರು. ಮಾಧವಿ ಕಾರ್ಯಕ್ರಮ ನಿರೂಪಿಸಿದರು.

ವಿಶ್ವವಾರಿಧಿ

Vishwa Vaaridhi
18 Dec 2024 - Page 5

# ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು, ಸಂಸ್ಕಾರ ಅಗತ್ಯ: ವೂಡೆ ಪಿ.ಕೃಷ್ಣ

ವಿಶ್ವ ವಾರಿಧಿ | ಬ್ಯಾಟರಾಯನಪುರ

ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು, ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಹೇಳುವ ಸಂಸ್ಕಾರ ಕೂಡ ಅಗತ್ಯ ಎಂದು ದೇವಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೆ ಪಿ.ಕೃಷ್ಣ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸ್ಪಂದನ್ ದೀಪ್ ಫೌಂಡೇಶನ್‌ನ ನಾಲ್ಕನೆಯ ವಾರ್ಷಿಕೋತ್ಸವದ ಪ್ರಯುಕ್ತ ಬ್ಯಾಟರಾಯನಪುರ ಕ್ಷೇತ್ರದ ಸೊಣ್ಣಪ್ಪನಹಳ್ಳಿಯಲ್ಲಿ ಭಾನುವಾರ ಏರ್ಪಡಿಸಿದ್ದ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತ ಬೈಸಿಕಲ್ ವಿತರಣೆ ಮತ್ತು ವಿಕಲಚೇತನರಿಗೆ ವ್ಹೀಲ್ ಚೇರ್ ವಿತರಣೆ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಪಾಲ್ಗೊಂಡು ಮಾತನಾಡಿದ ಅವರು, 'ಬದುಕು ರೂಪಿಸಿಕೊಳ್ಳಲು ಶಿಕ್ಷಣ ಅಗತ್ಯ ಎಂಬುದು ಒಪ್ಪಿತವಾದ ಮಾತು ಆದರೆ ನೈತಿಕ ಮೌಲ್ಯಗಳು, ಸಂಸ್ಕಾರ, ಸೇವಾಮನೋಭಾವ ರೂಢಿಸಿಕೊಳ್ಳದ ಮಕ್ಕಳ ಶಿಕ್ಷಣ ನಿರರ್ಥಕವಾಗುತ್ತದೆ, ಈ ದಿಸೆಯಲ್ಲಿ ಮಕ್ಕಳು ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು ಮತ್ತು ಸಂಸ್ಕಾರವನ್ನು ಸಹ ಕಲಿಯಬೇಕು. ಸರ್ಕಾರಿ ಶಾಲಾ ಮಕ್ಕಳ ಹಿತಚಿಂತನೆಯನ್ನು ಗಮನದಲ್ಲಿ ಇಟ್ಟುಕೊಂಡು ಸ್ಪಂದನ್ ದೀಪ್ ಫೌಂಡೇಷನ್ ಕೈಗೊಂಡಿರುವ ಸೇವಾ ಕಾರ್ಯ ಶ್ಲಾಘನೀಯವಾದುದು ಎಂದರು.



ಕಾರ್ಯಕ್ರಮ ಉದ್ದೇಶಿಸಿ ಜ್ಞಾನಜ್ಯೋತಿ ಶಾಲಾ ಆಡಳಿತ ಮಂಡಳಿ ಕಾರ್ಯದರ್ಶಿ ಬಿ.ನಾಗರಾಜ್ ಬಾಬು ಮಾತನಾಡಿ 'ಸ್ಪಂದನ್ ದೀಪ್ ಫೌಂಡೇಶನ್' ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಅವರ ಸೇವಾ ಮನೋಭಾವ ಸಮಾಜಕ್ಕೆ ಮಾದರಿ ಆಗುವಂತಹದ್ದು, ಸ್ವತಃ ತಮಗೆ ಕಣ್ಣಿಲ್ಲದಿದ್ದರೂ ಸಹ ಸಮಾಜಕ್ಕೆ ಕಣ್ಣಾಗಿ, ಬಡಮಕ್ಕಳು ಮತ್ತು ಅಸಹಾಯಕರಿಗೆ ಬೆಳಕು ನೀಡುತ್ತಿರುವ ಅವರ ಆದರ್ಶ ನಮಗೆ ಮಾದರಿಯಾಗಿದೆ. ಕಣ್ಣಿದ್ದೂ ಕುರುಡರಂತಿರುವ ಸಮಾಜದ ಅದೆಷ್ಟೋ ಮಂದಿಯ ಮಧ್ಯೆ ವಿಮಲ್ ಕುಮಾರ್ ಅವರು ಮೇರು ಶಿಖರದಂತೆ ನಿಲ್ಲುತ್ತಾರೆ. ಅವರ ಸೇವಾ ಕಾರ್ಯಗಳಿಗೆ ನಮ್ಮ ಬೆಂಬಲ ಮತ್ತು ಸಹಕಾರ ಸದಾ ಇರಲಿದೆ ಎಂದು ತಿಳಿಸಿದರು.

ಸ್ಪಂದನ್ ದೀಪ್ ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಮಾತನಾಡಿ 'ದಾನಿಗಳ ಸಹಕಾರ ಮತ್ತು ನೆರವಿನಿಂದಾಗಿ ಈ ಸೇವಾ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ. ಸ್ಪಂದನ್ ದೀಪ್ ಫೌಂಡೇಶನ್ ನ ಯಶಸ್ಸಿನ ಕೀರ್ತಿ ಸಹೃದಯಿ ದಾನಿಗಳು ಮತ್ತು ಸೇವಾಕರ್ತರಿಗೆ ಸಲ್ಲುತ್ತದೆ ಎಂದರು.

ಕಾರ್ಯಕ್ರಮದಲ್ಲಿ ಸೊಣ್ಣಪ್ಪನಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳ ಸರ್ಕಾರಿ ಶಾಲೆಗಳ ಸುಮಾರು15 ಬಡಮಕ್ಕಳಿಗೆ ಉಚಿತ ಬೈಸಿಕಲ್, 10 ಮಂದಿಗೆ ವೀಲ್ ಚೇರ್, 30 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ, ಕ್ರೀಡಾ ಕೂಟದಲ್ಲಿ ವಿಜೇತರಾದ ಮಕ್ಕಳಿಗೆ ಬಹುಮಾನ ವಿತರಣೆ, 15 ಜನ ಅಂಗವಿಕಲರಿಗೆ ಬ್ಲಾಂಕೆಟ್ ವಿತರಿಸಲಾಯಿತು.

ಇದೇ ಸಂದರ್ಭದಲ್ಲಿ ಕಾವೇರಿ ಚಿತ್ರಮಂದಿರದ ಮಾಲೀಕ ಎಲ್.ರವೀಂದ್ರ, ಕೆ.ಎನ್.ಫೌಂಡೇಶನ್‌ನ ಅಧ್ಯಕ್ಷ ರಾಜ್ ಕೃಷ್ಣಮೂರ್ತಿ, ಬೆಟ್ಟಹಲಸೂರು ಗ್ರಾ.ಪಂ. ಅಧ್ಯಕ್ಷೆ ಹೇಮಾವತಿ ನಾಗರಾಜ್ ಬಾಬು, ಮಾಜಿ ಅಧ್ಯಕ್ಷರಾದ ಬಿ.ಎಂ.ನಾಗೇಶ್, ಬಿ.ಎಸ್.ಅನಿಲ್ ಕುಮಾರ್, ಗ್ಲೋಬಲ್ ಅಕಾಡೆಮಿ ಆಫ್ ಟೆಕ್ನಾಲಜಿ ಯ ಪ್ರಾಧ್ಯಾಪಕ ಡಾ.ಮಲ್ಲಿಕಾ ಕೆ.ಎಸ್., ವೈದ್ಯರಾದ ಡಾ.ಸತ್ಯನಾರಾಯಣ ಎಚ್.ವಿ., ಹಸಿರೇ ಉಸಿರು ಟ್ರಸ್ಟ್ ನ ಸಂಸ್ಥಾಪಕ ಅಧ್ಯಕ್ಷ ಬೆಟ್ಟಹಲಸೂರು ಶ್ರೀನಿವಾಸಮೂರ್ತಿ, ನಾಗರಾಜ ಎಜ್ಯುಕೇಷನಲ್ ಟ್ರಸ್ಟ್ ನ ಕಾರ್ಯದರ್ಶಿ ಮುನಿಯಪ್ಪ, ಸೊಣ್ಣಪ್ಪನಹಳ್ಳಿ ಸರ್ಕಾರಿ ಮುಖ್ಯೋಪಾಧ್ಯಾಯರಾದ ವೆಂಕಟೇಗೌಡ ಸೇರಿದಂತೆ ಇನ್ನಿತರರಿದ್ದರು.

ಕನ್ನಡಪ್ರಭ

# ಮಕ್ಕಳಿಗೆ ನಮಸ್ಕಾರದ ಸಂಸ್ಕಾರ ಕಲಿಸಿ: ಕೃಷ್ಣ

## ಸ್ಪಂದನ್ ದೀಪ್ ಫೌಂಡೇಶನ್‌ನಿಂದ ಬಡ ಶಾಲಾ ಮಕ್ಕಳಿಗೆ ಉಚಿತ ಬೈಸಿಕಲ್ ವಿತರಣೆ

• ಕನ್ನಡಪ್ರಭ ವಾರ್ತೆ ಬ್ಯಾಟರಾಯನಪುರ

ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು, ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಹೇಳುವ ಸಂಸ್ಕಾರ ಕೂಡ ಅಗತ್ಯ ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೆ ಪಿ.ಕೃಷ್ಣ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಕ್ಷೇತ್ರದ ಸೊಣ್ಣಪ್ಪನಹಳ್ಳಿಯಲ್ಲಿ ಸ್ಪಂದನ್ ದೀಪ್ ಫೌಂಡೇಶನ್‌ನ 4ನೇ ವಾರ್ಷಿಕೋತ್ಸವದ ಪ್ರಯುಕ್ತ ಭಾನುವಾರ ಏರ್ಪಡಿಸಿದ್ದ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತ ಬೈಸಿಕಲ್ ಮತ್ತು ವಿಕಲಚೇತನರಿಗೆ ವ್ಹೀಲ್ ಚೇರ್ ವಿತರಣೆ ಕಾರ್ಯಕ್ರಮದಲ್ಲಿ ಮಾತನಾಡಿ, ಬದುಕು ರೂಪಿಸಿಕೊಳ್ಳಲು ಶಿಕ್ಷಣ ಅಗತ್ಯ ಎಂಬುದು ಒಪ್ಪಿತವಾದ ಮಾತು. ಆದರೆ ನೈತಿಕ ಮೌಲ್ಯಗಳು, ಸಂಸ್ಕಾರ, ಸೇವಾ ಮನೋಭಾವ ರೂಢಿಸಿಕೊಳ್ಳದ ಶುಷ್ಕ ಶಿಕ್ಷಣ ನಿರರ್ಥಕವಾಗುತ್ತದೆ. ಈ ದಿಸೆಯಲ್ಲಿ ಮಕ್ಕಳು ಶಿಕ್ಷಣದ ಜೊತೆಗೆ ನೈತಿಕ. ಮೌಲ್ಯಗಳು ಮತ್ತು ಸಂಸ್ಕಾರವನ್ನು ಸಹ ಕಲಿಯಬೇಕು. ಸರ್ಕಾರಿ ಶಾಲಾ ಮಕ್ಕಳ ಹಿತಚಿಂತನೆಯನ್ನು ಗಮನದಲ್ಲಿ ಇಟ್ಟುಕೊಂಡು ಸ್ಪಂದನ್ ದೀಪ್ ಫೌಂಡೇಶನ್ ಕೈಗೊಂಡಿರುವ ಸೇವಾ ಕಾರ್ಯ ಶ್ಲಾಘನೀಯವಾದುದು ಎಂದರು.

ಜ್ಞಾನಜ್ಯೋತಿ ಶಾಲಾ ಆಡಳಿತ ಮಂಡಳಿ ಕಾರ್ಯದರ್ಶಿ ಬಿ.ನಾಗರಾಜ್ ಬಾಬು ಮಾತನಾಡಿ, ಸ್ಪಂದನ್ ದೀಪ್ ಫೌಂಡೇಶನ್ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್‌ಅವರ ಸೇವಾ ಮನೋಭಾವ ಸಮಾಜಕ್ಕೆ ಮಾದರಿ ಆಗುವಂತಹದ್ದು, ಸ್ವತಃ ತಮಗೆ ಕಣ್ಣಿಲ್ಲದಿದ್ದರೂ ಸಹ ಸಮಾಜಕ್ಕೆ ಕಣ್ಣಾಗಿ, ಬಡಮಕ್ಕಳು ಮತ್ತು ಅಸಹಾಯಕರಿಗೆ ಬೆಳಕು ನೀಡುತ್ತಿರುವ ಅವರ ಸೇವಾ ಕಾರ್ಯ ನಮಗೆ ಮಾದರಿಯಾಗಿದೆ ಎಂದರು.



ಸೊಣ್ಣಪ್ಪನಹಳ್ಳಿಯಲ್ಲಿ ಸ್ಪಂದನ್ ದೀಪ್ ಫೌಂಡೇಶನ್ ವತಿಯಿಂದ ಅಂಗವಿಕಲರಿಗೆ ವ್ಹೀಲ್ ಚೇರ್ ವಿತರಿಸಲಾಯಿತು.

ಸ್ಪಂದನ್ ದೀಪ್ ಫೌಂಡೇಶನ್ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್‌ಮಾತನಾಡಿ, ದಾನಿಗಳ ಸಹಕಾರ ಮತ್ತು ನೆರವಿನಿಂದಾಗಿ ಈ ಸೇವಾ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ. ಸ್ಪಂದನ್ ದೀಪ್ ಫೌಂಡೇಶನ್‌ನ ಯಶಸ್ಸಿನ ಕೀರ್ತಿ ಸಹೃದಯಿ ದಾನಿಗಳು ಮತ್ತು ಸೇವಾಕರ್ತರಿಗೆ ಸಲ್ಲುತ್ತದೆ ಎಂದರು. ಈ ವೇಳೆ ಕಾವೇರಿ ಚಿತ್ರಮಂದಿರದ ಮಾಲೀಕ ಎಲ್.ರವೀಂದ್ರ, ಕೆ.ಎನ್ .ಫೌಂಡೇಶನ್ ಅಧ್ಯಕ್ಷ ರಾಜ್ ಕೃಷ್ಣಮೂರ್ತಿ, ಬೆಟ್ಟಹಲಸೂರು ಗ್ರಾ.ಪಂ.ಅಧ್ಯಕ್ಷೆ ಹೇಮಾವತಿ ನಾಗರಾಜ್ ಬಾಬು, ಮಾಜಿ ಅಧ್ಯಕ್ಷರಾದ ಬಿ.ಎಂ.ನಾಗೇಶ್, ಬಿ.ಎಸ್.ಅನಿಲ್ ಕುಮಾರ್, ಗ್ಲೋಬಲ್ ಅಕಾಡೆಮಿ ಆಫ್ ಟೆಕ್ನಾಲಜಿಯ ಪ್ರಾಧ್ಯಾಪಕಿ ಡಾ.ಕೆ.ಎಸ್.ಮಲ್ಲಿಕಾ, ವೈದ್ಯ ಡಾ.ಎಚ್.ಬಿ.ಸತ್ಯನಾರಾಯಣ, ಹಸಿರೇ ಉಸಿರು ಟ್ರಸ್ಟ್ ಸಂಸ್ಥಾಪಕ ಅಧ್ಯಕ್ಷ ಬೆಟ್ಟಹಲಸೂರು ಶ್ರೀನಿವಾಸಮೂರ್ತಿ, ನಾಗರಾಜ ಎಜ್ಯುಕೇಷನಲ್ ಟ್ರಸ್ಟ್ ಕಾರ್ಯದರ್ಶಿ ಮುನಿಯಪ್ಪ, ಸೊಣ್ಣಪ್ಪನಹಳ್ಳಿ ಸರ್ಕಾರಿ ಮುಖ್ಯೋಪಾಧ್ಯಾಯ ವೆಂಕಟೇಗೌಡ ಇದ್ದರು.

### ಪ್ರತಿಭಾ ಪುರಸ್ಕಾರ

ಸೊಣ್ಣಪ್ಪನಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳ ಸರ್ಕಾರಿ ಶಾಲೆಗಳ ಸುಮಾರು15 ಬಡ ಮಕ್ಕಳಿಗೆ ಉಚಿತ ಬೈಸಿಕಲ್, 10 ಮಂದಿಗೆ ವೀಲ್ ಚೇರ್, 30 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ, ಕ್ರೀಡಾ ಕೂಟದಲ್ಲಿ ವಿಜೇತರಾದ ಮಕ್ಕಳಿಗೆ ಬಹುಮಾನ ವಿತರಿಸಲಾಯಿತು.

ಸಮಯ ಮಿತ್ರ

Samaya Mithra Kannada Daily

# ಸ್ಪಂದನ್‌ದೀಪ್ ಫೌಂಡೇಶನ್ ವತಿಯಿಂದ ವಿವಿಧ ಸಲಕರಣೆಗಳ ವಿತರಣೆ :





ಬ್ಯಾಟರಾಯನಪುರ : ಸ್ಪಂದನ್‌ದೀಪ್ ಫೌಂಡೇಶನ್‌ನ ನಾಲ್ಕನೆಯ ವಾರ್ಷಿಕೋತ್ಸವದ ಪ್ರಯುಕ್ತ ಬ್ಯಾಟರಾಯನಪುರ ಕ್ಷೇತ್ರದ ಸೊಣ್ಣಪ್ಪನಹಳ್ಳಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಭಾನುವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಸೊಣ್ಣಪ್ಪನಹಳ್ಳಿ ಮತ್ತು ಸುತ್ತಮುತ್ತಲಿನ ಸರ್ಕಾರಿ ಶಾಲೆಗಳ ಮಕ್ಕಳಿಗೆ ಉಚಿತ ಬೈಸಿಕಲ್, ವಿಕಲಚೇತನರಿಗೆ ವ್ಹೀಲ್ ಚೇರ್, ಅಂಗವಿಕಲರಿಗೆ ಬ್ಲಾಂಕೆಟ್, ಎಸ್‌ಎಸ್‌ಎಲ್‌ಸಿ ಯಲ್ಲಿ ಅತ್ಯುತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ, ಕ್ರೀಡಾಕೂಟದಲ್ಲಿ ವಿಜೇತರಾದ ಮಕ್ಕಳಿಗೆ ಬಹುಮಾನ ವಿತರಣೆ ಸೇರಿದಂತೆ ವಿವಿಧ ಸಲಕರಣೆಗಳನ್ನು ವಿತರಿಸಲಾಯಿತು.

ಇದೇ ಸಂದರ್ಭದಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೆ ಪಿ.ಕೃಷ್ಣ, ಯಲಹಂಕದ ಜ್ಞಾನಜ್ಯೋತಿ ಶಾಲಾ ಆಡಳಿತ ಮಂಡಳಿಯ ಕಾರ್ಯದರ್ಶಿ ಬಿ.ನಾಗರಾಜ್‌ಬಾಬು, ಸ್ಪಂದನ್‌ದೀಪ್ ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್‌ಕುಮಾರ್, ನಗರದ ಕಾವೇರಿ ಚಿತ್ರಮಂದಿರದ ಮಾಲೀಕ ಎಲ್.ರವೀಂದ್ರ, ಕೆ.ಎಸ್.ಫೌಂಡೇಶನ್‌ನ ಅಧ್ಯಕ್ಷ ರಾಜ್ ಕೃಷ್ಣಮೂರ್ತಿ, ಬೆಟ್ಟಹಲಸೂರು ಗ್ರಾ.ಪಂ.ಅಧ್ಯಕ್ಷೆ ಹೇಮಾವತಿ ನಾಗರಾಜ್ ಬಾಬು, ಮಾಜಿ ಅಧ್ಯಕ್ಷರಾದ ಬಿ.ಎಂ.ನಾಗೇಶ್, ಬಿ.ಎಸ್. ಅನಿಲ್‌ಕುಮಾರ್, ಗ್ಲೋಬಲ್ ಅಕಾಡೆಮಿ ಆಫ್ ಟೆಕ್ನಾಲಜಿಯ ಗಣಿತಶಾಸ್ತ್ರ ಪ್ರಾಧ್ಯಾಪಕಿ ಡಾ.ಮಲ್ಲಿಕಾ, ವೈದ್ಯರಾದ ಡಾ.ಸತ್ಯನಾರಾಯಣ ಹೆಚ್.ಬಿ., ಹಸಿರೇ ಉಸಿರು ಟ್ರಸ್ಟ್‌ನ ಸಂಸ್ಥಾಪಕ ಅಧ್ಯಕ್ಷ ಬೆಟ್ಟಹಲಸೂರು ಶ್ರೀನಿವಾಸಮೂರ್ತಿ, ನಾಗರಾಜ ಎಜುಕೇಷನ್ ಟ್ರಸ್ಟ್‌ನ ಕಾರ್ಯದರ್ಶಿ ಮುನಿಯಪ್ಪ, ಐಟಿಸಿ ಸಿಎಸ್‌ಆರ್ ಲೀಡ್ ಎಸ್.ಎಂ.ವಿಜಯಸಿಂಗ್, ಸೊಣ್ಣಪ್ಪನಹಳ್ಳಿ ಸರ್ಕಾರಿ ಶಾಲೆಯ ಮುಖ್ಯ ಶಿಕ್ಷಕ ವೆಂಕಟೇಗೌಡ ಸೇರಿದಂತೆ ಇನ್ನಿತರರಿದ್ದರು.

ಉದಯಕಾಲ

# ಸ್ಪಂದನ್ ದೀಪ್ ಫೌಂಡೇಶನ್‌ನಿಂದ ವಿದ್ಯಾರ್ಥಿಗಳಿಗೆ ಬೈಸಿಕಲ್ ವಿತರಣೆ

## ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನೈತಿಕ ಮೌಲ್ಯ, ಸಂಸ್ಕಾರ ಅಗತ್ಯ: ನಾಡೋಜ ವೂಡೆ ಪಿ.ಕೃಷ್ಣ



ಉದಯಕಾಲ ನ್ಯೂಸ್ ಬ್ಯಾಟರಾಯನಪುರ: ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನೈತಿಕ ಮೌಲ್ಯ, ಸಂಸ್ಕಾರ ಕೂಡ ಅಗತ್ಯ ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೆ ಪಿ.ಕೃಷ್ಣ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸ್ಪಂದನ್ ದೀಪ್ ಫೌಂಡೇಶನ್‌ನ ನಾಲ್ಕನೆ ವಾರ್ಷಿಕೋತ್ಸವದ ಪ್ರಯುಕ್ತ ಬ್ಯಾಟರಾಯನಪುರ ಕ್ಷೇತ್ರದ ಸೋಣ್ಣೇನಹಳ್ಳಿಯಲ್ಲಿ ಏರ್ಪಡಿಸಿದ್ದ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತ ಬೈಸಿಕಲ್ ವಿತರಣೆ ಮತ್ತು ವಿಕಲಚೇತನರಿಗೆ ವ್ಹೀಲ್ ಚೇರ್ ವಿತರಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಬದುಕು ರೂಪಿಸಿಕೊಳ್ಳಲು ಶಿಕ್ಷಣ ಅಗತ್ಯ ಎಂಬುದು ಒಪ್ಪತಕ್ಕ ಮಾತು. ಆದರೆ ನೈತಿಕ ಮೌಲ್ಯ, ಸಂಸ್ಕಾರ, ಸೇವಾಮನೋಭಾವ ರೂಢಿಸಿಕೊಳ್ಳದ ಶುಷ್ಕ ಶಿಕ್ಷಣ ನಿರರ್ಥಕವಾಗುತ್ತದೆ. ಈ ದಿಸೆಯಲ್ಲಿ ಮಕ್ಕಳು ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು ಮತ್ತು ಸಂಸ್ಕಾರವನ್ನೂ ಕಲಿಯಬೇಕು. ಸರ್ಕಾರಿ ಶಾಲಾ ಮಕ್ಕಳ ಹಿತಚಿಂತನೆಯನ್ನು ಗಮನದಲ್ಲಿ ಇಟ್ಟುಕೊಂಡು ಸ್ಪಂದನ್ ದೀಪ್ ಫೌಂಡೇಶನ್ ಕೈಗೊಂಡಿರುವ ಸೇವಾ ಕಾರ್ಯ ಶ್ಲಾಘನೀಯವಾದುದು ಎಂದರು.

ಧ್ಯಾನಜ್ಯೋತಿ ಶಾಲಾ ಆಡಳಿತ ಮಂಡಳಿ ಕಾರ್ಯದರ್ಶಿ ಬಿ.ನಾಗರಾಜ್ ಬಾಬು ಮಾತನಾಡಿ, ಸ್ಪಂದನ್ ದೀಪ್ ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಅವರ ಸೇವಾ ಮನೋಭಾವ ಸಮಾಜಕ್ಕೆ ಮಾದರಿ ಆಗುವಂತಹದ್ದು. ಸ್ವತಃ ತಮಗೆ ಕಣ್ಣಿಲ್ಲದಿದ್ದರೂ ಸಹ ಸಮಾಜಕ್ಕೆ ಕಣ್ಣಾಗಿ, ಬಡಮಕ್ಕಳು ಮತ್ತು ಅಸಹಾಯಕರಿಗೆ ನೆರವು ನೀಡುತ್ತಿರುವ ಅವರ ಆದರ್ಶ ನಮಗೆ ಮಾದರಿಯಾಗಿದೆ. ಕಷ್ಟದಲ್ಲಿ ಕುರುಡರಂತಿರುವ ಸಮಾಜದ ಅದೆಷ್ಟೋ ಮಂದಿಯ ಮಧ್ಯೆ ವಿಮಲ್ ಕುಮಾರ್ ಅವರು ಮೇರು ವ್ಯಕ್ತಿಯಂತೆ ನಿಲ್ಲುತ್ತಾರೆ. ಅವರ ಸೇವಾ ಕಾರ್ಯಗಳಿಗೆ ನಮ್ಮ ಬೆಂಬಲ ಮತ್ತು ಸಹಕಾರ ಸದಾ ಇರಲಿದೆ ಎಂದು ತಿಳಿಸಿದರು.

ಸ್ಪಂದನ್ ದೀಪ್ ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಮಾತನಾಡಿ, ದಾನಿಗಳ ಸಹಕಾರ ಮತ್ತು ನೆರವಿನಿಂದಾಗಿ ಈ ಸೇವಾ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ. ಸ್ಪಂದನ್ ದೀಪ್ ಫೌಂಡೇಶನ್‌ನ ಯಶಸ್ಸಿನ ಕೀರ್ತಿ ಸಂಪೂರ್ಣವಾಗಿ ದಾನಿಗಳು ಮತ್ತು ಸೇವಾಕರ್ತರಿಗೆ ಸಲ್ಲುತ್ತದೆ ಎಂದರು.

ಕಾರ್ಯಕ್ರಮದಲ್ಲಿ ಸೋಣ್ಣೇನಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳ ಸರ್ಕಾರಿ ಶಾಲೆಗಳ ಸುಮಾರು 15 ಬಡಮಕ್ಕಳಿಗೆ ಉಚಿತ ಬೈಸಿಕಲ್, 10 ಮಂದಿಗೆ ವೀಲ್ ಚೇರ್, 30

[illegible]

ನಿಸರ್ಗ ಸಾರಥ್ಯ...
ಡೈಲಿ ನ್ಯೂಸ್

# ಶಿಕ್ಷಣದೊಂದಿಗೆ ನೈತಿಕ ಮೌಲ್ಯ ಅಗತ್ಯ

• ದಿ ಡೈಲಿ ನ್ಯೂಸ್ ವ್ಯಾಟರಾಯನಪುರ



ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನೈತಿಕ ಮೌಲ್ಯಗಳು, ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಹೇಳುವ ಸಂಸ್ಕಾರ ಕೂಡ ಅಗತ್ಯ ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೆ ಪಿ.ಕೃಷ್ಣ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸ್ಪಂದನ್ ದೀಪ್ ಫೌಂಡೇಶನ್‌ನ ನಾಲ್ಕನೆಯ ವಾರ್ಷಿಕೋತ್ಸವದ ಪ್ರಯುಕ್ತ ಕ್ಷೇತ್ರದ ಸೊಣ್ಣಪ್ಪನಹಳ್ಳಿಯಲ್ಲಿ ಭಾನುವಾರ ಏರ್ಪಡಿಸಿದ್ದ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತ ಬೈಸಿಕಲ್ ವಿತರಣೆ ಮತ್ತು ವಿಕಲಚೇತನರಿಗೆ ವ್ಹೀಲ್ ಚೇರ್ ವಿತರಣೆ ಕಾರ್ಯಕ್ರಮದಲ್ಲಿ ಮಾತನಾಡಿದರು.

ಜ್ಞಾನಜ್ಯೋತಿ ಶಾಲಾ ಆಡಳಿತ ಮಂಡಳಿ ಕಾರ್ಯದರ್ಶಿ ಬಿ.ನಾಗರಾಜ್ ಬಾಬು ಮಾತನಾಡಿ 'ಸ್ಪಂದನ್ ದೀಪ್ ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಅವರ ಸೇವಾ ಮನೋಭಾವ ಮಾದರಿ ಆಗುವಂತಹದ್ದು, ಸ್ವತಃ ತಮಗೆ ಕಣ್ಣಿಲ್ಲದಿದ್ದರೂ ಸಮಾಜಕ್ಕೆ ಕಣ್ಣಾಗಿ, ಬಡಮಕ್ಕಳು ಮತ್ತು ಅಸಹಾಯಕರಿಗೆ ಬೆಳಕು ನೀಡುತ್ತಿರುವ ಅವರ ಆದರ್ಶ ನಮಗೆ ಮಾದರಿಯಾಗಿದೆ ಎಂದರು. ಫೌಂಡೇಶನ್‌ನ ವ್ಯವಸ್ಥಾಪಕ ಟ್ರಸ್ಟಿ ಎಂ.ವಿಮಲ್ ಕುಮಾರ್ ಮಾತನಾಡಿ 'ದಾನಿಗಳ ಸಹಕಾರ ಮತ್ತು ನೆರವಿನಿಂದಾಗಿ ಈ ಸೇವಾ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿದೆ ಎಂದರು. ಸರ್ಕಾರಿ ಶಾಲೆಯ ಸುಮಾರು 15 ಬಡಮಕ್ಕಳಿಗೆ ಉಚಿತ ಬೈಸಿಕಲ್, 10 ಮಂದಿಗೆ ವೀಲ್ ಚೇರ್, 30 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ, ವಿಜೇತರಿಗೆ ಬಹುಮಾನ, 15 ಜನ ಅಂಗವಿಕಲರಿಗೆ ಬ್ಲಾಂಕೆಟ್ ವಿತರಿಸಲಾಯಿತು. ಕಾವೇರಿ ಚಿತ್ರಮಂದಿರದ ಮಾಲೀಕ ಎಲ್.ರವೀಂದ್ರ, ರಾಜ್ ಕೃಷ್ಣಮೂರ್ತಿ, ಹೇಮಾವತಿ ನಾಗರಾಜ್ ಬಾಬು, ಬಿ.ಎಂ.ನಾಗೇಶ್, ಬಿ.ಎಸ್.ಅನಿಲ್ ಕುಮಾರ್, ಡಾ.ಮಲ್ಲಿಕಾ ಕೆ.ಎಸ್., ಡಾ.ಸತ್ಯನಾರಾಯಣ ಎಚ್.ಬಿ., ಬೆಟ್ಟಹಲಸೂರು ಶ್ರೀನಿವಾಸಮೂರ್ತಿ, ಮುನಿಯಪ್ಪ, ವೆಂಕಟೇಗೌಡ ಉಪಸ್ಥಿತರಿದ್ದರು.

> ಬದುಕು ರೂಪಿಸಿಕೊಳ್ಳಲು ಶಿಕ್ಷಣ ಅಗತ್ಯವಾದರೂ ನೈತಿಕ ಮೌಲ್ಯ, ಸಂಸ್ಕಾರ, ಸೇವಾಮನೋಭಾವ ರೂಢಿಸಿಕೊಳ್ಳದ ಶುಷ್ಕ ಶಿಕ್ಷಣ ನಿರರ್ಥಕ. ಸ್ಪಂದನ್ ದೀಪ್ ಫೌಂಡೇಶನ್ ಕೈಗೊಂಡಿರುವ ಸೇವಾ ಕಾರ್ಯ ಶ್ಲಾಘನೀಯ.
>
> -ವೂಡೆ ಪಿ.ಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ನಾಡೋಜ

ಬೆಂಗಳೂರು ಆವೃತ್ತಿ
ಡಿಸೆಂಬರ್ 17, 2024 ಪುಟ ಸಂಖ್ಯೆ 4
ನಡೆಸಲ್ಪಡುತ್ತಿದೆ: erelego.com

ಸಂಯುಕ್ತ ಕರ್ನಾಟಕ ಗುರುವಾರ 12 ಡಿಸೆಂಬರ್ 2024
ಬೆಂಗಳೂರು I BENGALURU

# ಸಾಹಿತ್ಯ ಬೆಳವಣಿಗೆಯಲ್ಲಿ ಗೊರುಚ ಪಾತ್ರ



ಬೆಂಗಳೂರು: ಜನಪದ ಸಾಹಿತ್ಯ ಬೆಳವಣಿಗೆಯಲ್ಲಿ ನಾಡೋಜ ಡಾ. ಗೊ.ರು ಚೆನ್ನಬಸಪ್ಪ ಅವರ ಪಾತ್ರ ಹಿರಿದು. ಇನ್ನೂ ಇವರ ಅಧ್ಯಕ್ಷತೆಯಲ್ಲಿ ನಡೆಯುವ ಕನ್ನಡ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲಿ ಎಂದು ಸಿದ್ದಗಂಗಾ ಮಠದ ಶ್ರೀ ಸಿದ್ದಲಿಂಗ ಮಹಾಸ್ವಾಮಿ ಆಶೀರ್ವಚನ ನೀಡಿದರು.

ಮಂಡ್ಯದಲ್ಲಿ ನಡೆಯಲಿರುವ ಅಖಿಲ ಭಾರತ 87 ನೇ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಸಮ್ಮೇಳನಾಧ್ಯಕ್ಷ ನಾಡೋಜ ಡಾ. ಗೊ.ರು ಚನ್ನಬಸಪ್ಪ ಅವರಿಗೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಇವರ ಸಂಯುಕ್ತಾಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಬುಧವಾರ ಆಯೋಜಿಸಿದ್ದ ಅಭಿನಂದನಾ ಸಮಾರಂಭವನ್ನು ಉದ್ದೇಶಿಸಿ ಮಾತನಾಡಿದರು.

ಗೊ.ರು.ಚ ಅವರು ತಮ್ಮ ವೃತ್ತಿ ಬದುಕಿನಲ್ಲಿ ಪ್ರಾಮಾಣಿಕ, ನಿಷ್ಠೆ, ಶುದ್ಧತೆಯಿಂದ ಕೆಲಸ ಮಾಡಿದ್ದಾರೆ. ಸ್ವತಂತ್ರ ಪೂರ್ವದಿಂದ ಹೋರಾಟ ಮಾಡಿ ಸ್ವಾತಂತ್ರ್ಯ ನಂತರವು ಅನೇಕ ಸಂಸ್ಥೆಗಳಲ್ಲಿ ಕೆಲಸ ಮಾಡಿ ಕನ್ನಡನಾಡಿನ ಜನತೆಯ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ ಎಂದು ತಿಳಿಸಿದರು.

ಅಭಿನಂದನೆ ಸ್ವೀಕರಿಸಿ ಮಾತನಾಡಿದ ಡಾ. ಗೊ.ರು ಚೆನ್ನಬಸಪ್ಪ ನನಗಾಗಿರುವ ವಯಸ್ಸಿಗೆ ಯಾವುದೇ ಜವಾಬ್ದಾರಿಯನ್ನು ನಿಭಾಯಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಕನ್ನಡ ಸಾಹಿತ್ಯ ಪರಿಷತ್ತು ನನ್ನ ಮಾತೃ ಸಂಸ್ಥೆ, ಈ ಸಂಸ್ಥೆಯ ಪ್ರತಿನಿಧಿಗಳು ಒಗ್ಗೂಡಿ ಸರ್ವಾನುಮತದಿಂದ ನನಗೆ ಆಯ್ಕೆ ಮಾಡಿರುವುದಕ್ಕೆ ಈ ಅವಕಾಶವನ್ನು ತಿರಸ್ಕರಿಸುವುದಕ್ಕೆ ಸಾಧ್ಯವಾಗಲಿಲ್ಲ. ನಿಮ್ಮ ಪ್ರೀತಿ ವಿಶ್ವಾಸಕ್ಕೆ ಮೂಕವಿಸ್ಮಿತನಾಗಿದ್ದೇನೆ ಎಂದು ಭಾವುಕರಾದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇಪಿ ಕೃಷ್ಣ ಮಾತನಾಡಿ ಸಾಂಸ್ಕೃತಿಕ ಜಗತ್ತಿನಲ್ಲಿ ಆಗುತ್ತಿರುವ ಅರಾಜಕತೆಯ ಸಂದರ್ಭದಲ್ಲಿ ಗೊರುಚ ಅವರಂತಹ ಮಹಾನ ವ್ಯಕ್ತಿ ನಮ್ಮಲ್ಲಿದ್ದಾರೆ ಎಂದರೆ ನಿಜಕ್ಕೂ ಹೆಮ್ಮೆಯ ಸಂಗತಿ. ಸಮಾಜದಲ್ಲಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ನಮ್ಮಲ್ಲಿ ಸ್ವಲ್ಪ ಮಟ್ಟಿಗೆ ಸಂವೇದನಾಶೀಲವನ್ನು ಬೆಳೆಸಬೇಕು ಎಂದು ಹೇಳಿದರು.

ಪ್ರಜಾವಾಣಿ
ಗುರುವಾರ • ಡಿಸೆಂಬರ್ 12, 2024



## ಸನ್ಮಾನ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬುಧವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 87ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ನಿಯೋಜಿತ ಸಮ್ಮೇಳನಾಧ್ಯಕ್ಷ ಗೊ.ರು. ಚನ್ನಬಸಪ್ಪ ಅವರನ್ನು ಸನ್ಮಾನಿಸಲಾಯಿತು. ವೂಡೇ ಪಿ. ಕೃಷ್ಣ, ರಾಣಿ ಸತೀಶ್, ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಸಿ. ಸೋಮಶೇಖರ್, ಸಿದ್ಧಲಿಂಗ ಸ್ವಾಮೀಜಿ ಹಾಗೂ ಕೆ.ವಿ. ನಾಗರಾಜಮೂರ್ತಿ ಹಾಜರಿದ್ದರು ಪ್ರಜಾವಾಣಿ ಚಿತ್ರ

ಜನದನಿಯ ಸಾರಥಿ
ವಾರ್ತಾ ಭಾರತಿ

Dec 12, 2024

# ಕನ್ನಡ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲಿ

## ಸಿದ್ದಲಿಂಗ ಸ್ವಾಮಿ



ಬೆಂಗಳೂರು, ಡಿ.11: ಜನಪದ ಸಾಹಿತ್ಯ ಬೆಳವಣಿಗೆಯಲ್ಲಿ ನಾಡೋಜ ಡಾ.ಗೊ.ರು. ಚನ್ನಬಸಪ್ಪ ಅವರ ಪಾತ್ರ ಹಿರಿದು. ಇವರ ಅಧ್ಯಕ್ಷತೆಯಲ್ಲಿ ನಡೆಯುವ ಕನ್ನಡ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲಿ ಎಂದು ಸಿದ್ದಗಂಗಾ ಮಠದ ಶ್ರೀಸಿದ್ದಲಿಂಗ ಮಹಾಸ್ವಾಮೀಜಿ ತಿಳಿಸಿದ್ದಾರೆ.

ಬುಧವಾರ ನಗರದ ಗಾಂಧಿ ಭವನದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಇವರ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿದ್ದ ಮಂಡ್ಯದಲ್ಲಿ ನಡೆಯಲಿರುವ ಅಖಿಲ ಭಾರತ 87ನೇ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಸಮ್ಮೇಳನಾಧ್ಯಕ್ಷ ನಾಡೋಜ ಡಾ.ಗೊ.ರು.ಚನ್ನಬಸಪ್ಪ ಅವರಿಗೆ ಅಭಿನಂದನಾ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಗೊ.ರು.ಚ ತಮ್ಮ ವೃತ್ತಿ ಬದುಕಿನಲ್ಲಿ ಪ್ರಾಮಾಣಿಕ, ನಿಷ್ಠೆ ಬದ್ಧತೆಯಿಂದ ಕೆಲಸ ಮಾಡಿದ್ದಾರೆ. ಸ್ವತಂತ್ರ ಪೂರ್ವದಿಂದ ಹೋರಾಟ ಮಾಡಿ ಸ್ವಾತಂತ್ರ್ಯ ನಂತರವೂ ಅನೇಕ ಸಂಸ್ಥೆಗಳಲ್ಲಿ ಕೆಲಸ ಮಾಡಿ ಕನ್ನಡನಾಡಿನ ಜನತೆಯ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ ಎಂದು ಹೇಳಿದರು.

ಅಭಿನಂದನೆ ಸ್ವೀಕರಿಸಿ ಮಾತನಾಡಿದ ಡಾ.ಗೊ.ರು.ಚನ್ನಬಸಪ್ಪ, ನನಗಾಗಿರುವ ವಯಸ್ಸಿಗೆ ಯಾವುದೇ ಜವಾಬ್ದಾರಿಯನ್ನು ನಿಭಾಯಿಸಲು ಸಾಧ್ಯವಾಗುತ್ತಿರಲಿಲ್ಲ, ಆದರೆ ಕನ್ನಡ ಸಾಹಿತ್ಯ ಪರಿಷತ್ತು ನನ್ನ ಮಾತೃ ಸಂಸ್ಥೆ ಈ ಸಂಸ್ಥೆಯ ಪ್ರತಿನಿಧಿಗಳು ಒಗ್ಗೂಡಿ ಸರ್ವಾನುಮತದಿಂದ ನನಗೆ ಆಯ್ಕೆ ಮಾಡಿರುವುದಕ್ಕೆ ಈ ಅವಕಾಶವನ್ನು ತಿರಸ್ಕರಿಸುವುದಕ್ಕೆ ಸಾಧ್ಯವಾಗಲಿಲ್ಲ. ನಿಮ್ಮ ಪ್ರೀತಿ ವಿಶ್ವಾಸಕ್ಕೆ ಮೂಕವಿಸ್ಮಿತನಾಗಿದ್ದೇನೆ ಎಂದು ಭಾವುಕರಾದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ ಸಾಂಸ್ಕೃತಿಕ ಜಗತ್ತಿನಲ್ಲಿ ಆಗುತ್ತಿರುವ ಅರಾಜಕತೆಯ ಸಂದರ್ಭದಲ್ಲಿ ಗೊರುಚ ಅವರಂತಹ ಮಹಾನ ವ್ಯಕ್ತಿ ನಮ್ಮಲ್ಲಿದ್ದಾರೆ ಎಂದರೆ ನಿಜಕ್ಕೂ ಹೆಮ್ಮೆಯ ಸಂಗತಿ. ಸಮಾಜದಲ್ಲಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ನಮ್ಮಲ್ಲಿ ಸ್ವಲ್ಪ ಮಟ್ಟಿಗೆ ಸಂವೇದನಾಶೀಲವನ್ನು ಬೆಳೆಸಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್‌ನ ಅಧ್ಯಕ್ಷ ಡಾ.ಸಿ.ಸೋಮಶೇಖರ, ಸುತ್ತೂರು ಕ್ಷೇತ್ರದ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮೀಜಿ, ನಾಟಕ ಅಕಾಡಮಿ ಅಧ್ಯಕ್ಷ ಕೆ.ವಿ.ನಾಗರಾಜಮೂರ್ತಿ ಸೇರಿದಂತೆ ಸಾಹಿತ್ಯಾಸಕ್ತರು, ವಿದ್ಯಾರ್ಥಿಗಳು ಭಾಗಿಯಾಗಿದ್ದರು.

ಕನ್ನಡಪ್ರಭ
ಗುರುವಾರ 12.12.2024



# ಸರ್ವಾನುಮತದಿಂದ ಆರಿಸಿದ್ದರಿಂದ ಸಮ್ಮೇಳನಾಧ್ಯಕ್ಷತೆಗೆ ಒಪ್ಪಿದೆ: ಗೊರುಚ

## ವಯಸ್ಸಾಗಿದ್ದರೂ ತಿರಸ್ಕರಿಸಲಾಗಲಿಲ್ಲ | ಪ್ರೀತಿ-ವಿಶ್ವಾಸಕ್ಕೆ ನಾನು ಮೂಕವಿಸ್ಮಿತ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮಂಡ್ಯದಲ್ಲಿ ನಡೆವ 87ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ತಮ್ಮನ್ನು ಕನ್ನಡ ಸಾಹಿತ್ಯ ಪರಿಷತ್‌ನವರು ಸರ್ವಾನುಮತದಿಂದ ಆಯ್ಕೆ ಮಾಡಿದ್ದಾರೆ. ಆದ್ದರಿಂದ ವಯಸ್ಸಾಗಿದ್ದರೂ ಇದನ್ನು ತಿರಸ್ಕರಿಸಲು ಸಾಧ್ಯವಾಗಲಿಲ್ಲ ಎಂದು ನಾಡೋಜ ಡಾ.ಗೊ.ರು.ಚನ್ನಬಸಪ್ಪ ಹೇಳಿದ್ದಾರೆ.

ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ನಿಯೋಜನೆಯಾಗಿರುವ ಹಿನ್ನೆಲೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿ ಬುಧವಾರ ಆಯೋಜಿಸಿದ್ದ ಸಮಾರಂಭದಲ್ಲಿ ಅಭಿನಂದನೆ ಸ್ವೀಕರಿಸಿ ಅವರು ಮಾತನಾಡಿದರು.

ವಯಸ್ಸಿನ ಕಾರಣದಿಂದಾಗಿ ನನಗೆ ಯಾವುದೇ ಜವಾಬ್ದಾರಿಗಳನ್ನು ನಿಭಾಯಿಸಲು ಆಗುತ್ತಿರಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ನನ್ನ ಮಾತೃ ಸಂಸ್ಥೆಯಾಗಿದ್ದು ಅವರೆಲ್ಲರೂ ಒಗ್ಗೂಡಿ ಸರ್ವಾನುಮತದಿಂದ ನನ್ನನ್ನು ಆಯ್ಕೆ ಮಾಡಿದ್ದರಿಂದ ಸಮ್ಮೇಳನದ ಅಧ್ಯಕ್ಷನಾಗುವ ಆಹ್ವಾನವನ್ನು ತಿರಸ್ಕರಿಸಲು ಆಗಲಿಲ್ಲ. ಅವರ ಪ್ರೀತಿ-ವಿಶ್ವಾಸಕ್ಕೆ ಮೂಕವಿಸ್ಮಿತನಾಗಿದ್ದೇನೆ ಎಂದು ಬಣ್ಣಿಸಿದರು.

**ಸಮ್ಮೇಳನ ಯಶಸ್ವಿಯಾಗಲಿ:** ಸಮಾರಂಭದ ದಿವ್ಯ ಸಾನಿಧ್ಯ ವಹಿಸಿದ್ದ ತುಮಕೂರಿನ ಸಿದ್ಧಗಂಗಾ ಮಠದ ಸಿದ್ದಲಿಂಗ ಸ್ವಾಮೀಜಿ ಮಾತನಾಡಿ, ಗೊ.ರು. ಚನ್ನಬಸಪ್ಪ ಅವರು ತಾವು ವಹಿಸಿಕೊಂಡ ಕೆಲಸವನ್ನು ಜೀವನದುದ್ದಕ್ಕೂ, ನಿಷ್ಠೆ, ಪ್ರಾಮಾಣಿಕತೆಯಿಂದ ನಿರ್ವಹಿಸಿದ್ದಾರೆ. ಕನ್ನಡ ನಾಡಿನ ಜನತೆಯ ಪ್ರೀತಿ-ವಿಶ್ವಾಸಕ್ಕೆ ಭಾಜನರಾಗಿದ್ದಾರೆ. ಇವರ ಅಧ್ಯಕ್ಷತೆಯಲ್ಲಿ ಮಂಡ್ಯದಲ್ಲಿ ನಡೆಯಲಿರುವ ಸಾಹಿತ್ಯ ಸಮ್ಮೇಳನವು ಯಶಸ್ವಿಯಾಗಲಿ ಎಂದು ಹಾರೈಸಿದರು.



ಮಂಡ್ಯದಲ್ಲಿ ನಡೆಯಲಿರುವ 87ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವ ನಾಡೋಜ ಡಾ.ಗೊ.ರು.ಚನ್ನಬಸಪ್ಪ ಅವರನ್ನು ಗಾಂಧಿ ಭವನದಲ್ಲಿ ಅಭಿನಂದಿಸಲಾಯಿತು.

ಮಾಜಿ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರ ನಿಧನವು ನಾಡಿಗೆ ತುಂಬಲಾರದ ನಷ್ಟ ಉಂಟು ಮಾಡಿದೆ ಎಂದು ಇದೇ ಸಂದರ್ಭದಲ್ಲಿ ಸಂತಾಪ ಸೂಚಿಸಿದ ಗಣ್ಯರು, ಕೃಷ್ಣ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.

ಸುತ್ತೂರು ಮಠದ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿ, ಮಾಜಿ ಸಚಿವೆ ರಾಣಿ ಸತೀಶ್, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಸಿ.ಸೋಮಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷ ಕೆ.ವಿ.ನಾಗರಾಜಮೂರ್ತಿ ಹಾಜರಿದ್ದರು.

ಸಂಯುಕ್ತ ಕರ್ನಾಟಕ

ಗುರುವಾರ 5 ಡಿಸೆಂಬರ್ 2024

ಬೆಂಗಳೂರು । BENGALURU

## ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಲೋಕಾರ್ಪಣೆ । ಮೆಚ್ಚುಗೆಯ ಮಹಾಪೂರ

# ಉತ್ತಮರ ಆಯ್ಕೆಗೆ ಸ್ವಾಮೀಜಿಗಳು ಕೈಜೋಡಿಸಲಿ

ಗದಗ: ಉನ್ನತ ವ್ಯಾಸಂಗ ಮಾಡಿದ್ದರೂ ಅಪ್ಪಟ ಗ್ರಾಮೀಣ ಸೊಗಡು ಮೈಗೂಡಿಸಿಕೊಂಡು ಗ್ರಾಮೀಣಾಭಿವೃದ್ಧಿ, ಪಂಚಾಯತರಾಜ್ ಬಗ್ಗೆಯೇ ಸದಾಕಾಲ ಚಿಂತನೆ ನಡೆಸುವ ಹಿರಿಯ ಸಹಕಾರಿ ಧುರೀಣ, ಮಾಜಿ ಶಾಸಕ ಡಿ.ಆರ್. ಪಾಟೀಲ ಹಳೆಯ ಪರಂಪರೆಯ ಕೊನೆಯ ಕೊಂಡಿ ಎಂದು ಕಂದಾಯ ಸಚಿವ ಕೃಷ್ಣ ಭೈರೇಗೌಡ ಬಣ್ಣಿಸಿದರು.

ಜಗದ್ಗುರು ತೋಂಟದಾರ್ಯ ಮಠದಲ್ಲಿ ಡಾ.ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆ ಪ್ರಕಟಿಸಿದ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಲೋಕಾರ್ಪಣೆ ಸಮಾರಂಭದಲ್ಲಿ ಮಾತನಾಡಿದರು. ಡಿ.ಆರ್. ಪಾಟೀಲ ಅವರು ನಾಲ್ಕು ಬಾರಿ ವಿಧಾನಸಭೆಗೆ ಆಯ್ಕೆಯಾಗಿ ಶಾಸಕರಾಗಿದ್ದರೂ ಅವರೆಂದು ಯಾವುದೇ ಹಮ್ಮು ಬಿಮ್ಮು ತೋರಿದವರಲ್ಲ; ಅವರು ಸಾಮಾನ್ಯರಲ್ಲಿ ಅಸಾಮಾನ್ಯ ವ್ಯಕ್ತಿಯಾಗಿದ್ದಾರೆ. ಲಕ್ಷಾಂತರ ಜನರಲ್ಲಿ ಎದ್ದು ಕಾಣುವ ಗುಣ ಹೊಂದಿದ್ದಾರೆಂದು ಬಣ್ಣಿಸಿದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ ಡಿ.ಆರ್. ಪಾಟೀಲ ರಾಜಕೀಯ ಅಜಾತಶತ್ರುವಾಗಿದ್ದಾರೆ. ಗ್ರಾಮೀಣಾಭಿವೃದ್ಧಿ ಹಾಗೂ



ತೋಂಟದಾರ್ಯ ಮಠದಲ್ಲಿ ಜರುಗಿದ ಸಮಾರಂಭದಲ್ಲಿ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥವನ್ನು ಕಂದಾಯ ಸಚಿವ ಕೃಷ್ಣ ಭೈರೇಗೌಡ, ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಕಾನೂನು ಸಚಿವ ಡಾ.ಎಚ್.ಕೆ. ಪಾಟೀಲ ಲೋಕಾರ್ಪಣೆ ಮಾಡಿದರು.

ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ಅಪಾರ ಬದ್ಧತೆ ಹೊಂದಿದ್ದಾರೆ. ತಾವು ಗ್ರಾಮೀಣಾಭಿವೃದ್ಧಿ ಸಚಿವರಾಗಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಗ್ರಾಮ ಪಂಚಾಯತಿಗಳಿಗೆ ನೇರ ಹಣ ಬರುವಂತಾಗಲು ಕಾರಣ ಡಿ.ಆರ್. ಪಾಟೀಲರಾಗಿದ್ದಾರೆ. ಇಂತಹ ಶ್ರೇಷ್ಠ ವ್ಯಕ್ತಿಗಳು ವಿಧಾನ ಮಂಡಳದಲ್ಲಿರುವದರಿಂದ ಶಾಸನ ಸಭೆಗಳ ಗೌರವ ಹೆಚ್ಚಲಿದೆ ಎಂದು ನುಡಿದರು.

ಮಾಜಿ ಶಾಸಕ ಡಿ.ಆರ್.ಪಾಟೀಲ ಮಾತನಾಡಿ, ರಾಜಕೀಯ ತಳಮಟ್ಟಕ್ಕೆ ಹೋಗಿದೆ. ಕಲುಷಿತ ರಾಜಕೀಯವನ್ನು ಸುಧಾರಿಸಲು ಸ್ವಾಮೀಜಿಗಳು ಸಮಾಜಕ್ಕೆ ಮಾರ್ಗದರ್ಶನ ನೀಡಬೇಕು. ರಾಜ್ಯದಲ್ಲಿನ ಎಲ್ಲ ಸ್ವಾಮೀಜಿಗಳನ್ನು ಒಗ್ಗೂಡಿ ಉತ್ತಮರು ಶಾಸನ ಸಭೆಗಳಿಗೆ ಆಯ್ಕೆಯಾಗುವಂತೆ ಮಾಡಬೇಕು. ಈ ನಿಟ್ಟಿನಲ್ಲಿ ತೋಂಟದ ಡಾ.ಸಿದ್ಧರಾಮ ಶ್ರೀಗಳು ನೇತೃತ್ವ ವಹಿಸಬೇಕು ಎಂದು ಮನವಿ ಮಾಡಿದರು.

ಶಿರಸಿಯ ಪ್ರಮೋದ ಹೆಗಡೆ ಮಾತನಾಡಿ

> “ ಬೆಳಗಾವಿಯಲ್ಲಿ ನಡೆಯುವ ಚಳಿಗಾಲದ ಅಧಿವೇಶನದಲ್ಲಿ ಪಂಚಾಯತರಾಜ್ ವಿಕೇಂದ್ರೀಕರಣ ಕಾನೂನು ಜಾರಿಗೆ ಆದೇಶಿಸಬೇಕು. ಈ ಬಗ್ಗೆ ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ವಿಧಾನಸಭೆ ಉಪಸಭಾಪತಿ ರುದ್ರಪ್ಪ ಲಮಾಣಿ ಮುಖ್ಯಮಂತ್ರಿಗಳ ಮೇಲೆ ಒತ್ತಡ ತರಬೇಕು.
>
> • -ಡಿ.ಆರ್.ಪಾಟೀಲ, ಮಾಜಿ ಶಾಸಕ

ಪಶ್ಚಿಮ ಘಟ್ಟವನ್ನು ಉಳಿಸಿದ ಕೀರ್ತಿ ದಿ.ಕೆ.ಎಚ್. ಪಾಟೀಲರಿಗೆ ಸಲ್ಲುತ್ತದೆ. ಡಿ.ಆರ್. ಪಾಟೀಲ ಕುಟುಂಬ ಸಜ್ಜನಿಕೆಗೆ ಸಾಕ್ಷಿಯಾಗಿದೆಯೆಂದು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ ಕೃಷ್ಣಾ, ಶಾಸಕ ಜಿ.ಎಸ್.ಪಾಟೀಲ, ವಿಧಾನ ಪರಿಷತ್ ಸದಸ್ಯ ಪ್ರೊ.ಎಸ್.ವಿ.ಸಂಕನೂರ, ಪ್ರೊ.ಐ.ಜಿ. ಸನದಿ. ವಿಧಾನಸಭಾ ಉಪಾಧ್ಯಕ್ಷ ರುದ್ರಪ್ಪ ಲಮಾಣಿ ಮಾತನಾಡಿದರು. ಗ್ರಂಥಕರ್ತ ಜಗನ್ನಾಥಸಿಂಗ್ ಜಮಾದಾರ, ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷ ಸಿ.ನಾರಾಯಣಸ್ವಾಮಿ ಪ್ರಾಸ್ತಾವಿಕವಾಗಿ ಮಾತನಾಡಿದರು.

ಅಧ್ಯಕ್ಷತೆ ವಹಿಸಿದ್ದ ಕಾನೂನು ಸಚಿವ ಡಾ.ಎಚ್.ಕೆ. ಪಾಟೀಲ ಮಾತನಾಡಿ, ಡಿ.ಆರ್.ಪಾಟೀಲ ಸರ್ವ ಜಾತಿ, ಧರ್ಮಗಳ ಜನತೆಯೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ. ಅವರು ಅರ್ಧ ಆಯುಷ್ಯ ತಮ್ಮ ತಂದೆ ದಿ.ಕೆ.ಎಚ್. ಪಾಟೀಲರ ಕನಸು ನನಸು ಮಾಡುವದರಲ್ಲಿಯೇ ಕಳೆದಿದ್ದಾರೆ. ತಾವು ಆರು ಬಾರಿ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾಗಲು ಡಿ.ಆರ್.ಪಾಟೀಲ ಕಾರಣವೆಂದು ಹೇಳಿದರು.

ಡಾ.ತೋಂಟದ ಸಿದ್ಧರಾಮ ಶ್ರೀಗಳು ಸಾನ್ನಿಧ್ಯ ವಹಿಸಿದ್ದರು. ರಾಮಕೃಷ್ಣ ಆಶ್ರಮದ ನಿರ್ಭಯಾನಂದ ಸ್ವಾಮೀಜಿ ಸಮ್ಮುಖ ವಹಿಸಿದ್ದರು.

ವೇದಿಕೆಯಲ್ಲಿ ಮಾಜಿ ಸಚಿವ ಎಸ್.ಎಸ್. ಪಾಟೀಲ, ಶಾಸಕ ಎನ್.ಎಚ್. ಕೋನರಡ್ಡಿ, ಮಾಜಿ ಶಾಸಕರಾದ ಬಿ.ಆರ್.ಯಾವಗಲ್, ಜಿ.ಎಸ್.ಗಡ್ಡದ್ದೇವರಮಠ, ರಾಮಣ್ಣ ಲಮಾಣಿ, ರಾಮಕೃಷ್ಣ ದೊಡ್ಡಮನಿ, ಪ್ರಾ.ಶಿವಾನಂದ ಪಟ್ಟಣಶೆಟ್ಟಿ, ಪ್ರೊ.ಕೆ.ಎಚ್. ಬೇಲೂರ ಮುಂತಾದವರಿದ್ದರು.

ಹೊಸದಿಗಂತ

ಗುರುವಾರ 5 ಡಿಸೆಂಬರ್ 2024

ಹುಬ್ಬಳ್ಳಿ

ರಾಜಕಾರಿಣಿ ಡಿ.ಆರ್. ಪಾಟೀಲ ಗ್ರಂಥ ಬಿಡುಗಡೆ | ಸಚಿವ ಬೈರೇಗೌಡ ಅಭಿಮತ

# ಪಾಟೀಲ ಕೊಡುಗೆ ಸ್ಮರಣೀಯ



> ಕಾಲ ಬದಲಾದರೂ ಅದಕ್ಕೆ ತಕ್ಕ ಬದಲಾಗದೆ ಉಳಿದಿರುವ ಸೇವಾಕಾರಣದ ಕೊನೆಯ ಕೊಂಡಿಯಾಗಿ, ನಮ್ಮ ಮುಂದೆ ಡಿ.ಆರ್. ಪಾಟೀಲರಿದ್ದಾರೆ. ರಾಜಕಾರಣ ಎಲ್ಲಿಗೆ ಬಂದಿದೆಯೆಂದರೇ ಇಂದು ವಿಧಾನ ಮಂಡಲದ ಒಳಗಡೆ ಡಿ.ಆರ್ ಪಾಟೀಲರ ಅವಶ್ಯಕತೆ ಇದೆ.
>
> ■ ಕೃಷ್ಣಬೈರೇಗೌಡ, ಕಂದಾಯ ಸಚಿವ

- ಡಾ.ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆಯಿಂದ ಪ್ರಕಟಿಸಿರುವ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಬಿಡುಗಡೆ
- ರಾಜಕೀಯದಲ್ಲಿ ರಾಜಕಾರಿಣಿ ಡಿ.ಆರ್. ಪಾಟೀಲ್ ಕೊಡುಗೆ ಸದಾ ಸ್ಮರಣೀಯ
- ಪ್ರಸ್ತುತ ರಾಜಕೀಯದಲ್ಲಿ ಡಿ.ಆರ್. ಪಾಟೀಲ ಆದರ್ಶ ರೂಢಿಗೆ ಸಚಿವ ಬೈರೆಗೌಡ ಸಲಹೆ

**ಗದಗ:** ಹಿಂದೆ ರಾಜಕಾರಣ ಎಂದರೆ ಸೇವಾ ಮನೋಭಾವನೆಯಾಗಿತ್ತು. ರಾಜಕಾರಣಕ್ಕೆ ಬರುವವರು ಬಹುತೇಕ ಸೇವಾ ಮನೋಭಾವದಿಂದಲೇ ಬರುತ್ತಿದ್ದರು. ರಾಜಕೀಯ ಎಂಬುದು ಸೇವೆಗೆ ಮತ್ತೊಂದು ದಾರಿಯಾಗಿತ್ತು. ಆದರೆ ಇಂದು ರಾಜಕಾರಣ, ಸೇವಾಕಾರಣ ಹೋಗಿ ಸ್ವಾರಾಣವಾಗಿದೆ. ಆ ಗುಣ ಬಹುತೇಕ ನಶಿಸಿ ಹೋಗಿದೆ ಎಂದು ಕಂದಾಯ ಸಚಿವ ಕೃಷ್ಣಬೈರೇಗೌಡ ಹೇಳಿದರು.

ನಗರದ ತೋಂಟದಾರ್ಯ ಮಠದ ಶಿವಾನುಭವ ಮಂಟಪದಲ್ಲಿ ನಡೆದ ಸಾಹಿತಿ ಜೆ.ಕೆ. ಜಮಾದಾರ ಬರೆದ, ಗ್ರಂಥ ಹಾಗೂ ತೋಂಟದಾರ್ಯ ಸಂಸ್ಥಾನಮಠ, ಡಾ.ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆಯಿಂದ ಪ್ರಕಟಿಸಿರುವ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಎಂಬ ಗ್ರಂಥ ಬಿಡುಗಡೆಗೊಳಿಸಿ, ಗದಗ ಪ್ರಾಂತ್ಯಕ್ಕೆ ತನ್ನದೇ ಆದ ಇತಿಹಾಸ ಇದೆ ಈ ಹಿಂದೆ ಆಡಳಿತ ಮಾಡಿದ ರಾಜರ ಕಾಲದಲ್ಲಿ ಇದ್ದ ಸಂಸ್ಕೃತಕ್ಕೆ ಪರ್ಯಾಯವಾದ ಭಾಷೆಯನ್ನು ಉನ್ನತ ಮಟ್ಟಕ್ಕೆ ಬೆಳಸಬೇಕು ನಮ್ಮ ಭಾಷೆಗೆ ಮೂಲ ರೂಪ ಕೊಟ್ಟಿದ್ದು ಈ ಪ್ರಾಂತದವರು ಎಂದರು.

ರಾಜಕೀಯದಲ್ಲಿ ಡಿ.ಆರ್. ಪಾಟೀಲರ ಕನಿಷ್ಠ ಒಂದು ಪ್ರತಿರೂಪವಾಗಿಯಾದರೂ ಉಳಿಯಬೇಕು ಎಂಬ ಅವಶ್ಯಕತೆ ಇದೆ. ಆದರೆ ವಿಧಾನ ಮಂಡಲ ಒಳಗೆ ತೆಗೆದುಕೊಳ್ಳಲಾಗದ ಮಟ್ಟಕ್ಕೆ ರಾಜಕಾರಣ ಬಂದು ನಿಂತಿದೆ. ಅವರ ಪ್ರತಿಬಿಂಬ ಉಳಿಯಬೇಕು, ಎಂಬ ಆಲೋಚನೆ ಮಾಡುವಷ್ಟು ರಾಜಕಾರಣ ಉಳಿದಿಲ್ಲ ಎಂದು ಬೇಸರಿಸಿದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಜ್ಯೋತಿ ಬೆಳಗಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಜಿಲ್ಲಾ ಉಸ್ತುವಾರಿ ಸಚಿವ ಎಚ್.ಕೆ. ಪಾಟೀಲ ಅಧ್ಯಕ್ಷತೆ ವಹಿಸಿ ಮಾತನಾಡಿ, ಗಾಂಧೀಜಿ ಅವರ ಬಗ್ಗೆ ಕೇವಲ ಮಾತನಾಡುವುದು ಹಾಗೂ ಅವರ ಬಗ್ಗೆ ಓದಿ ತಿಳಿದುಕೊಳ್ಳುವುದು ಮುಖ್ಯ ಅಲ್ಲ ಅವರ ನನ್ನ ಜೀವನ ನನ್ನ ಸಂದೇಶ ಎಂಬಂತೆ ಅವರ ತತ್ವಾದರ್ಶವನ್ನು ಅಳವಡಿಸಿಕೊಂಡು ನಡೆಯಬೇಕು ಎಂದರು.

ಡಂಬಳ-ಗದಗ ಜ. ತೋಂಟದಾರ್ಯ ಸಂಸ್ಥಾನ ಮಠದ ಸಿದ್ದರಾಮ ಸ್ವಾಮಿಗಳು ಸಾನಿಧ್ಯವಹಿಸಿದ್ದರು. ಗದಗ ರಾಮಕೃಷ್ಣಾಶ್ರಮದ ಪೂಜ್ಯ ನಿರ್ಭಯಾನಂದ ಸ್ವಾಮಿಗಳು ಹಾಗೂ ಜಗನ್ನಾಥ ಮಹಾಸ್ವಾಮಿಗಳು ಸಮ್ಮುಖ ವಹಿಸಿದ್ದರು.

ತೋಂಟದಾರ್ಯ ಮಠದ ಆಡಳಿತಾಧಿಕಾರಿ ಪ್ರೊ. ಎಸ್.ಎಸ್.ಪಟ್ಟಣಶೆಟ್ಟರ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಉಪ ಸಭಾಪತಿ ರುದ್ರಪ್ಪ ಲಮಾಣಿ, ಹಣಕಾಸು ಆಯೋಗದ ಅಧ್ಯಕ್ಷ ನಾರಾಯಣಸ್ವಾಮಿ, ಗ್ರಂಥ ಲೇಖಕ ಜೆ.ಕೆ.ಗನ್ನಾಥ ಜಮಾದಾರ್, ಪರಿಷತ್ ಸದಸ್ಯ ಎಸ್.ವಿ. ಸಂಕನೂರ, ಶಾಸಕ ಎನ್.ಎಚ್ ಕೋನರೆಡ್ಡಿ, ಶಾಸಕ ಜಿ.ಎಸ್ ಪಾಟೀಲ, ಮಾಜಿ ಸಚಿವ ಎಸ್.ಎಸ್. ಪಾಟೀಲ, ಮಾಜಿ ಸಂಸದ ಐ.ಜಿ ಸನದಿ, ಮಾಜಿ ಶಾಸಕ ಡಿ.ಆರ್ ಪಾಟೀಲ, ಜಿ.ಎಸ್ ಗಡ್ಡದೇವರಮಠ, ರಾಮಪ್ಪ ಲಮಾಣಿ, ಬಿ.ಎಫ್ ದಂಡಿನ ಇದ್ದರು.

ವಿಶ್ವವಾಣಿ 3 ಹುಬ್ಬಳ್ಳಿ-ಧಾರವಾಡ-ಗದಗ 05.12.2024 ಗುರುವಾರ
vishwavani.news

# ರಾಜಕಾರಣಕ್ಕೆ ಅರ್ಥವೇ ಇಲ್ಲವಾಗಿದೆ



**ಗದಗ:** ಭಾಷೆ, ನಡವಳಿಕೆ, ನಯನುಡಿ, ಕಲೆ, ಸಂಸ್ಕೃತಿ ಪ್ರತಿಯೊಂದರಲ್ಲೂ ವೈವಿಧ್ಯತೆ ಈ ಗದಗಿನ ಮಣ್ಣಿನಲ್ಲಿ ಅಡಗಿದೆ ಎಂದು ಕಂದಾಯ ಸಚಿವ ಕೃಷ್ಣ ಬೈರೇಗೌಡ ಹೇಳಿದರು.

ಅವರು ನಗರದ ತೋಂಟದಾರ್ಯ ಮಠದ ಶಿವಾನುಭವ ಮಂಟಪದಲ್ಲಿ ನಡೆದ ಸಾಹಿತಿ ಜೆ.ಕೆ ಜಮಾದಾರ ಬರೆದ ಗ್ರಂಥವನ್ನು ತೋಂಟದಾರ್ಯ ಸಂಸ್ಥಾನಮಠ ಹಾಗೂ ಡಾ. ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗಿರುವ ಸಂತ ರಾಜಕಾರಣಿ ಡಿ. ಆರ್ ಪಾಟೀಲ ಎಂಬ ಗ್ರಂಥ ಬಿಡುಗಡೆ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು. ಗದುಗಿನ ಮಣ್ಣಿನ ಸತ್ಸಂಪ್ರದಾಯದ ಪ್ರತಿರೂಪವೇ ಡಿ. ಆರ್. ಪಾಟೀಲ. ಹಿಂದೆ ರಾಜಕಾರಣ ಎಂದರೆ ಸೇವಾ ಮನೋಭಾವನೆಯಾಗಿತ್ತು. ಇಂದಿನ ರಾಜಕಾರಣ, ಸೇವಾಕಾರಣ ಹೋಗಿ ಸ್ವಕಾರಾಣವಾಗಿದೆ. ರಾಜಕಾರಣಕ್ಕೆ ಬರುವವರು ಬಹುತೇಕ ಸೇವಾ ಮನೋಭಾವ ಹೊಂದಿದವರು ಬರುತ್ತಿದ್ದರು. ರಾಜಕೀಯ ಎಂಬುದು ಸೇವೆಗೆ ಮತ್ತೊಂದು ದಾರಿಯಾಗಿತ್ತು. ಆದ್ರೆ ಇವತ್ತು ಆ ಕಾಲ ನಶಿಸಿ ಹೋಗುತ್ತಿದೆ, ಬಹುತೇಕ ಹೋಗಿದೆ.

ಕಾಲ ಬದಲಾದರೂ ಅದಕ್ಕೆ ತಕ್ಕ ಬದಲಾಗದೆ ಉಳಿದಿರುವ ಸೇವಾಕಾರಣದ ಕೊನೆಯ ಕೊಂಡಿಯಾಗಿ, ನಮ್ಮ ಮುಂದೆ ಡಿ.ಆರ್. ಪಾಟೀಲರಿದ್ದಾರೆ. ರಾಜಕಾರಣ ಎಲ್ಲಿಗೆ ಬಂದು ನಿಂತಿದೆ ಅಂದ್ರೆ, ಇವತ್ತು ವಿಧಾನ ಮಂಡಲದ ಒಳಗಡೆ ಡಿ.ಆರ್ ಪಾಟೀಲರ ಅವಶ್ಯಕತೆ ಇದೆ. ಕನಿಷ್ಟ ಒಂದು ಪ್ರತಿರೂಪವಾಗಿ ಆದರು ಉಳಿಬೇಕು ಎಂಬ ಅವಶ್ಯಕತೆ ಇದೆ ಎಂದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೊಡೆ ಪಿ.ಕೃಷ್ಣ ಹಾಗೂ ಕಂದಾಯ ಸಚಿವ ಕೃಷ್ಣ ಬೈರೇಗೌಡ ಜ್ಯೋತಿ ಬೆಳಗಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಕಾನೂನು, ಪ್ರವಾಸೋದ್ಯಮ ಹಾಗೂ ಗದಗ ಜಿಲ್ಲಾ ಉಸ್ತುವಾರಿ ಸಚಿವ ಎಚ್.ಕೆ. ಪಾಟೀಲ ಈ ಕಾರ್ಯಕ್ರಮ ಅಧ್ಯಕ್ಷತೆ ವಹಿಸಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಡಂಬಳ ಗದಗ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಸಿದ್ಧರಾಮ ಸ್ವಾಮಿಗಳು ಸಾನಿಧ್ಯ, ಗದಗ ರಾಮಕೃಷ್ಣಾಶ್ರಮದ ಪೂಜ್ಯ ನಿರ್ಭಯಾನಂದ ಸ್ವಾಮಿಗಳು ಹಾಗೂ ಜಗನ್ನಾಥ ಮಹಾಸ್ವಾಮಿಗಳು ಸಮ್ಮುಖ ವಹಿಸಿದ್ದರು.

ಈ ಸಂದರ್ಭದಲ್ಲಿ ತೋಂಟದಾರ್ಯ ಮಠದ ಆಡಳಿತಾಧಿಕಾರಿ ಪ್ರೊ.ಎಸ್.ಎಸ್ .ಪಟ್ಟಣಶೆಟ್ಟರ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಉಪ ಸಭಾಪತಿ ರುದ್ರಪ್ಪ ಲಮಾಣಿ, ಹಣಕಾಸು ಆಯೋಗದ ಅಧ್ಯಕ್ಷ ನಾರಾಯಣಸ್ವಾಮಿ, ಗ್ರಂಥ ಲೇಖಕ ಜಗನ್ನಾಥ ಜಮಾದಾರ್, ಪರಿಷತ್ ಸದಸ್ಯ ಎಸ್.ವಿ ಸಂಕನೂರ, ಶಾಸಕ ಎನ್.ಎಚ್ ಕೊನರೆಡ್ಡಿ, ಶಾಸಕ ಹಾಗೂ ಖನಿಜ ನಿಗಮದ ಅಧ್ಯಕ್ಷ ಜಿ.ಎಸ್ ಪಾಟೀಲ, ಮಾಜಿ ಸಚಿವ ಎಸ್.ಎಸ್ ಪಾಟೀಲ, ಮಾಜಿ ಸಂಸದ ಐ.ಜಿ ಸನದಿ, ಮಾಜಿ ಶಾಸಕ ಡಿ.ಆರ್ ಪಾಟೀಲ, ಜಿ.ಎಸ್ ಗಡ್ಡದೇವರಮಠ, ರಾಮಪ್ಪ ಲಮಾಣಿ, ಸತೀಶ್ ಕಾಡಶೆಟ್ಟಿ, ಪ್ರಮೋದ್ ಹೆಗಡೆ, ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
ಗುರುವಾರ 5 ಡಿಸೆಂಬರ್ 2024
ಹುಬ್ಬಳ್ಳಿ | HUBBALLI


## ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಲೋಕಾರ್ಪಣೆ | ಮೆಚ್ಚುಗೆಯ ಮಹಾಪೂರ

# ಉತ್ತಮರ ಆಯ್ಕೆಗೆ ಸ್ವಾಮೀಜಿಗಳು ಕೈಜೋಡಿಸಲಿ

ಗದಗ: ಉನ್ನತ ವ್ಯಾಸಂಗ ಮಾಡಿದ್ದರೂ ಅಪ್ಪಟ ಗ್ರಾಮೀಣ ಸೊಗಡು ಮೈಗೂಡಿಸಿಕೊಂಡು ಗ್ರಾಮೀಣಾಭಿವೃದ್ಧಿ, ಪಂಚಾಯತರಾಜ್ ಬಗ್ಗೆಯೇ ಸದಾಕಾಲ ಚಿಂತನೆ ನಡೆಸುವ ಹಿರಿಯ ಸಹಕಾರಿ ಧುರೀಣ, ಮಾಜಿ ಶಾಸಕ ಡಿ.ಆರ್. ಪಾಟೀಲ ಹಳೆಯ ಪರಂಪರೆಯ ಕೊನೆಯ ಕೊಂಡಿ ಎಂದು ಕಂದಾಯ ಸಚಿವ ಕೃಷ್ಣ ಭೈರೇಗೌಡ ಬಣ್ಣಿಸಿದರು.

ಜಗದ್ಗುರು ತೋಂಟದಾರ್ಯ ಮಠದಲ್ಲಿ ಡಾ.ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆ ಪ್ರಕಟಿಸಿದ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಲೋಕಾರ್ಪಣೆ ಸಮಾರಂಭದಲ್ಲಿ ಮಾತನಾಡಿದರು. ಡಿ.ಆರ್. ಪಾಟೀಲ ಅವರು ನಾಲ್ಕು ಬಾರಿ ವಿಧಾನಸಭೆಗೆ ಆಯ್ಕೆಯಾಗಿ ಶಾಸಕರಾಗಿದ್ದರೂ ಅವರೆಂದು ಯಾವುದೇ ಹಮ್ಮು ಬಿಮ್ಮು ತೋರಿದವರಲ್ಲ. ಅವರು ಸಾಮಾನ್ಯರಲ್ಲಿ ಅಸಾಮಾನ್ಯ ವ್ಯಕ್ತಿಯಾಗಿದ್ದಾರೆ. ಲಕ್ಷಾಂತರ ಜನರಲ್ಲಿ ಎದ್ದು ಕಾಣುವ ಗುಣ ಹೊಂದಿದ್ದಾರೆಂದು ಬಣ್ಣಿಸಿದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ ಡಿ.ಆರ್. ಪಾಟೀಲ ರಾಜಕೀಯ ಅಜಾತಶತ್ರುವಾಗಿದ್ದಾರೆ. ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ಅಪಾರ ಬದ್ಧತೆ ಹೊಂದಿದ್ದಾರೆ. ತಾವು ಗ್ರಾಮೀಣಾಭಿವೃದ್ಧಿ ಸಚಿವರಾಗಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಗ್ರಾಮ ಪಂಚಾಯತಿಗಳಿಗೆ ನೇರ ಹಣ ಬರುವಂತಾಗಲು ಕಾರಣ ಡಿ.ಆರ್. ಪಾಟೀಲರಾಗಿದ್ದಾರೆ. ಇಂತಹ ಶ್ರೇಷ್ಠ ವ್ಯಕ್ತಿಗಳು ವಿಧಾನ ಮಂಡಳದಲ್ಲಿರುವದರಿಂದ ಶಾಸನ ಸಭೆಗಳ ಗೌರವ ಹೆಚ್ಚಲಿದೆ ಎಂದು ನುಡಿದರು.



ತೋಂಟದಾರ್ಯ ಮಠದಲ್ಲಿ ಜರುಗಿದ ಸಮಾರಂಭದಲ್ಲಿ ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥವನ್ನು ಕಂದಾಯ ಸಚಿವ ಕೃಷ್ಣ ಭೈರೇಗೌಡ, ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಕಾನೂನು ಸಚಿವ ಡಾ.ಎಚ್.ಕೆ. ಪಾಟೀಲ ಲೋಕಾರ್ಪಣೆ ಮಾಡಿದರು.

ಮಾಜಿ ಶಾಸಕ ಡಿ.ಆರ್.ಪಾಟೀಲ ಮಾತನಾಡಿ, ರಾಜಕೀಯ ತಳಮಟ್ಟಕ್ಕೆ ಹೋಗಿದೆ. ಕಲುಷಿತ ರಾಜಕೀಯವನ್ನು ಸುಧಾರಿಸಲು ಸ್ವಾಮೀಜಿಗಳು ಸಮಾಜಕ್ಕೆ ಮಾರ್ಗದರ್ಶನ ನೀಡಬೇಕು. ರಾಜ್ಯದಲ್ಲಿನ ಎಲ್ಲ ಸ್ವಾಮೀಜಿಗಳನ್ನು ಒಗ್ಗೂಡಿ ಉತ್ತಮರು ಶಾಸನ ಸಭೆಗಳಿಗೆ ಆಯ್ಕೆಯಾಗುವಂತೆ ಮಾಡಬೇಕು. ಈ ನಿಟ್ಟಿನಲ್ಲಿ ತೋಂಟದ ಡಾ.ಸಿದ್ದರಾಮ ಶ್ರೀಗಳು ನೇತೃತ್ವ ವಹಿಸಬೇಕು ಎಂದು ಮನವಿ ಮಾಡಿದರು.

ಶಿರಸಿಯ ಪ್ರಮೋದ ಹೆಗಡೆ ಮಾತನಾಡಿ ಪಶ್ಚಿಮ ಘಟ್ಟವನ್ನು ಉಳಿಸಿದ ಕೀರ್ತಿ ದಿ.ಕೆ.ಎಚ್. ಪಾಟೀಲರಿಗೆ ಸಲ್ಲುತ್ತದೆ. ಡಿ.ಆರ್. ಪಾಟೀಲ ಕುಟುಂಬ ಸಜ್ಜನಿಕೆಗೆ ಸಾಕ್ಷಿಯಾಗಿದೆಯೆಂದು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ ಕೃಷ್ಣಾ, ಶಾಸಕ ಜಿ.ಎಸ್.ಪಾಟೀಲ, ವಿಧಾನ ಪರಿಷತ್ ಸದಸ್ಯ ಪ್ರೊ.ಎಸ್.ವಿ.ಸಂಕನೂರ, ಪ್ರೊ.ಐ.ಜಿ. ಸನದಿ, ವಿಧಾನಸಭಾ ಉಪಾಧ್ಯಕ್ಷ ರುದ್ರಪ್ಪ ಲಮಾಣಿ ಮಾತನಾಡಿದರು. ಗ್ರಂಥಕರ್ತ ಜಗನ್ನಾಥಸಿಂಗ್ ಜಮಾದಾರ, ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷ ಸಿ.ನಾರಾಯಣಸ್ವಾಮಿ ಪ್ರಾಸ್ತಾವಿಕವಾಗಿ ಮಾತನಾಡಿದರು.

ಅಧ್ಯಕ್ಷತೆ ವಹಿಸಿದ್ದ ಕಾನೂನು ಸಚಿವ ಡಾ.ಎಚ್.ಕೆ. ಪಾಟೀಲ ಮಾತನಾಡಿ, ಡಿ.ಆರ್.ಪಾಟೀಲ ಸರ್ವ ಜಾತಿ, ಧರ್ಮಗಳ ಜನತೆಯೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ. ಅವರು ಅರ್ಧ ಆಯುಷ್ಯ ತಮ್ಮ ತಂದೆ ದಿ.ಕೆ.ಎಚ್. ಪಾಟೀಲರ ಕನಸು ನನಸು ಮಾಡುವದರಲ್ಲಿಯೇ ಕಳೆದಿದ್ದಾರೆ. ತಾವು ಆರು ಬಾರಿ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾಗಲು ಡಿ.ಆರ್.ಪಾಟೀಲ ಕಾರಣವೆಂದು ಹೇಳಿದರು.

ಡಾ.ತೋಂಟದ ಸಿದ್ದರಾಮ ಶ್ರೀಗಳು ಸಾನ್ನಿಧ್ಯ ವಹಿಸಿದ್ದರು. ರಾಮಕೃಷ್ಣ ಆಶ್ರಮದ ನಿರ್ಭಯಾನಂದ ಸ್ವಾಮೀಜಿ ಸಮ್ಮುಖ ವಹಿಸಿದ್ದರು.

ವೇದಿಕೆಯಲ್ಲಿ ಮಾಜಿ ಸಚಿವ ಎಸ್.ಎಸ್. ಪಾಟೀಲ, ಶಾಸಕ ಎನ್.ಎಚ್. ಕೋನರಡ್ಡಿ, ಮಾಜಿ ಶಾಸಕರಾದ ಬಿ.ಆರ್.ಯಾವಗಲ್, ಜಿ.ಎಸ್.ಗಡ್ಡದ್ದೇವರಮಠ, ರಾಮಣ್ಣ ಲಮಾಣಿ, ರಾಮಕೃಷ್ಣ ದೊಡ್ಡಮನಿ, ಪ್ರಾ.ಶಿವಾನಂದ ಪಟ್ಟಣಶೆಟ್ಟಿ, ಪ್ರೊ.ಕೆ.ಎಚ್. ಬೇಲೂರ ಮುಂತಾದವರಿದ್ದರು.

> “ ಬೆಳಗಾವಿಯಲ್ಲಿ ನಡೆಯುವ ಚಳಿಗಾಲದ ಅಧಿವೇಶನದಲ್ಲಿ ಪಂಚಾಯತರಾಜ್ ವಿಕೇಂದ್ರೀಕರಣ ಕಾನೂನು ಜಾರಿಗೆ ಆದೇಶಿಸಬೇಕು. ಈ ಬಗ್ಗೆ ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ವಿಧಾನಸಭೆ ಉಪಸಭಾಪತಿ ರುದ್ರಪ್ಪ ಲಮಾಣಿ ಮುಖ್ಯಮಂತ್ರಿಗಳ ಮೇಲೆ ಒತ್ತಡ ತರಬೇಕು.
>
> -ಡಿ.ಆರ್.ಪಾಟೀಲ, ಮಾಜಿ ಶಾಸಕ

ಸಂಯುಕ್ತ ಕರ್ನಾಟಕ ಗುರುವಾರ 5 ಡಿಸೆಂಬರ್ 2024
ಬೆಂಗಳೂರು | BENGALURU

# ಕನ್ನಡ ಮಾಧ್ಯಮ ಶಾಲೆ ಪರಿವರ್ತನೆ ಸಲ್ಲ

**ಬೆಂಗಳೂರು:** ರಾಜ್ಯದಲ್ಲಿರುವ ಕನ್ನಡ ಶಾಲೆಗಳನ್ನು ಉಳಿಸಿ ಬೆಳೆಸಲೇಬೇಕಾದ ಅನಿವಾರ್ಯತೆ ಇದೆ ಎಂದು ಮಾಜಿ ಸಂಸದ ಡಾ.ಎಲ್.ಹನುಮಂತಯ್ಯ ತಿಳಿಸಿದರು.

ಕನ್ನಡ ಗೆಳೆಯರ ಬಳಗ ಹಾಗೂ ಕರ್ನಾಟಕ ಕಾರ್ಮಿಕಲೋಕ ಸಹಯೋಗದಲ್ಲಿ ನಡೆದ ಪ್ರಶಸ್ತಿ ಪ್ರದಾನ ಮತ್ತು ಪುಸ್ತಕ ಬಹುಮಾನ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಅವರು, ಸರ್ಕಾರಿ ಕನ್ನಡ ಶಾಲೆಗಳನ್ನು ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನಾಗಿ ಪರಿವರ್ತಿಸುವುದು ಸರಿಯಾದ ಕ್ರಮವಲ್ಲ. ಪ್ರಸ್ತುತ ರಾಜ್ಯ ಸರ್ಕಾರವು ದೆಹಲಿ ಸರ್ಕಾರದ ಮಾದರಿಯಲ್ಲಿ ಕನ್ನಡ ಶಾಲೆಗಳನ್ನು ಅಭಿವೃದ್ಧಿಗೊಳಿಸಬೇಕಾದ ಅಗತ್ಯವಿದೆ ಎಂದು ಹೇಳಿದರು.

ಕನ್ನಡಿಗರು ಕನ್ನಡವನ್ನು ಉಳಿಸಬೇಕಾದರೆ ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮ ಶಾಲೆಗಳಿಗೆ ಹೆಚ್ಚೆಚ್ಚು ದಾಖಲಾತಿ ಮಾಡಲಿ. ಕನ್ನಡಿಗರಾದ ನಾವು ರಾಜ್ಯದಲ್ಲಿರುವ ಕನ್ನಡ ಶಾಲೆಗಳ ಬೆಳವಣಿಗೆ ಪಡಿಸಲು ಟೊಂಕಕಟ್ಟಿ ನಿಲ್ಲಬೇಕಾದ ಅನಿವಾರ್ಯತೆ ಇದೆ. ಬಹುಮುಖ್ಯವಾಗಿ ಉದ್ಯಮಿಗಳು, ಉತ್ತಮ ಆರ್ಥಿಕ ಪರಿಸ್ಥಿತಿಯನ್ನು ಹೊಂದಿರುವವರು ಕನ್ನಡ ಶಾಲೆಗಳನ್ನು ದತ್ತು ತೆಗೆದುಕೊಂಡು ಅಭಿವೃದ್ಧಿಗೊಳಿಸಲು ಮುಂದಾಗಲಿ ಎಂದರು.

ಕನ್ನಡ ಗೆಳೆಯರ ಬಳಗ ಸಂಚಾಲ ರಾ.ನಂ.ಚಂದ್ರಶೇಖರ ಮಾತನಾಡಿದರು. ಪ್ರೊ.ಆರ್.ವೇಣುಗೋಪಾಲ್ ಅವರಿಗೆ 'ಕನ್ನಡ ಅರವಿಂದ' ಮತ್ತು ಹೊಸೂರು ನಾಗರಾಜ್ ಅವರಿಗೆ 'ಕನ್ನಡ ಚಿರಂಜೀವಿ' ಪ್ರಶಸ್ತಿ ಪ್ರದಾನ ಮಾಡಲಾಯಿತು. ಇದೇ ವೇಳೆ ಕನ್ನಡ ಮಾಧ್ಯಮದಲ್ಲಿ ಸಾಧನೆ ಮಾಡಿದ ಮಕ್ಕಳನ್ನು ಮತ್ತು ಶಾಲೆಗಳ ಶಿಕ್ಷಕರನ್ನು ಗೌರವಿಸಲಾಯಿತು. ಕನ್ನಡ ಗೆಳೆಯರ ಬಳಗದ ಸದಸ್ಯರಾದ ಬಾ.ಹ.ಉಪೇಂದ್ರ, ಮ. ಚಂದ್ರಶೇಖರ್, ಆರ್.ಶೇಷಾಶಾಸ್ತ್ರೀ, ಕನ್ನಡ ವಿಕಾಸರಂಗದ ವ.ಚ.ಚನ್ನೇಗೌಡ ಮತ್ತಿತರರಿದ್ದರು.



ಕನ್ನಡ ಗೆಳೆಯರ ಬಳಗ ಹಾಗೂ ಕರ್ನಾಟಕ ಕಾರ್ಮಿಕಲೋಕ ಸಹಯೋಗದಲ್ಲಿ ನಡೆದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾಜಿ ಸಂಸದ ಡಾ.ಎಲ್.ಹನುಮಂತಯ್ಯ, ಡಾ.ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

# ಅರಣ್ಯ ಪ್ರದೇಶದಲ್ಲಿ ಕೈಗಾರಿಕೆ ಸ್ಥಾಪನೆಗೆ ಅವಕಾಶ ಇಲ್ಲ

**ಬೆಂಗಳೂರು:** ಪ್ರಾದೇಶಿಕ ಅಸಮತೋಲನ ನಿವಾರಣೆಯ ಮಾನದಂಡದಲ್ಲಿ ತಲಾ ಆದಾಯ ಮತ್ತು ಪ್ರದೇಶದ ಹಸಿರು ವ್ಯಾಪ್ತಿಯನ್ನೂ ಪರಿಗಣಿಸುವ ಅಗತ್ಯವಿದೆ ಎಂದು ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವ ಈಶ್ವರ ಬಿ.ಖಂಡ್ರೆ ಅಭಿಪ್ರಾಯ ವ್ಯಕ್ತಪಡಿಸಿದರು.

ವಿಕಾಸಸೌಧದಲ್ಲಿ ಬುಧವಾರ ಕರ್ನಾಟಕ ಪ್ರಾದೇಶಿಕ ಅಸಮತೋಲನ ನಿವಾರಣಾ ಸಮಿತಿಯ ಅಧ್ಯಕ್ಷರು ಹಾಗೂ ಆರ್ಥಿಕ ತಜ್ಞ ಪ್ರೊ.ಎಂ.ಗೋವಿಂದರಾವ್ ನಿಯೋಗದೊಂದಿಗೆ ಸಮಾಲೋಚನಾ ಸಭೆ ನಡೆಸಿದ ಅವರು, ಅರಣ್ಯ ಇರುವ ಪ್ರದೇಶಗಳಲ್ಲಿ ಕೆಂಪು ಪ್ರವರ್ಗದ ಕೈಗಾರಿಕೆಗಳ ಸ್ಥಾಪನೆ ಸಾಧ್ಯವಿಲ್ಲ ಹೀಗಾಗಿ ಪಶ್ಚಿಮಘಟ್ಟ ಪ್ರದೇಶಗಳಿಗೆ ಪ್ರೋತ್ಸಾಹಕ ನೀಡುವ ಅಗತ್ಯವಿದೆ. ಕಲ್ಯಾಣ ಕರ್ನಾಟಕ ಭಾಗದಲ್ಲಿ ಹಸಿರು ಹೊದಿಕೆಯ ವ್ಯಾಪ್ತಿ ಅತ್ಯಂತ ಕಡಿಮೆ ಇದೆ. ಇಲ್ಲಿ ವೃಕ್ಷ ಸಂವರ್ಧನೆಗೂ ಪ್ರಾದೇಶಿಕ ಅಸಮತೋಲನ ನಿವಾರಣೆಯಲ್ಲಿ ಆದ್ಯತೆ ನೀಡಬೇಕು ಮತ್ತು ಹೆಚ್ಚಿನ ಹಣ ಒದಗಿಸಬೇಕು ಎಂದು ಸಲಹೆ ನೀಡಿದರು.

ಅಸಮತೋಲನ ನಿವಾರಣೆಗೆ ಹಂಚಿಕೆಯಾಗುವ ಹಣವನ್ನು ಮೂಲಸೌಕರ್ಯ ಅಭಿವೃದ್ಧಿ, ಕೈಗಾರಿಕೆ, ಶಾಲಾ, ಕಾಲೇಜು, ವಿಶ್ವವಿದ್ಯಾಲಯ ಸ್ಥಾಪನೆಗೆ ಮಾತ್ರವೇ ಬಳಕೆ ಮಾಡಬೇಕು. ಇತರ ಯಾವುದೇ ಯೋಜನೆಗಳಿಗೆ ಬಳಕೆಯಾದ ಹಣವನ್ನು ಈ ಬಾಬತ್ತಿನಲ್ಲಿ ತೋರಿಸಬಾರದು ಎಂಬ ಸಲಹೆ ನೀಡಿದರು.

ಪ್ರಜಾವಾಣಿ
ಗುರುವಾರ • ಡಿಸೆಂಬರ್ 5, 2024



## ಗ್ರಂಥ ಬಿಡುಗಡೆ

ಗದುಗಿನ ತೋಂಟದಾರ್ಯ ಮಠದಲ್ಲಿ ಬುಧವಾರ ನಡೆದ ಕಾರ್ಯಕ್ರಮದಲ್ಲಿ ಡಾ. ಎಂ.ಎಂ.ಕಲಬುರ್ಗಿ ಅಧ್ಯಯನ ಸಂಸ್ಥೆಯಿಂದ ಹೊರತಂದಿರುವ 'ಸಂತ ರಾಜಕಾರಣಿ ಡಿ.ಆರ್.ಪಾಟೀಲ' ಗ್ರಂಥವನ್ನು ಕರ್ನಾಟಕ ಗಾಂಧೀ ಸ್ಮಾರಕನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಬಿಡುಗಡೆ (ಎಡದಿಂದ ಎರಡನೆ ಯವರು) ಮಾಡಿದರು. ಮಾಜಿ ಶಾಸಕ ಡಿ.ಆರ್.ಪಾಟೀಲ, ಸಚಿವ ಕೃಷ್ಣಬೈರೇಗೌಡ, ಸಿದ್ಧರಾಮ ಸ್ವಾಮೀಜಿ, ನಿರ್ಭಯಾನಂದ ಸರಸ್ವತಿ ಸ್ವಾಮೀಜಿ, ಜಗನ್ನಾಥ ಮಹಾರಾಜ್, ಸಭಾಪತಿ ಬಸವರಾಜ ಹೊರಟ್ಟಿ, ಸಚಿವ ಎಚ್.ಕೆ.ಪಾಟೀಲ ಇದ್ದರು

ಕನ್ನಡಪ್ರಭ
Dec 05, 2024

# ರಾಜಕೀಯ ಸೇವಾಕಾರಣವಾಗಿ ಉಳಿದಿಲ್ಲ

## ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಬಿಡುಗಡೆ ಕಾರ್ಯಕ್ರಮದಲ್ಲಿ ಬೈರೇಗೌಡ

• ಕನ್ನಡಪ್ರಭ ವಾರ್ತೆ ಗದಗ

ರಾಜಕೀಯ ಈ ಮೊದಲು ಸೇವಾ ಕ್ಷೇತ್ರವಾಗಿತ್ತು. ಅದಕ್ಕಾಗಿ ಅದನ್ನು ಸೇವಾಕರಣ ಎಂದು ಕರೆಯುತ್ತಿದ್ದರು. ಈಗ ರಾಜಕಾರಣ ಸ್ವಕಾರಣವಾಗಿ ಮಾರ್ಪಟ್ಟಿದೆ, ಸೇವಾಕರಣದ ಕೊನೆಯ ಕೊಂಡಿ ಡಿ.ಆರ್. ಪಾಟೀಲಯಾಗಿದ್ದಾರೆ ಎಂದು ಕಂದಾಯ ಸಚಿವ ಕೃಷ್ಣ ಬೈರೇಗೌಡ ಹೇಳಿದರು.

ಅವರು ಗದಗ ನಗರದ ತೋಂಟದಾರ್ಯ ಮಠದ ಆವರಣದಲ್ಲಿನ ಶಿವಾನುಭವ ಮಂಟಪದಲ್ಲಿ ತೋಂಟದಾರ್ಯ ಮಠ, ಡಾ. ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆಯ ಮೂಲಕ ಪ್ರಕಟಗೊಂಡ ಸಂತರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಬಿಡುಗಡೆ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು.

ಈ ಹಿಂದೆ ರಾಜಕೀಯಕ್ಕೆ ಬರುವವರು ಸೇವೆ ಮಾಡಬೇಕು, ಬಡವರಿಗೆ ನೋಂದವರಿಗೆ ಧ್ವನಿಯಾಗಬೇಕು ಎಂದು ಬರುತ್ತಿದ್ದರು. ಈಗ ರಾಜಕೀಯ ಬರುವವರು ಏನೆಲ್ಲ ಮಾಡುತ್ತಿದ್ದಾರೆ ಎನ್ನುವುದು ಎಲ್ಲರಿಗೂ ತಿಳಿದಿದೆ. ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ಡಿ.ಆರ್.ಪಾಟೀಲ ಅವರಂತಹ ಹಿರಿಯರು, ತತ್ವ ಸಿದ್ಧಾಂತ, ನಿಷ್ಠೆಯ ಬದುಕು ಮಾದರಿಯಾಗಿದೆ ಎಂದರು.

ಕಾನೂನು ಹಾಗೂ ಪ್ರವಾಸೋದ್ಯಮ ಇಲಾಖೆ ಸಚಿವ ಎಚ್.ಕೆ.ಪಾಟೀಲ ಮಾತನಾಡಿ, ನಾನು ಮೊಟ್ಟ ಮೊದಲ ಬಾರಿಗೆ ವಿಧಾನ ಪರಿಷತ್ ಸದಸ್ಯನಾಗಿದ್ದ ಸಂದರ್ಭದಲ್ಲಿ ಯಡಿಯೂರ ಸಿದ್ಧಲಿಂಗೇಶ್ವರ ಟ್ರಸ್ಟ್ ಸದಸ್ಯ ನಾಗುವ ಅವಕಾಶ ದೊರೆಯಿತು. ತೋಂಟದಾರ್ಯ ಮಠಕ್ಕೂ ನನಗೂ ಅವಿನಾಭಾವ ಸಂಬಂಧ ಬೆಳೆಯಲು ಡಿ.ಆರ್ .ಪಾಟೀಲ ಕಾರಣವಾಗಿದ್ದಾರೆ. ದಿ. ಕೆ.ಎಚ್. ಪಾಟೀಲರು ಜನಸೇವೆ ಆಶಯ ಈಡೇರಿಸು ವುದಕ್ಕಾಗಿಯೇ ಡಿ.ಆರ್. ಪಾಟೀಲ ತಮ್ಮ ಅರ್ಧ ಜೀವನ ಸವೆಸಿದರು. ರಾಜಕೀಯವಾಗಿ ಅವರ ಮಾರ್ಗದರ್ಶನ ನನಗೆ ಸಾಕಷ್ಟಿದೆ. ನಮ್ಮ ತಂದೆ ಶೀರಿ ಹೋದ ನಂತರ ಆ ಸ್ಥಾನವನ್ನು ಸಮರ್ಥವಾಗಿ ತುಂಬಿ ನಮ್ಮ ಮನೆಯ ಗೌರವವನ್ನು ಮತ್ತಷ್ಟು ಉನ್ನತ ಸ್ಥಾನಕ್ಕೆ ಹೆಚ್ಚಿಸಿದ್ದು ಡಿ.ಆರ್. ಪಾಟೀಲರು ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣಾ ಮಾತನಾಡಿ; ಗ್ರಾಮೀಣ ಬದುಕು, ಹಳ್ಳಿ ಜನರ ಬಗ್ಗೆ ಅವರಿಗೆ ಇರುವ ಕಾಳಜಿ ಮಾತ್ರ ಎಲ್ಲರಿಗೂ ಪ್ರೇರಣಿದಾಯಕವಾಗಿದೆ. ಬಹುತ್ವದ ಬದುಕು ಎನ್ನುವ ಕಲ್ಪನೆ ಸಾಕಾರಗೊಳಿಸಿದ್ದು ಡಿ. ಆರ್. ಪಾಟೀಲ ಜೀವನ ಎಂದರು.

ರೋಣ ಶಾಸಕ ಜಿ.ಎಸ್. ಪಾಟೀಲ, ರುದ್ರಪ್ಪ ಲಮಾಣಿ, ವಿಪ ಸಭಾಪತಿ ಬಸವರಾಜ ಹೊರಟ್ಟಿ ಮುಂತಾದವರು ಮಾತನಾಡಿದರು.

ತೋಂಟದಾರ್ಯ ಮಠದ ಆಡಳಿತಾಧಿಕಾರಿ ಎಸ್.ಎಸ್. ಪಟ್ಟಣಶೆಟ್ಟಿ ಪ್ರಾಸ್ತಾವಿಕವಾಗಿ ಮಾತನಾಡಿದರು. ವಿವೇಕಾನಂದಗೌಡ ಪಾಟೀಲ ಸ್ವಾಗತಿಸಿದರು. ಸಾನ್ನಿಧ್ಯ ವಹಿಸಿದ್ದ ಡಾ. ತೋಂಟದ ಸಿದ್ಧರಾಮಶ್ರೀಗಳು, ರಾಮಕೃಷ್ಣ ವಿವೇಕಾನಂದ ಆಶ್ರಮದ ನಿರ್ಭಯಾನಂದ ಶ್ರೀಗಳು ಆಶೀರ್ವಚನ ನೀಡಿದರು. ರಾಮಕೃಷ್ಣ ಆಶ್ರಮದ ಜಗನ್ನಾಥ ಶ್ರೀಗಳು. ಮಾಜಿ ಸಚಿವ ಎಸ್.ಎಸ್. ಪಾಟೀಲ, ನಗರಾಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಅಕ್ಬರ್‌ಸಾಬ ಬಬರ್ಚಿ, ನವಲಗುಂದ ಶಾಸಕ ಎನ್.ಎಚ್. ಕೋನರಡ್ಡಿ, ಮಾಜಿ ಸಂಸದ ಐ.ಜಿ. ಸನದಿ, ಮಾಜಿ ಸಚಿವ ಬಿ.ಆರ್. ಯಾವಗಲ್ಲ, ಮಾಜಿ ಶಾಸಕರಾದ ಜಿ.ಎಸ್. ಗಡ್ಡದೇವರಮಠ, ರಾಮಣ್ಣ ಲಮಾಣಿ, ರಾಮಕೃಷ್ಣ ದೊಡ್ಡಮನಿ, ಸತೀಶ ಪಾಡಶೆಟ್ಟಿ, ಆರ್. ರಘು, ನರೇಂದ್ರ ಎಂ.ಸಿ, ಜಿ.ಬಿ. ಶಿವರಾಜ, ಬಿ. ಎಫ್. ದಂಡೀನ, ಕೊಟ್ರೇಶಪ್ಪ ಬಸೇಗಣ್ಣಿ, ಎಲ್ .ಡಿ. ಚಂದಾವರಿ, ಬಿ.ಬಿ. ಅಸೂಟಿ, ಜಿಪಂ ಮಾಜಿ ಅಧ್ಯಕ್ಷ ಸಿದ್ಧಲಿಂಗೇಶ್ವರ ಪಾಟೀಲ, ಅಶೋಕ ಮಂದಾಲಿ ಸೇರಿದಂತೆ ಡಿ.ಆರ್. ಪಾಟೀಲ ಅಭಿಮಾನಿಗಳು ಪಾಲ್ಗೊಂಡಿದ್ದರು.

ಇದೇ ಸಂದರ್ಭದಲ್ಲಿ ಗ್ರಂಥ ರಚನೆಕಾರ ಜೆ.ಕೆ. ಜಮಾದಾರ, ಡಿ.ಆರ್. ಪಾಟೀಲ, ಎಂ.ಆರ್ .ಪಾಟೀಲ ಹಾಗೂ ಪಿ.ಕೆ.ಪಾಟೀಲ ದಂಪತಿಗಳನ್ನು ಶ್ರೀಮಠದಿಂದ ಸನ್ಮಾನಿಸಲಾಯಿತು.



ಕಾರ್ಯಕ್ರಮದಲ್ಲಿ ಸಂತರಾಜಕಾರಣಿ ಗ್ರಂಥ ಬಿಡುಗಡೆ ಜರುಗಿತು.

> ದಿ. ಕೆ.ಎಚ್. ಪಾಟೀಲರು ಮುಖ್ಯಮಂತ್ರಿಯಾಗಬೇಕಿತ್ತು. ಆದರೆ ಕೆಲ ಕಾರಣಗಳಿಂದ ಆಗಲಿಲ್ಲ. ಈಗ ಎಚ್.ಕೆ.ಪಾಟೀಲರಿಗೆ ಎಲ್ಲ ರೀತಿಯ ಅರ್ಹತೆಗಳಿದ್ದು ಅವರಿಗೆ ಆ ಸ್ಥಾನ ಬೇಗ ಸಿಗಲಿ, ಅದಕ್ಕೆ ಅವರ ಸಹೋದರ ಡಿ.ಆರ್. ಪಾಟೀಲರ ಶ್ರಮಿಸಿದ ಬದುಕು ಸಾರ್ವಜನಿಕರ ಸೇವೆ ಆದರ್ಶ ಪ್ರಾಯದ ಜೀವನ ಸಹಕಾರಿಯಾಗುತ್ತದೆ ಎನ್ನುವ ವಿಶ್ವಾಸವಿದೆ.
>
> • ಪ್ರಮೋದ ಹೆಗಡೆ, ಡಿ.ಆರ್.ಪಾಟೀಲರ ಆತ್ಮೀಯರು

## ಬಿಜೆಪಿ ಕಾಲಾವಧಿಯಲ್ಲಿ 4 ಸಾವಿರ ವಕ್ಫ್ ಖಾತೆ ಬದಲಾವಣೆ: ಸಚಿವ ಕೃಷ್ಣ ಬೈರೇಗೌಡ

ಗದಗ: ರಾಜ್ಯದಲ್ಲಿ ಬಿಜೆಪಿ ಸರ್ಕಾರದ ಕಾಲಾವಧಿಯಲ್ಲಿಯೇ 4 ಸಾವಿರ ವಕ್ಫ್ ಖಾತೆ ಬದಲಾಗಿವೆ. ಈಗ ಹೋರಾಟ ಮಾಡುತ್ತಿರುವವರು ಆಗ ಎಲ್ಲಿ ಹೋಗಿದ್ದರು? ಎಂದು ಕಂದಾಯ ಸಚಿವ ಕೃಷ್ಣ ಬೈರೇಗೌಡ ಪ್ರಶ್ನಿಸಿದರು.

ಬುಧವಾರ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಬಿಜೆಪಿ ಆಂತರಿಕ ಕಚ್ಚಾಟದಲ್ಲಿ ಮೇಲುಗೈ ಸಾಧಿಸಲು ನಡೆಸುತ್ತಿರುವ ಹೋರಾಟ ಇದಾಗಿದೆ. ವಕ್ಫ್ ಬಗ್ಗೆ ಮಾತನಾಡುತ್ತಾ ಹೋರಾಟ ಮಾಡುತ್ತೇವೆ ಎನ್ನುತ್ತಿದ್ದಾರೆ. ಇದು ಜನರನ್ನು ಯಾಮಾರಿಸಲು [illegible] ಮಾಡುತ್ತಿರುವ ಹೋರಾಟವಾಗಿದೆ. ಕಾಂಗ್ರೆಸ್ ಸರ್ಕಾರದ ಮೇಲೆ ರಾಜ್ಯದ ಜನತೆ ತೋರುತ್ತಿರುವ ಪ್ರೀತಿ ಅಭಿಮಾನ ಸಹಿಸಲಾಗದೇ ಸುಳ್ಳು ಸುದ್ದಿ ಹಬ್ಬಿಸುವ ಪ್ರಯತ್ನ ಮಾಡುತ್ತಿದ್ದಾರೆ ಎಂದು ಆರೋಪಿಸಿದರು.

ಕಪ್ಪತಗುಡ್ಡದ ವ್ಯಾಪ್ತಿಯಲ್ಲಿ ಬಫರ್ ಝೋನ್ ತಗ್ಗಿಸುವ ವಿಚಾರ ಕುರಿತ ಪ್ರಶ್ನೆಗೆ ಉತ್ತರಿಸಿದ ಅವರು, ಫಾರೆಸ್ಟ್ ಮಿತಿಯಿಂದ ಎಷ್ಟು ಬಫರ್ ಇರಬೇಕು ಎನ್ನುವುದನ್ನು ಚರ್ಚಿಸಬೇಕಿದೆ. ಫಾರೆಸ್ಟ್ ಗಡಿದಾಟಿ ಎಷ್ಟು ವಿಸ್ತೀರ್ಣದಲ್ಲಿ ಬಫರ್ ಇರಬೇಕು ಎನ್ನುವ ವಿಷಯದಲ್ಲಿ ಕೇಂದ್ರ ಸರ್ಕಾರ ಹೇಳಿರುವಂತೆ ಕನಿಷ್ಠ ಒಂದು ಕಿಲೋ ಮೀಟರ್ ಇರಬೇಕು. ಫಾರೆಸ್ಟ್ ಜಮೀನು ಮೀರಿ ಇತರ ಜಮೀನಲ್ಲಿ ಎಷ್ಟು ಬಫರ್ ಝೋನ್ ಮಾಡಬೇಕು ಎನ್ನುವ ವಿಷಯದ ಬಗ್ಗೆಯೂ ಚರ್ಚೆಗಳು ನಡೆಯುತ್ತಿವೆ ಎಂದು ಹೇಳಿದರು.

ಇಲಾಖೆಯ ಕಾನೂನು, ಸುಪ್ರೀಂ ಕೋರ್ಟ್ ರೂಲಿಂಗ್ ಮೂಲಕ ಪ್ರಕ್ರಿಯೆ ನಡೆಯುತ್ತಿದೆ. ಸ್ಥಳೀಯರ ಭಾವನೆಗೂ ಮನ್ನಣೆ ಕೊಡಲು ಸರ್ಕಾರ ಸಿದ್ಧವಿದೆ. ಖಾಸಗಿ ಜಮೀನಿನಲ್ಲಿ ಬಫರ್ ಝೋನ್ ಮಾಡಿದರೆ, ಅವರ ಹಕ್ಕು ಮೊಟಕುಗೊಳಿಸಿದಂತೆ ಆಗುತ್ತದೆ. ನಾಳೆ ಅವರು ಮನೆ ಕಟ್ಟಬೇಕಾದರೂ ಕಠಿಣ ನಿಯಮ ಅನ್ವಯ ತೊಂದರೆಯಾಗುತ್ತದೆ. ಈ ಕುರಿತು ಅರಣ್ಯ ಸಚಿವರು ತೀರ್ಮಾನ ಮಾಡುತ್ತಾರೆ. ನಾವೂ ಚರ್ಚೆ ಮಾಡುತ್ತೇವೆ ಎಂದರು.

ವಿಶ್ವವಾಣಿ

05.12.2024 ಗುರುವಾರ

### ಎಲ್ಲ ಭಾಷೆಗಳ ಉಳಿವಿಗೆ ಸಾಂವಿಧಾನಿಕವಾಗಿಯೇ ಬದಲಾವಣೆ ತರುವ ಅಗತ್ಯವಿದೆ: ನಾಗಾಭರಣ

# ಬ್ಯಾಂಕ್ ಪರೀಕ್ಷೆಗಳನ್ನು ಕನ್ನಡದಲ್ಲೇ ನಡೆಸಬೇಕು: ಎಲ್. ಹನುಮಂತಯ್ಯ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಕೇಂದ್ರ ಸ್ವಾಮ್ಯದ ಸಾರ್ವಜನಿಕ ವಲಯದ ಬ್ಯಾಂಕ್‌ಗಳಲ್ಲಿ ಆಯ್ಕೆ ಪ್ರಕ್ರಿಯೆಯಲ್ಲಿ ಪ್ರಾದೇಶಿಕ ಭಾಷೆಗಳನ್ನು ಕಡ್ಡಾಯಗೊಳಿಸಬೇಕೆಂದು ಮಾಜಿ ರಾಜ್ಯಸಭಾ ಸದಸ್ಯ ಡಾ. ಎಲ್. ಹನುಮಂತಯ್ಯ ಆಗ್ರಹಿಸಿದರು.

ನಯನ ಸಭಾಂಗಣದಲ್ಲಿ ಕನ್ನಡ ಗೆಳೆಯರ ಬಳಗ, ಕರ್ನಾಟಕ ಕಾರ್ಮಿಕ ಲೋಕ ಆಯೋಜಿಸಿದ ಪ್ರಶಸ್ತಿ ಪ್ರದಾನ, ಪುಸ್ತಕ ಬಹುಮಾನ, ಕನ್ನಡ ಮಾಧ್ಯಮದ ಮಕ್ಕಳಿಗೆ ಸನ್ಮಾನ-ಬಹುಮಾನ ಮತ್ತು ಉತ್ತಮ ಸರಕಾರಿ ಶಾಲೆಗೆ ಬಹುಮಾನ ಕಾರ್ಯಕ್ರಮದಲ್ಲಿ ಮಾತನಾಡಿ, ಹಿಂದೆ ಸಾರ್ವಜನಿಕ ವಲಯ ಬ್ಯಾಂಕ್ ಆಯ್ಕೆ ಮಂಡಳಿಯಿದ್ದಾಗ ಪ್ರಾದೇಶಿಕ ಭಾಷೆಯ ಜ್ಞಾನ ಇರದಿದ್ದರೆ ಆಯ್ಕೆಗೆ ಪರಿಗಣಿಸಲಾಗುತ್ತಿರಲಿಲ್ಲ, ಆದರೆ ಇಂದು ಬ್ಯಾಂಕ್‌ಗಳಲ್ಲಿ ಹಿಂದಿ,ಆಂಗ್ಲ ಭಾಷೆಗಳು ಮಾತ್ರ ನಡೆಯುತ್ತಿದ್ದು, ಸ್ಥಳೀಯರಿಗೆ ಬ್ಯಾಂಕ್‌ಗಳಲ್ಲಿ ಕೆಲಸ ದೊರೆಯುತ್ತಿಲ್ಲ, ಕನ್ನಡಿಗರಿಗೆ ಬ್ಯಾಂಕ್‌ಗಳಲ್ಲಿ ಸೂಕ್ತ ಅವಕಾಶ ಸಿಗಲು ಆಯ್ಕೆ ಪರೀಕ್ಷೆಗಳು ಕನ್ನಡದಲ್ಲೂ ನಡೆಯಬೇಕು ಎಂದು ಒತ್ತಾಯಿಸಿದರು.

ಯಾವುದೇ ಸಾರ್ವಜನಿಕ ಬ್ಯಾಂಕ್‌ಗಳಿಗೆ ಹೋದರೂ ಕನ್ನಡ ಮಾತನಾಡುವ ಸಿಬ್ಬಂದಿ ಸಿಗುವುದು ದುರ್ಲಭವಾಗಿದೆ. ಇದರಿಂದ ಸ್ಥಳೀಯರು ಬ್ಯಾಂಕ್ ವ್ಯವಹಾರ ನಡೆಸಲು ಒದ್ದಾಡುವ ಪರಿಸ್ಥಿತಿಯಿದೆ. ಉದ್ಯೋಗದ ಜತೆಗೆ ನಾವು ಕನ್ನಡದ ಭವಿಷ್ಯದ ದೃಷ್ಟಿಯಿಂದ ಸರಕಾರಿ ಕನ್ನಡ ಶಾಲೆಗಳನ್ನು ಉಳಿಸಲು ಗಮನ ನೀಡಬೇಕಿದೆ ಎಂದರು.



ಕನ್ನಡ ಗೆಳೆಯರ ಬಳಗ, ಕರ್ನಾಟಕ ಕಾರ್ಮಿಕ ಲೋಕ ಆಯೋಜಿಸಿದ ಪ್ರಶಸ್ತಿ ಪ್ರದಾನ, ಪುಸ್ತಕ ಬಹುಮಾನ, ಕನ್ನಡ ಮಾಧ್ಯಮದ ಮಕ್ಕಳಿಗೆ ಸನ್ಮಾನ-ಬಹುಮಾನ ಮತ್ತು ಉತ್ತಮ ಸರಕಾರಿ ಶಾಲೆಗೆ ಬಹುಮಾನ ಕಾರ್ಯಕ್ರಮದಲ್ಲಿ ಬಹುಮಾನ ಪ್ರದಾನ ಮಾಡಲಾಯಿತು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನಿಕಟ ಪೂರ್ವ ಅಧ್ಯಕ್ಷ ಡಾ.ಟಿ.ಎಸ್. ನಾಗಾಭರಣ ಮಾತನಾಡಿ, 1956ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾದಾಗ ರಾಜ್ಯದ ಗಡಿ, ಅಧಿಕಾರಗಳಂತಹ ವಿಚಾರವನ್ನು ಸಂವಿಧಾನಕ್ಕೆ ಸೇರಿಸಲಾಯಿತು. ಆದರೆ, ರಾಜ್ಯ ಭಾಷೆಗಳ ಸ್ಥಾನಮಾನ ವ್ಯಾಪ್ತಿಯ ಬಗ್ಗೆ ಸಂವಿಧಾನಕ್ಕೆ ಅಗತ್ಯ ಮಾರ್ಪಾಡು ಮಾಡಲಿಲ್ಲ, ಹಾಗಾಗಿ ಕನ್ನಡ ಶಿಕ್ಷಣ, ಆಡಳಿತ, ಸಾರ್ವಜನಿಕ ವಲಯಗಳ ಬಳಕೆಯ ಬಗ್ಗೆ ಗೊಂದಲವಿದೆ. ಕನ್ನಡವೂ ಸೇರಿದಂತೆ ಎಲ್ಲ ರಾಜ್ಯದ ಭಾಷೆಗಳ ಉಳಿವಿಗೆ ಸಾಂವಿಧಾನಿಕವಾಗಿಯೇ ಬದಲಾವಣೆ ತರುವ ಅಗತ್ಯವಿದೆ ಎಂದು ಅಭಿಪ್ರಾಯಪಟ್ಟರು.

ಪ್ರೊ.ಆರ್ ವೇಣುಗೋಪಾಲ್‌ರಿಗೆ ಕನ್ನಡ ಅರವಿಂದ ಪ್ರಶಸ್ತಿ, ಹೊಸೂರು ನಾಗರಾಜ್ ಅವರಿಗೆ ಕನ್ನಡ ಚಿರಂಜೀವಿ ಪ್ರಶಸಿ ಪ್ರದಾನ ಮಾಡಲಾಯಿತು. ಚಿಹಾಮೂನಾ ಕನ್ನಡ ಜಾಗೃತಿ ಪುಸ್ತಕ ಬಹುಮಾನ'ವನ್ನು ಪತ್ರಕರ್ತ ಡಾ. ಮಂಜುನಾಥ ಎಂ. ಬಮ್ಮನಕಟ್ಟೆ,ಸಮಾಧಾನಕರ ಬಹುಮಾನವನ್ನು ಅನುವಾದಕ ಮೋಹನ್ ಕುಂಟಾರ್ ಮತ್ತು ಪ್ರೋತ್ಸಾಹಕ ಬಹುಮಾನವನ್ನು ಡಾ. ಎಸ್. ಗುರುಮೂರ್ತಿರಿಗೆ ನೀಡಲಾಯಿತು. ಕಾರ್ಯಕ್ರಮದಲ್ಲಿ ಗಾಂಧಿವಾದಿ ಶಿಕ್ಷಣ ತಜ್ಞ ನಾಡೋಜ ಡಾ.ವೂಡೇಪಿ. ಕೃಷ್ಣ, ರಾ.ನಂ. ಚಂದ್ರಶೇಖರ ಮತ್ತಿತರರು ಇದ್ದರು.

ಸಂಯುಕ್ತ ಕರ್ನಾಟಕ

ಗುರುವಾರ, 5, ಡಿಸೆಂಬರ್. 2024

## ಸಂತ ರಾಜಕಾರಣಿ ಡಿ.ಆರ್. ಪಾಟೀಲ ಗ್ರಂಥ ಲೋಕಾರ್ಪಣೆ। ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಪ್ರತಿಪಾದನೆ

# ಡಿ.ಆರ್. ಪಾಟೀಲರು ರಾಜಕಾರಣಿಗಳಿಗೆ ಆದರ್ಶ

ಗದಗ: ರಾಜಕಾರಣಿಗಳು ಮಾಜಿ ಶಾಸಕ, ಹಿರಿಯ ಸಹಕಾರಿ ಧುರೀಣ, ಗ್ರಾಮೀಣಾಭಿವೃದ್ಧಿ ಹರಿಕಾರ ಡಿ.ಆರ್. ಪಾಟೀಲರಿಂದ ಕಲಿಯುವದು ಬಹಳಷ್ಟಿದೆಯೆಂದು ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಪ್ರತಿಪಾದಿಸಿದರು.

ತೋಂಟದಾರ್ಯ ಮಠದಲ್ಲಿ ಸಂತ ರಾಜಕಾರಣಿ ಡಿ.ಆರ್.ಪಾಟೀಲ ಗ್ರಂಥ ಲೋಕಾರ್ಪಣೆ ಮಾಡಿ ಮಾತನಾಡಿದರು.

ಮಾಜಿ ಶಾಸಕ ಡಿ.ಆರ್. ಪಾಟೀಲ ಸಂತರೂ ಹೌದು, ರಾಜಕಾರಣಿಯೂ ಹೌದು. ಡಿ. ಆರ್.ಪಾಟೀಲ ಇಂದು ಯಾವುದೇ ಹುದ್ದೆಯಲ್ಲಿಲ್ಲದಿದ್ದರೂ ಸಹ ಅಧಿಕಾರ ವಿಕೇಂದ್ರೀಕರಣ, ಪಂಚಾಯತರಾಜ್ ವ್ಯವಸ್ಥೆ, ಗ್ರಾಮೀಣಾಭಿವೃದ್ಧಿ ಬಗ್ಗೆ ಅಪಾರ ಕಳಕಳಿ ಹೊಂದಿದ್ದಾರೆ. ಅವರು ಶಾಸಕರಿಲ್ಲದಿದ್ದರೂ ಸಹ ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಆಗಾಗ್ಗೆ ಪ್ರಶ್ನಿಸಿಜಾರಿಗೊಳಿಸುವಂತೆಒತ್ತಾಯಿಸುತ್ತಿರುವದು ಅವರ ಬದ್ಧತೆಗೆ ಸಾಕ್ಷಿಯಾಗಿದೆಯೆಂದು ಹೇಳಿದರು.

> ರಾಜ್ಯ ರಾಜಕಾರಣದಲ್ಲಿ ಹುಲಿಯೆಂದೇ ಖ್ಯಾತರಾಗಿದ್ದ ದಿ.ಕೆ. ಎಚ್. ಪಾಟೀಲ ಎಲ್ಲ ಅರ್ಹತೆಯಿದ್ದರೂ ಮುಖ್ಯಮಂತ್ರಿಯಾಗದಿದ್ದುದು ರಾಜ್ಯದ ದುರ್ದೈವವಾಗಿದೆ. ದಿ.ಕೆ.ಎಚ್. ಪಾಟೀಲರಿಗೆ ಆಗಿರುವ ಅನ್ಯಾಯ ಸರಿಪಡಿಸಲು ಸಚಿವ ಎಚ್.ಕೆ. ಪಾಟೀಲರನ್ನು ಮುಖ್ಯಮಂತ್ರಿಯನ್ನಾಗಿಸಬೇಕು.
>
> ■ ಪ್ರಮೋದ ಹೆಗಡೆ, ಸಹಕಾರ ಧುರೀಣ



ಗದಗ ತೋಂಟದಾರ್ಯ ಮಠದಲ್ಲಿ ಸಂತ ರಾಜಕಾರಣಿ ಗ್ರಂಥ ಲೋಕಾರ್ಪಣೆ ಸಂದರ್ಭದಲ್ಲಿ ಮಾಜಿ ಶಾಸಕ ಡಿ.ಆರ್.ಪಾಟೀಲ, ಸುಮಿತ್ರಾ ಪಾಟೀಲರನ್ನು ಬಸವರಾಜ ಹೊರಟ್ಟಿ, ಸಚಿವ ಡಾ. ಎಚ್.ಕೆ. ಪಾಟೀಲ, ಡಾ.ಸಿದ್ಧರಾಮ ಶ್ರೀಗಳು ಸನ್ಮಾನಿಸಿದರು.

ರಾಜಕೀಯ ವ್ಯವಸ್ಥೆ ಅಧೋಗತಿಗೆ ಇಳಿದಿದೆ. ಹಣ ಪಡೆದು ಮತ ನೀಡುವವರು ಇರುವವರೆಗೆ ಈ ವ್ಯವಸ್ಥೆ ಮುಂದುವರೆಯುತ್ತದೆ. ಹಣ ನೀಡಿ ಚುನಾಯಿತನಾದ ವ್ಯಕ್ತಿಯಿಂದ ಯಾವ ಅಭಿವೃದ್ಧಿ ನಿರೀಕ್ಷಿಸಲು ಸಾಧ್ಯವೆಂದು ಪ್ರಶ್ನಿಸಿದರು. ಡಿ.ಆರ್. ಪಾಟೀಲ ಭ್ರಷ್ಟ ರಾಜಕೀಯ ವ್ಯವಸ್ಥೆಗೆ ಅಪವಾದವಾಗಿದ್ದಾರೆ. ಇಂತಹ ವ್ಯಕ್ತಿಗಳನ್ನು ದೀಪ ಹಚ್ಚಿ ಹುಡುಕುವಂತಹ ಪರಿಸ್ಥಿತಿ ನಿರ್ಮಾಣವಾಗಿದೆಯೆಂದು ಹೇಳಿದರು.

ಕಂದಾಯ ಸಚಿವ ಕೃಷ್ಣ ಭೈರೇಗೌಡ ಮಾತನಾಡಿ, ಹಿಂದೆ ರಾಜಕಾರಣ ಸೇವಾಕಾರಣವಾಗಿತ್ತು. ರಾಜಕೀಯ ರಂಗಕ್ಕೆ ಸೇವಾ ಮನೋಭಾವನೆಯಿಂದ ಜನರು ಬರುತ್ತಿದ್ದರು. ಇಂದು ಸ್ವಕಾರಣವಾಗಿ ಬದಲಾಗಿದೆ. ಆದರೂ ಸಹ ಡಿ.ಆರ್. ಪಾಟೀಲ ಬದಲಾವಣೆಯಾಗಿಲ್ಲ. ಇಂತಹವರನ್ನು ನಾಮಕರಣದ ಮೂಲಕವಾದರೂ ಸಹ ಶಾಸನಸಭೆಗಳಿಗೆ ಕರೆದುಕೊಂಡು ಹೋಗಬೇಕೆಂಬ ಪರಿಸ್ಥಿತಿಯಿಲ್ಲ. ಡಿ.ಆರ್. ಪಾಟೀಲ ಸಾಕ್ಷಿಯ ಗುಡ್ಡೆಯಾಗಿದ್ದಾರೆಂದು ಬಣ್ಣಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಕೃಷ್ಣ ಮಾತನಾಡಿ, ಶೇ.47 ರಷ್ಟು ಸಂಸದರ ಮೇಲೆ ಕ್ರಿಮಿನಲ್ ಪ್ರಕರಣಗಳಿವೆ. ಸಾರ್ವಜನಿಕ ಜೀವನ ಕಲುಷಿತವಾಗಿದೆ. ಡಿ.ಆರ್. ಪಾಟೀಲ [illegible] ಗಾಂಧಿಯನ್ನು ಹೋಲುತ್ತಾರೆ. [illegible] ಚಿಂತನೆಯನ್ನು ಇಂದಿನ ರಾಜಕೀಯ [illegible] ಅಳವಡಿಸಿಕೊಳ್ಳುವಂತೆ ಸಲಹೆ [illegible] ಅಪರೂಪದ ರಾಜಕಾರಣಿಯಾಗಿರುವ ಡಿ.ಆರ್. ಪಾಟೀಲ ಇತರರ ಸ್ಫೂರ್ತಿಗೆ [illegible] ಹೊಂದಿದ್ದಾರೆ. ಅವರು ಜೀವನದಲ್ಲಿ [illegible] ಬಗ್ಗೆಯೂ ಕೆಟ್ಟದಾಗಿ ಮಾತನಾಡಿಲ್ಲ. [illegible] ಟೀಕಿಸಿದವರನ್ನು ಸಹ ಅತ್ಯಂತ [illegible] ಕಂಡ ಮಹಾನ್ ವ್ಯಕ್ತಿಯಾಗಿದ್ದಾರೆಂದು ಬಣ್ಣಿಸಿದರು.

> ಡಿ.ಆರ್. ಪಾಟೀಲರು ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಪದೇ ಪದೇ ಸರಕಾರ, ಸಚಿವರುಗಳಿಗೆ ಕೆಳ ಹಂತದವರಿಗೆ ಅಧಿಕಾರ ಕೊಡುವ ವಿಚಾರದಲ್ಲಿ ಸ್ಪಷ್ಟತೆಯಿಲ್ಲ. ಸಚಿವರು, ಶಾಸಕರುಗಳು ಪಂಚಾಯತಿಗಳು ಹಾಗೂ ಸರಕಾರದ ಮಧ್ಯೆ ಇರುವ ಕೊಂಡಿಯಾಗಿ ಕಾರ್ಯ ನಿರ್ವಹಿಸಬೇಕೆಂಬ ನಿಲುವು ಹೊಂದಿದ್ದಾರೆ.
>
> ■ ಡಾ.ಎಚ್.ಕೆ. ಪಾಟೀಲ, ಕಾನೂನು ಸಚಿವ

> ಶಾಸಕನಾಗಿದ್ದ ಸಂದರ್ಭದಲ್ಲಿಯೇ ಗದಗ ಮತಕ್ಷೇತ್ರದ ಟಿಕೇಟ್‌ನ್ನು ಸಹೋದರ ಎಚ್.ಕೆ. ಪಾಟೀಲರಿಗೆ ಬಿಟ್ಟುಕೊಟ್ಟದ್ದನ್ನು ಎಲ್ಲರೂ ತಮ್ಮ ತ್ಯಾಗವೆಂದು ಭಾವಿಸಿದ್ದಾರೆ. ವಾಸ್ತವದಲ್ಲಿ ತಮ್ಮ ಚಿಕ್ಕಪ್ಪ ದಿ.ಕೆ.ಎಚ್.ಪಾಟೀಲ ನಿಧನರಾದ ಸಂದರ್ಭದಲ್ಲಿ ವಿಧಾನ ಪರಿಷತ್ ಸದಸ್ಯರಾಗಿದ್ದ ಎಚ್.ಕೆ. ಪಾಟೀಲ ಗದಗ ಮತಕ್ಷೇತ್ರದಲ್ಲಿ ತಾವು ಸ್ಪರ್ಧಿಸುವ ಬದಲಿಗೆ ದೆಹಲಿಗೆ ತೆರಳಿ ಟಿಕೆಟ್ ತಂದು ತಮ್ಮನ್ನು ನಾಲ್ಕು ಬಾರಿ ಶಾಸಕರಾಗಿ ಆಯ್ಕೆ ಮಾಡಿ ದೊಡ್ಡ ತ್ಯಾಗ ಮಾಡಿದ್ದಾರೆ.
>
> ■ ಡಿ.ಆರ್.ಪಾಟೀಲ, ಮಾಜಿ ಶಾಸಕ

ವಿಧಾನ ಪರಿಷತ್ ಸದಸ್ಯ [illegible] ಎಸ್.ವಿ.ಸಂಕನೂರ ಮಾತನಾಡಿ, [illegible] ರಾಜಕಾರಣಿಯಾಗಿರುವ ಡಿ.ಆರ್. ಪಾಟೀಲ ಸಚಿವರಾಗಬೇಕಾಗಿತ್ತು. [illegible] ಅಪಾರ ಸಾಧನೆ ಮಾಡಿರುವ ಅವರು [illegible] ಸಾಧನೆ [illegible] ಪ್ರತಿಪಾದಿಸಿದರು.

ಮಾಜಿ ಶಾಸಕ ಡಿ.ಆರ್.ಪಾಟೀಲ ಮಾತನಾಡಿ, ರಾಜಕೀಯ ವ್ಯಕ್ತಿಗಳು ಹಣ ನೀಡಿದರೇ ಮತದಾರರು ತಿರಸ್ಕರಿಸುವಂತಹ ಪರಿಸ್ಥಿತಿ ನಿರ್ಮಾಣವಾಗಬೇಕು. ಆಗ ಮಾತ್ರ [illegible] ರಾಜಕೀಯ ವ್ಯವಸ್ಥೆ ಸುಧಾರಿಸಲು [illegible] ಹೇಳಿದರು.

ಡಾ.ಸಿದ್ಧರಾಮ [illegible] ನಿರ್ಭಯಾನಂದ ಸರಸ್ವತಿ [illegible] ವೇದಿಕೆಯ ಮೇಲೆ [illegible] ಎಸ್.ಪಾಟೀಲ, ಪ್ರೊ.ಎಸ್.ಪಿ.[illegible] ಎಚ್.ಕೋನರಡ್ಡಿ ಮುಂತಾದವರಿದ್ದರು.

ಉದಯವಾಣಿ ಬೆಂಗಳೂರು
ಬುಧವಾರ, ಡಿಸೆಂಬರ್ 4, 2024

# ವಿವಿಧ ಕ್ಷೇತ್ರಗಳ ಸಾಧಕರಿಗೆ 'ಚಾಣಕ್ಯ ಪ್ರಶಸ್ತಿ' ಪ್ರದಾನ



**ಉದಯವಾಣಿ ಸಮಾಚಾರ**

**ಬೆಂಗಳೂರು:** ನಗರದ ಪಬ್ಲಿಕ್ ರಿಲೇಶನ್ಸ್ ಕೌನ್ಸಿಲ್ ಆಫ್ ಇಂಡಿಯಾ, ಪ್ಯಾನ್-ಇಂಡಿಯಾ ಪ್ರೊಫೆಷನಲ್ ಅಸೋಸಿಯೇಷನ್‌ನಿಂದ 2024ನೇ ಸಾಲಿನ ಚಾಣಕ್ಯ ಪ್ರಶಸ್ತಿಗೆ ಭಾಜನರಾದ ನಾಡೋಜ ಡಾ.ಎಸ್. ಷಡಕ್ಷರಿ, ಪಾಕಶಾಲಾ ಹೋಟೆಲ್ ಸಂಸ್ಥಾಪಕ ಕೆ.ಎನ್. ವಾಸುದೇವ ಅಡಿಗ, ನಿವೃತ್ತ ಐಎಎಸ್ ಅಧಿಕಾರಿ ಡಾ.ಮಮತಾ, ಪತ್ರಕರ್ತರಾದ ಗಿರೀಶ್ ರಾವ್ ಹತ್ವಾರ್ (ಜೋಗಿ), ಇಂದೂಧರ ಹೊನ್ನಾಪುರ, ಚಿತ್ರ ನಿರ್ದೇಶಕ ಮನೋಹರ್, ಸಂಗೀತ ನಿರ್ದೇಶಕ ಗುರುಕಿರಣ್ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸಮಾರಂಭದಲ್ಲಿ ಡಾ.ವುಡೇ ಪಿ. ಕೃಷ್ಣ, ನಿವೃತ್ತ ಐಎಎಸ್ ಅಧಿಕಾರಿ ಡಾ.ಸಿ. ಸೋಮಶೇಖರ್, ವಿಶ್ರಾಂತ ಕುಲಪತಿ ಡಾ.ಕೆ.ಆರ್. ವೇಣುಗೋಪಾಲ್, ಕೊಪ್ಪಳ ವಿವಿ ಕುಲಪತಿ ಡಾ.ಬಿ.ಕೆ. ರವಿ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ

ಮಂಗಳವಾರ • ಡಿಸೆಂಬರ್ 3, 2024



## ಪ್ರಶಸ್ತಿಗೆ ಆಯ್ಕೆ: ಸನ್ಮಾನ

ಪಬ್ಲಿಕ್ ರಿಲೇಶನ್ಸ್ ಕೌನ್ಸಿಲ್ ಆಫ್ ಇಂಡಿಯಾದ (ಪಿಆರ್‌ಸಿಐ) ಜಾಗತಿಕ 'ಚಾಣಕ್ಯ' ಪ್ರಶಸ್ತಿಗೆ ಆಯ್ಕೆಯಾಗಿರುವ ಸಾಧಕರಾದ ಮಮತಾ ಬಿ.ಆರ್, ಕೆ.ಎನ್. ವಾಸುದೇವ ಅಡಿಗ, ಇಂದೂಧರ ಹೊನ್ನಾಪುರ, ಗಿರೀಶ್ ರಾವ್ ಹತ್ವಾರ್, ಎಸ್. ಷಡಕ್ಷರಿ, ಮನೋಹರ್, ಗುರುಕಿರಣ್ ಅವರನ್ನು ಪ್ಯಾನ್ ಇಂಡಿಯಾ ಪ್ರೊಫೆಷನಲ್ ಅಸೋಸಿಯೇಷನ್ ವತಿಯಿಂದ ಸನ್ಮಾನಿಸಲಾಯಿತು. ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ ನಿವೃತ್ತ ಐಎಎಸ್ ಅಧಿಕಾರಿ ಸಿ. ಸೋಮಶೇಖರ್, ಮಿಸ್ ಗ್ಲೋಬಲ್ ಇಂಡಿಯಾ ಸ್ವೀಜಲ್ ಪುರ್ಟಾಡೊ, ನಟ ರವಿಕಿರಣ್, ಪಿಆರ್‌ಸಿಐ ಅಧ್ಯಕ್ಷ ಎಂ.ಬಿ. ಜಯರಾಮ್, ನಿವೃತ್ತ ಕುಲಪತಿ ಕೆ.ಆರ್. ವೇಣುಗೋಪಾಲ್, ಕೊಪ್ಪಳ ವಿಶ್ವವಿದ್ಯಾಲಯದ ಕುಲಪತಿ ಬಿ.ಕೆ ರವಿ, ಪಿಆರ್‌ಸಿಐ ರಾಷ್ಟ್ರೀಯ ಅಧ್ಯಕ್ಷೆ ಗೀತಾ ಶಂಕರ್ ಭಾಗವಹಿಸಿದ್ದರು

ಪ್ರಜಾವಾಣಿ
ಮಂಗಳವಾರ • ಡಿಸೆಂಬರ್ 3, 2024

## ನಗರದಲ್ಲಿ ಇಂದು

**ಪ್ರಶಸ್ತಿ ಪ್ರದಾನ, ಪುಸ್ತಕ ಬಹುಮಾನ, ಎಲ್.ಎಸ್.ಎಸ್. 100ರ ನೆನಪಿನಲ್ಲಿ ಕನ್ನಡ ಶಾಲೆ ಪ್ರಶಸ್ತಿ, ಕನ್ನಡ ಮಾಧ್ಯಮ ಮಕ್ಕಳಿಗೆ ಪುರಸ್ಕಾರ:** ಅಧ್ಯಕ್ಷತೆ: ವೂಡೇ ಪಿ. ಕೃಷ್ಣ, ಅತಿಥಿಗಳು: ಎಲ್. ಹನುಮಂತಯ್ಯ, ಟಿ.ಎಸ್. ನಾಗಾಭರಣ, ಉಪಸ್ಥಿತಿ: ವ.ಚ. ಚನ್ನೇಗೌಡ, ಅಮೃತ ನಾರಾಯಣ್, ಭಾರತಿ ಶೇಷಗಿರಿರಾವ್, ಆಯೋಜನೆ: ಕನ್ನಡ ಗೆಳೆಯರ ಬಳಗ, ಕರ್ನಾಟಕ ಕಾರ್ಮಿಕಲೋಕ, ಸ್ಥಳ: ನಯನ ಸಭಾಂಗಣ, ಕನ್ನಡ ಭವನ, ಜೆ.ಸಿ. ರಸ್ತೆ, ಸಂಜೆ 5.30

ಪ್ರಜಾವಾಣಿ

Nov 30, 2024

## ಗಾಂಧೀಜಿಯವರ ಬದುಕು ಮತ್ತು ಹೋರಾಟ– ವಿಚಾರಸಂಕಿರಣ: ಪ್ರೊ.ಎಸ್.ಜಿ.ಸಿದ್ದರಾಮಯ್ಯ

# ಯುವಜನರ ಹೃದಯದಲ್ಲಿ ಗಾಂಧಿ ಅರಳಲಿ

ಪ್ರಜಾವಾಣಿ ವಾರ್ತೆ

ಕೆ.ಆರ್. ಪೇಟೆ: 'ಯುವ ಜನಾಂಗದ ಹೃದಯದೊಳಗೆ ಗಾಂಧಿ ವಿಚಾರಗಳು ಅರಳುವಂತೆ ಮಾಡುವುದರ ಮೂಲಕ ವಾಟ್ಸ್‌ಆ್ಯಪ್ ಎಂಬ ವಿಶ್ವವಿದ್ಯಾಲಯ ಹರಡುತ್ತಿರುವ ವಿಷಕಾರಕ ಸುದ್ದಿಗಳಿಂದ ಅವರನ್ನು ರಕ್ಷಿಸುವ ಕೆಲಸವಾಗಬೇಕಿದೆ' ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಪ್ರೊ.ಎಸ್.ಜಿ. ಸಿದ್ದರಾಮಯ್ಯ ಅಭಿಪ್ರಾಯಪಟ್ಟರು.

ಪಟ್ಟಣದ ಗ್ರಾಮ ಭಾರತಿ ವಿದ್ಯಾಸಂಸ್ಥೆಯ ಸಭಾಂಗಣದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕೆ.ಆರ್. ಪೇಟೆ ಮಾಜಿ ಸ್ಪೀಕರ್ ಕೃಷ್ಣ ಪ್ರತಿಷ್ಠಾನ, ಉದಯ ರವಿ ಟ್ರಸ್ಟ್, ಕರ್ನಾಟಕ ರಾಜ್ಯ ರೈತ ಸಂಘ ಸೇರಿದಂತೆ ವಿವಿಧ ಸಂಘ-ಸಂಸ್ಥೆಗಳ ಆಶ್ರಯದಲ್ಲಿ ಶುಕ್ರವಾರದಿಂದ ಆಯೋಜಿಸಿದ್ದ 'ಮಹಾತ್ಮ ಗಾಂಧೀಜಿಯವರ ಬದುಕು ಮತ್ತು ಹೋರಾಟ' ಎಂಬ ಎರಡು ದಿನಗಳ ವಿಚಾರಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ನಾವು ಇಂದು ದುರಿತ ಕಾಲಘಟ್ಟದಲ್ಲಿ ಇದ್ದೇವೆ. ಗಾಂಧೀಜಿಯವರ ಮೌಲ್ಯ ಮತ್ತು ಚಿಂತನೆಗಳಿಂದ ದೂರ ಸಾಗುವ ಪರಿಸ್ಥಿತಿಯಲ್ಲಿದ್ದೇವೆ. ಸುಳ್ಳನ್ನೇ ಸಾವಿರ ಬಾರಿ ಹೇಳುತ್ತಾ ಇದನ್ನೇ ಸತ್ಯ ಎಂದು ಭ್ರಮಿಸುವವರ ನಡುವೆ ಬದುಕುತ್ತಿದ್ದೇವೆ. ಇಂತಹ ಸುಳ್ಳು ಸಂಕಥನಗಳನ್ನೇ ಸತ್ಯ ಎಂದು ಭಾವಿಸುತ್ತಿರುವ ನಮ್ಮ ಯುವಕರ ತಲೆಯಲ್ಲಿ ವಾಟ್ಸ್‌ಆ್ಯಪ್ ಎಂಬ ಯೂನಿವರ್ಸಿಟಿ ಬಿತ್ತುವ ವಿಷದ ಬೀಜಗಳು ಹೆಮ್ಮರವಾಗುತ್ತಿರುವುದು ಆತಂಕದ ವಿಚಾರವಾಗಿದೆ ಎಂದು ಕಳವಳ ವ್ಯಕ್ತಪಡಿಸಿದರು.

ದ್ವೇಷವನ್ನು ಪ್ರೀತಿಯಿಂದ ಗೆಲ್ಲಬೇಕು. ಹಿಂಸೆಯನ್ನು ಅಹಿಂಸೆಯ ಮೂಲಕ ಮಣಿಸಬೇಕು. ಸತ್ಯಾಗ್ರಹದ ಮೂಲಕವೇ ಹೋರಾಟದ ಕಿಚ್ಚನ್ನು ಹೆಚ್ಚಿಸಬೇಕೆಂಬುದು ಗಾಂಧೀಜಿಯವರ ನಿಲುವುಗಳಾಗಿದ್ದವು. ಇಂದು ನಮ್ಮೊಳಗೆ ಗಾಂಧಾರಿಯ ಪ್ರಜ್ಞೆ ಬರಬೇಕಿದೆ. ಪರರ ನೋವನ್ನು ನಮಗೆ ಆವಾಹಿಸಿಕೊಂಡಾಗ ಮಾತ್ರ ಬೇರೆಯವರ ಸಂಕಟದ ಅರ್ಥ ಅರಿವಾಗುತ್ತದೆ. ಆದ್ದರಿಂದ ಬಸವಣ್ಣನವರ ಪ್ರಜ್ಞೆ ಮತ್ತು ಗಾಂಧೀಜಿಯವರ ದೃಷ್ಟಿಯನ್ನು ಸರಿಯಾದ ರೀತಿಯಲ್ಲಿ ಯುವಕರಿಗೆ ತಿಳಿಸಿ ಕೊಡುವ ಪ್ರಯತ್ನ ನಡೆಯಲಿ ಎಂದರು.

ಆಶಯ ಭಾಷಣ ಮಾಡಿದ ಮಂಡ್ಯದ ಕರ್ನಾಟಕ ಸಂಘದ ಅಧ್ಯಕ್ಷ ಪ್ರೊ.ಜಯಪ್ರಕಾಶಗೌಡ ಮಾತನಾಡಿ, 'ಗಾಂಧೀಜಿಯನ್ನು ಪೂರ್ಣವಾಗಿ ಅರ್ಥ ಮಾಡಿಸುವ , ಅವರನ್ನು ಎದೆಯ ಆಳಕ್ಕೆ ಇಳಿಸುವ ಕೆಲಸವನ್ನು ಮಾಡಬೇಕಿದೆ. ಇನ್ನೊಬ್ಬರ ಅವಲಂಬನೆ ಮಾಡದೆ ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳಬೇಕೆಂಬುದು ಗಾಂಧೀಜಿಯವರ ತತ್ವವಾಗಿತ್ತು. ಈ ತತ್ವವನ್ನು ನಾವು ಇಂದು ಮರೆತಿರುವುದರಿಂದಲೇ ಹಲವು ಸಮಸ್ಯೆಗಳು ಉದ್ಭವಿಸಿವೆ. ಈ ಬಗ್ಗೆ ತಿಳಿವಳಿಕೆ ಮೂಡಿಸುವ ಕೆಲಸವಾಗಲಿ' ಎಂದರು.

ಕಾರ್ಯಕ್ರಮ ಸಂಚಾಲಕ ಕತ್ತರಘಟ್ಟ ವಾಸು ಪ್ರಾಸ್ತಾವಿಕವಾಗಿ ಮಾತನಾಡಿದರು.

ಸಮಾರಂಭದಲ್ಲಿ ರೈತ ಸಂಘದ ಮುಖಂಡ ಮುದುಗೆರೆ ರಾಜೇಗೌಡ, ಕಾರಿಗನಹಳ್ಳಿ ಪುಟ್ಟೇಗೌಡ, ಉದಯರವಿ ಟ್ರಸ್ಟ್ ಅಧ್ಯಕ್ಷ ಕೆ .ಎಸ್. ಸೋಮಶೇಖರ್, ಗ್ರಾಮಭಾರತಿ ವಿದ್ಯಾಸಂಸ್ಥೆಯ ಅಧ್ಯಕ್ಷ ಕಿರಣ್ ಕುಮಾರ್, ಲೇಖಕಿ ಎಚ್.ಎಸ್. ಅನುಪಮಾ, ಕೆ.ಆರ್. ಪೇಟೆ ಕೃಷ್ಣ ಪ್ರತಿಷ್ಠಾನದ ಅಧ್ಯಕ್ಷ ಗೂಡೇ ಹೊಸಹಳ್ಳಿ ಜವರಾಯಿ ಗೌಡ, ರಂಗಕರ್ಮಿ ಶಶಿಧರ್ ಬಾರಿಘಟ್ ಸೇರಿದಂತೆ ತಾಲ್ಲೂಕಿನ ಪದವಿಪೂರ್ವ ಮತ್ತು ಪದವಿ ಕಾಲೇಜಿನ ಪ್ರಾಂಶುಪಾಲರು, ಉಪನ್ಯಾಸಕರು ಮತ್ತು ವಿದ್ಯಾರ್ಥಿಗಳು, ವಿವಿಧ ಸಂಘಟನೆಗಳ ಪದಾಧಿಕಾರಿಗಳು ಭಾಗವಹಿಸಿದ್ದರು.

'ಸಾಮಾನ್ಯ ಗಾಂಧಿಯನ್ನು ಹೋರಾಟಗಾರ ಗಾಂಧಿಯನ್ನಾಗಿ ರೂಪಿಸಿದ ಘಟನೆಗಳ ಪಕ್ಷಿನೋಟ' ಎಂಬ ವಿಷಯ ಕುರಿತು ಉಪನ್ಯಾಸಕ ರೋಹಿತ್ ಅಗಸರಹಳ್ಳಿ, 'ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಪುಸ್ತಕಗಳು ಹಾಗೂ ವ್ಯಕ್ತಿಗಳು' ಕುರಿತು ಉಪನ್ಯಾಸಕ ಲೋಕೇಶ್ ಬೆಕ್ಕಳಲೆ , 'ಮಂಡ್ಯ ಜಿಲ್ಲೆಯಲ್ಲಿ ಗಾಂದೀಜಿಯವರ ಹೆಜ್ಜೆಗಳು' ಕುರಿತು ಸಹ ಪ್ರಾಧ್ಯಾಪಕ ಡಾ.ಎಸ್. ಶಿವರಾಮು, 'ಗ್ರಾಮೀಣ ಯುವಜನತೆ ಮತ್ತು ಸ್ವಾವಲಂಬನೆ' ಕುರಿತು ಆಕ್ಸ್‌ಫರ್ಡ್ ಇಂದಿರಾಗಾಂಧಿ ಸ್ಕಾಲರ್ ಇಂಗ್ಲೆಂಡ್ ವಿಶ್ವವಿದ್ಯಾನಿಲಯದ ಸುಮನಸ್ ಕೌಲಗಿ ಮಾತನಾಡಿದರು.



ಕೆ.ಆರ್.ಪೇಟೆ ಪಟ್ಟಣದ ಗ್ರಾಮ ಭಾರತಿ ವಿದ್ಯಾಸಂಸ್ಥೆಯ ಸಭಾಂಗಣದಲ್ಲಿ ವಿವಿಧ ಸಂಘಸಂಸ್ಥೆಗಳ ಆಶ್ರಯದಲ್ಲಿ ಆಯೋಜಿಸಿದ್ದ ಮಹಾತ್ಮ ಗಾಂಧೀಜಿಯವರ ಬದುಕು ಮತ್ತು ಹೋರಾಟ ವಿಚಾರಸಂಕಿರಣದಲ್ಲಿ ಪ್ರೊ. ಎಸ್.ಜಿ. ಸಿದ್ದರಾಮಯ್ಯ ಮಾತನಾಡಿದರು. ಕರ್ನಾಟಕ ಸಂಘದ ಅಧ್ಯಕ್ಷ ಪ್ರೊ.ಜಯಪ್ರಕಾಶಗೌಡ, ವೂಡೆ ಪಿ. ಕೃಷ್ಣ ಪಾಲ್ಗೊಂಡಿದ್ದರು

> ಗಾಂಧಿ ವಿಚಾರಧಾರೆಯನ್ನು ವಿದ್ಯಾರ್ಥಿಗಳಲ್ಲಿ ಬಿಂಬಿಸುವ ಕೆಲಸವನ್ನು ನಾವು ಮಾಡದಿದ್ದರೆ ಮುಂದೆ ಶಾಪಗ್ರಸ್ತರ ಸ್ಥಾನದಲ್ಲಿರಬೇಕಾಗುತ್ತದೆ
>
> **ಜಿ.ಬಿ. ಶಿವರಾಜು, ನಿರ್ದೇಶಕ, ಬೆಂಗಳೂರಿನ ಗಾಂಧಿ ಭವನ**

> ಗಾಂಧೀಜಿಯನ್ನು ಪೂಜಿಸುವ ಅಗತ್ಯವಿಲ್ಲ. ಅವರ ತತ್ವಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡರೆ ಸಾಕು. ಟೀಕಿಸುವ ಮೊದಲು ಅವರ ಚಿಂತನೆಗಳನ್ನು ಓದಿ ಅರ್ಥೈಸಿಕೊಳ್ಳಿ
>
> **ವೂಡೆ ಪಿ. ಕೃಷ್ಣ, ಅಧ್ಯಕ್ಷ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ**

ಕನ್ನಡಪ್ರಭ

Nov 30, 2024

# ಬಸವಣ್ಣನ ಚಿಂತನೆಗಳ ವಿಸ್ತೃತ ರೂಪವೇ ಗಾಂಧಿ

## ಪ್ರೊ ಸಿದ್ದರಾಮಯ್ಯ ಅಭಿಪ್ರಾಯ | ಮಹಾತ್ಮನ ಬದುಕು– ಬರಹ ಮತ್ತು ಹೋರಾಟ ಕುರಿತ ವಿಚಾರ ಸಂಕಿರಣಕ್ಕೆ ಚಾಲನೆ

• ಕನ್ನಡಪ್ರಭ ವಾರ್ತೆ ಕೆ.ಆರ್.ಪೇಟೆ

ಕಾಯಕವೇ ಕೈಲಾಸ ಎಂದಿದ್ದ ಬಸವಣ್ಣನವರ ಚಿಂತನೆಗಳ ವಿಸ್ತೃತ ರೂಪವೇ ಮಹಾತ್ಮ ಗಾಂಧಿ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದಮಾಜಿಅಧ್ಯಕ್ಷಪ್ರೊ. ಎಸ್.ಜಿ.ಸಿದ್ದರಾಮಯ್ಯ ಅಭಿಪ್ರಾಯಪಟ್ಟರು.

ಪಟ್ಟಣದ ಗ್ರಾಮ ಭಾರತಿ ವಿದ್ಯಾ ಸಂಸ್ಥೆಯ ಆವರಣದಲ್ಲಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕರ್ನಾಟಕ ಸಂಘ, ಕೆ.ಆರ್.ಪೇಟೆ ಉದಯ ರವಿ ಟ್ರಸ್ಟ್, ಅಕ್ಕಿಹೆಬ್ಬಾಳಿನ ಲೋಕಾಯನ ಕಲ್ಚರಲ್ ಟ್ರಸ್ಟ್, ತಾಲೂಕು ರೈತಸಂಘ, ತಾಲೂಕು ಪದವಿಪೂರ್ವ ಉಪನ್ಯಾಸಕ ಸಂಘ ಮತ್ತು ಗ್ರಾಮ ಭಾರತಿ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ತಾಲೂಕಿನ ಕಾಲೇಜು ವಿದ್ಯಾರ್ಥಿಗಳಿಗಾಗಿ ಆಯೋಜಿಸಿರುವ ಮಹಾತ್ಮ ಗಾಂಧಿಯವರ ಬದುಕು- ಬರಹ ಮತ್ತು ಹೋರಾಟ ಕುರಿತ ಎರಡು ದಿನಗಳ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು.

ಭಾರತೀಯ ಪರಂಪರೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್, ಗಾಂಧಿ ಮತ್ತು ಕುವೆಂಪು ನಿತ್ಯ ಸ್ಮರಣೀಯ ವ್ಯಕ್ತಿತ್ವಗಳು. 12ನೇ ಶತಮಾನದಲ್ಲಿ ಬಸವಣ್ಣ ತೋರಿಸಿದ ಸರ್ವ ಸಮಾನ ಸಮಾಜ ನಿರ್ಮಾಣದ ಕನಸಿನ ತಳಹದಿಯ ಮೇಲೆ ಗಾಂಧಿಯವರ ಚಿಂತನೆಗಳು ವಿಸ್ತೃತಗೊಂಡಿವೆ ಎಂದರು.

ಗಾಂಧಿ ಸಮಾಜ ಸುಧಾರಕರಲ್ಲ, ಬದಲಾಗಿ ಹೃದಯಗಳನ್ನು ಸುಧಾರಿಸಲು ಪ್ರಯತ್ನಿಸಿದವರು. ಅಹಿಂಸೆ ಎನ್ನುವುದು ಗಾಂಧಿ ಮಾನವ ಜಗತ್ತಿಗೆ ನೀಡಿದ ಬಹುದೊಡ್ಡ ಹೋರಾಟದ ಅಸ್ತ್ರ. ಜಗತ್ತಿನ ಮೇಲೆ ಮಹಾತ್ಮ ಗಾಂಧಿ ಬೀರಿದ ಪ್ರಭಾವ ಅಸಾಮಾನ್ಯವಾದುದು ಎಂದು ತಿಳಿಸಿದರು.



ಮಹಾತ್ಮ ಗಾಂಧಿಯವರ ಕುರಿತ ವಿಚಾರ ಸಂಕಿರಣವನ್ನು ಪ್ರೊ. ಎಸ್.ಜಿ.ಸಿದ್ದರಾಮಯ್ಯ ಚರಕ ನೂಲುವ ಮೂಲಕ ಉದ್ಘಾಟಿಸಿದರು.

ಭಾರತವನ್ನು ಸ್ವಾತಂತ್ರ್ಯದ ಕಡೆಗೆ ಕರೆದೊಯ್ಯುವಂತಹ ಅಹಿಂಸಾತ್ಮಕ ಹೋರಾಟದ ಪ್ರಯೋಗ ಭಾರತದಿಂದ ಬ್ರಿಟಿಷರನ್ನು ಓಡಿಸಿತಲ್ಲದೆ ನೆಲ್ಸನ್ ಮಂಡೇಲ, ಮಾರ್ಟಿನ್ ಲೂಥರ್‌ಕಿಂಗ್ ಅವರಂತಹ ಭವಿಷ್ಯದ ನಾಯಕರಿಗೆ ಪ್ರೇರಣೆಯಾಯಿತು.ಜಗತ್ತಿನಉದ್ದಗಲಕ್ಕೂಸ್ವಾತ್ಯಂತ್ರ್ಯಕ್ಕಾಗಿ ನಡೆದ ಚಳುವಳಿಗಳಿಗೆ ಆದರ್ಶವಾಯಿತು. ಸತ್ಯಾಗ್ರಹ ಮತ್ತು ಅಹಿಂಸಾ ತತ್ವಗಳ ಪ್ರವರ್ತಕರಾಗಿದ್ದ ಗಾಂಧಿಯವರ ಜೀವನದಲ್ಲಿ ಜಗತ್ತಿನ ಶಾಂತಿಗೆ ಅಗತ್ಯವಾದ ಮದ್ದಿದೆ ಎಂದರು.

ಗಾಂಧಿ ಮತ್ತು ಅಂಬೇಡ್ಕರ್‌ಇಬ್ಬರೂ ಧರ್ಮನಿರಪೇಕ್ಷ... ಧರ್ಮನಿತರ ಪರವಾಗಿ ಧ್ವನಿಯೆತ್ತಿದವರು. ಆದರೆ ಇಂದು ಮತಬ್ಯಾಂಕ್ ರಾಜಕಾರಣಕ್ಕಾಗಿ ಗಾಂಧಿ ಮತ್ತು ಅಂಬೇಡ್ಕರ್‌ಅವರನ್ನು ಮುಖಾಮುಖಿಯಾಗಿಸಲಾಗಿದೆ. ಹಣವುಳ್ಳವರ ಮತ್ತು ವಾಮಮಾರ್ಗದಲ್ಲಿ ಅಧಿಕಾರ ಪಡೆದವರನ್ನು ಯುವ ಸಮುದಾಯ ಹಿಂಬಾಲಿಸುತ್ತಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಸಹಿಷ್ಣುತೆ, ಸಹಬಾಳ್ವೆ ಮತ್ತು ಸಮನ್ವಯ ಬದುಕಿನ ಪ್ರತೀಕವಾಗಿದ್ದ ಗಾಂಧಿಯ ಬಗೆಗೆ ಅಸಹನೆಯಿಂದ ಮಾತನಾಡುತ್ತಾ, ಹಿಂಸಾ ಪ್ರವೃತ್ತಿಯನ್ನು ಚಿಗುರೊಡಿಸುವ ಕೆಲಸ ಮಾಡಲಾಗುತ್ತಿದೆ. ಸಮಸ್ತ ವಿಶ್ವವೇ ಗಾಂಧಿ ಸ್ಮರಣೆ ಮಾಡುತ್ತಿದ್ದರೆ ಗಾಂಧಿ ಹುಟ್ಟಿದ ನಾಡಿನಲ್ಲಿ ಅವರ ಚಿಂತನೆಗಳನ್ನು ಅಪಮೌಲ್ಯಗೊಳಿಸುವ ಕೆಲಸ ನಡೆಯುತ್ತಿದೆ. ಇದು ಅಪಾಯಕಾರಿ ಬೆಳವಣಿಗೆ ಎಂದು ಎಚ್ಚರಿಸಿದರು.

ಯುವ ಸಮುದಾಯದ ಬಳಿಗೆ ಗಾಂಧೀಜಿಯವರನ್ನು ತಲುಪಿಸುವ ಕೆಲಸ ಮಾಡಬೇಕು. ಶಾಲಾ ಕಾಲೇಜುಗಳಲ್ಲಿ ಗಾಂಧಿ ಕುರಿತ ವಿಚಾರ ಸಂಕಿರಣಗಳನ್ನು ನಡೆಸಿ ಗಾಂಧಿ ಕೃತಿಗಳನ್ನು ಓದಿಸುವ ಕೆಲಸ ಆಗಬೇಕು ಎಂದು ಕರೆ ನೀಡಿದರು.

ಕಾರ್ಯಕ್ರಮದಲ್ಲಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ.ಪಿ.ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಮಂಡ್ಯದ ಕರ್ನಾಟಕ ಸಂಘದ ಅಧ್ಯಕ್ಷ ಪ್ರೊ.ಜಯಪ್ರಕಾಶ್‌ಗೌಡ, ಬೆಂಗಳೂರಿನ ಗಾಂಧಿ ಭವನದ ನಿರ್ದೇಶಕ ಪ್ರೊ.ಜಿ.ಬಿ.ಶಿವರಾಜು ಉಪಸ್ಥಿತರಿದ್ದರು.

ಅನಂತರ ನಡೆದ ವಿಚಾರ ಗೋಷ್ಠಿಗಳಲ್ಲಿ ಲೇಖಕಿ ಡಾ. ಎಚ್.ಎಸ್.ಅನುಪಮಾ ಅವರು, ಗಾಂಧೀಜಿ ಮತ್ತು ಅಂಬೇಡ್ಕರ್‌ನಡುವಿನ ಅಂದಿನ ಭಿನ್ನಾಭಿಪ್ರಾಯಗಳನ್ನು ಅರ್ಥೈಸಿಕೊಳ್ಳುವುದರ ಬಗ್ಗೆ ಮಾತನಾಡಿದರು. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಪುಸ್ತಕಗಳು ಹಾಗೂವ್ಯಕ್ತಿಗಳನ್ನುಕುರಿತು ಬಸರಾಳುಸ.ಪ.ಪೂ ಕಾಲೇಜಿನ ಉಪನ್ಯಾಸಕ ಲೋಕೇಶ್ ಬೆಕ್ಕಳಲೆ, ಮಂಡ್ಯ ಜಿಲ್ಲೆಯಲ್ಲಿ ಗಾಂಧೀಜಿಯವರ ಹೆಜ್ಜೆಗಳನ್ನು ಕುರಿತು ಮಂಡ್ಯ ವಿಶ್ವ ವಿದ್ಯಾನಿಲಯದ ಇತಿಹಾಸ ವಿಭಾಗದ ಸಹ ಪ್ರಾಧ್ಯಾಪಕ ಡಾ.ಎಸ್.ಶಿವರಾಮು, ಗ್ರಾಮೀಣ ಯುವಜನತೆ ಮತ್ತು ಸ್ವಾವಲಂಬನೆ ಕುರಿತು ಮೇಲುಕೋಟೆಯ ಡಾ.ಸುಮನಸ್ ಕೌಲಗಿ ವಿಚಾರ ಮಂಡಿಸಿದರು.

ಜಿಲ್ಲಾರೈತಸಂಘದ ಮಾಜಿ ಅಧ್ಯಕ್ಷ ಎಂ.ವಿ.ರಾಜೇಗೌಡ, ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಪ್ರೊ.ವಿ.ವಿ.ಜಗದೀಶ್, ತಾಲೂಕು ಕಸಾಪ ಅಧ್ಯಕ್ಷ ಪೂರ್ಣಚಂದ್ರ ತೇಜಸ್ವಿ, ಕಸಾಪ ಮಾಜಿ ಅಧ್ಯಕ್ಷ ಎಂ.ಕೆ.ಹರಿಚರಣತಿಲಕ್, ತಾಲೂಕು ರೈತಸಂಘದ ಅಧ್ಯಕ್ಷ ಕಾರಿಗನಹಳ್ಳಿ ಪುಟ್ಟೇಗೌಡ ಉಪಸ್ಥಿತರಿದ್ದರು.

ಆಂದೋಲನ

Nov 30 2021



ಮೈಸೂರಿನ ಹೊರ ವರ್ತುಲ ರಸ್ತೆಯಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿನ ಸಭಾಂಗಣದಲ್ಲಿ ಆಂತರಿಕ ಗುಣಮಟ್ಟ ಭರವಸೆ ಕೋಶ ಮತ್ತು ಕನ್ನಡ ವಿಭಾಗದ ವತಿಯಿಂದ ಹಮ್ಮಿಕೊಂಡಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಪತ್ರಕರ್ತ ರವಿಕುಮಾರ್, ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಹೃದಯ ಶಾಸ್ತ್ರಜ್ಞ ಡಾ.ಶ್ರೀನಿಧಿ ಎಸ್.ಹೆಗ್ಡೆ, ಸಮರ್ಥನಂ ಟ್ರಸ್ಟ್‌ನ ಮುಖ್ಯ ಕಾರ್ಯಕ್ರಮಾಧಿಕಾರಿ ಶಿವರಾಮ್ ಎಸ್.ದೇಶಪಾಂಡೆ, ಸೇವಾಯಾನ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾದ ಪ್ರಭಾಮಣಿ, ಸದ್ವಿದ್ಯಾ ಸಂಯುಕ್ತ ಪಿಯು ಕಾಲೇಜಿನ ಪ್ರಾಂಶುಪಾಲ ವೈ.ಆರ್.ರಮೇಶ, ಸರಗೂರು ಆರಕ್ಷಕ ಠಾಣೆ ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಸಿ.ನಂದೀಶ್‌ಕುಮಾರ್ ಅವರನ್ನು ಸನ್ಮಾನಿಸಲಾಯಿತು. ಚಿಂತಕ ಪ್ರೊ.ಬಿ. ಜಯಪ್ರಕಾಶ್‌ಗೌಡ, ಕರ್ನಾಟಕ ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲರಾದ ಡಾ.ಕೆ.ಸೌಮ್ಯ ಈರಪ್ಪ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಧರ್ಮಾಧಿಕಾರಿ ಜಿ.ಟಿ.ಅನಿಲ್‌ಕುಮಾರ್, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ.ಸಿ.ಪಿ.ಲಾವಣ್ಯ, ಸಹಾಯಕ ಪ್ರಾಧ್ಯಾಪಕರಾದ ಕೆ.ಎಂ.ಸಿದ್ದಪ್ಪ, ಕೆ.ಬಿ.ರಶ್ಮಿ ಹಾಗೂ ಬೋಧಕ- ಬೋಧಕೇತರ ಸಿಬ್ಬಂದಿ ಇತರರು ಹಾಜರಿದ್ದರು.

ಮೈಸೂರು ಮಿತ್ರ ಶುಕ್ರವಾರ 29 ನವೆಂಬರ್ 2024

# ಶೇಷಾದ್ರಿಪುರಂ ಕಾಲೇಜಲ್ಲಿ ಕನ್ನಡ ರಾಜ್ಯೋತ್ಸವ



ಮೈಸೂರಿನ ಶೇಷಾದ್ರಿಪುರಂ ಪದವಿ ಕಾಲೇಜಲ್ಲಿ ಆಯೋಜಿಸಿದ್ದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ನಿವೃತ್ತ ಪ್ರಾಧ್ಯಾಪಕ ಪ್ರೊ.ಜಯಪ್ರಕಾಶ್‌ಗೌಡ ನವಧಾನ್ಯಗಳನ್ನು ಬೀಸುವ ಮೂಲಕ ಉದ್ಘಾಟಿಸಿದರು.

ಮೈಸೂರು, ನ.28– ಮೈಸೂರಿನ ಶೇಷಾದ್ರಿಪುರಂ ಪದವಿ ಕಾಲೇಜಿನ ಆಂತರಿಕ ಗುಣಮಟ್ಟ ಭರವಸೆ ಕೋಶ ಮತ್ತು ಕನ್ನಡ ವಿಭಾಗ, ಶೇಷಾದ್ರಿಪುರಂ ಸ್ವತಂತ್ರ ಪದವಿ–ಪೂರ್ವ ಕಾಲೇಜಿನ ಸಹಯೋಗದಲ್ಲಿ ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಯಿತು.

ನಿವೃತ್ತ ಪ್ರಾಧ್ಯಾಪಕ ಪ್ರೊ.ಜಯಪ್ರಕಾಶ್‌ಗೌಡ ಮುಖ್ಯ ಅತಿಥಿಗಳಾಗಿ ಭಾಗವಹಿಸಿ, ನವಧಾನ್ಯಗಳನ್ನು ಬೀಸುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ನಂತರ ಮಾತನಾಡಿದ ಅವರು, ಮನುಷ್ಯ ಬೆಳೆಯುತ್ತಿದ್ದಂತೆ ನಾಡು ನನ್ನದು, ದೇಶ ನನ್ನದು ಎಂಬ ಅಭಿಮಾನ ಬೆಳೆಸಿಕೊಳ್ಳಬೇಕು. ಆಗ ಎಲ್ಲವೂ ಕೂಡ ಕ್ಷೇಮವಾಗಿರುತ್ತದೆ. ಆದರೆ ಇಂದು ಎಲ್ಲವನ್ನು ವಿಭಜನೆ ಮಾಡುವ ಮನೋಭಾವ ಬೆಳೆಯುತ್ತಿದೆ. ಅ.ನ. ಕೃಷ್ಣರಾಯ, ಬಿ.ಎಂ.ಶ್ರೀ, ಕುವೆಂಪು, ಆಲೂರು ವೆಂಕಟರಾಯರ ಅಖಿಲ ಕರ್ನಾಟಕ ಸ್ಥಾಪನೆಯ ಅಭಿಲಾಷೆಯ ಕಾಲದಲ್ಲಿದ್ದ ಅಭಿಮಾನದ ಕನಸು ಇಂದು ಅರ್ಥ ಕಳೆದುಕೊಳ್ಳುವಂತಾಗಿದೆ. ಗಾಂಧೀಜಿ ಅವರ ದೇಶ ಒಂದು ಎಂಬ ಆಶಯ, ಕುವೆಂಪು ಅವರ 'ಸರ್ವ ಜನಾಂಗದ ಶಾಂತಿಯ ತೋಟದ' ಆಶಯ ಮರೆಯಾಗುತ್ತಿದೆ. ಎಲ್ಲರೂ ಆಂತರಿಕ ಗುದ್ದಾಟದಿಂದ ಮನಸ್ಸನ್ನು ಕಲುಷಿತಗೊಳಿಸಿಕೊಳ್ಳದೆ ವಿಶಾಲ ಮನೋಭಾವವನ್ನು ಬೆಳೆಸಿಕೊಳ್ಳಬೇಕು ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಅಧ್ಯಕ್ಷತೆ ವಹಿಸಿ ಮಾತನಾಡಿ, ಸರ್ವ ಜನಾಂಗದ ಶಾಂತಿಯ ತೋಟ ಈ ಕರುನಾಡು ಎಂಬುದು ಕುವೆಂಪು ನೀಡಿದ ಶಾಶ್ವತ ಸಂದೇಶ. ಸಾವಿರಾರು ವರ್ಷಗಳಿಂದ ನಮ್ಮ ನಾಡಿನಲ್ಲಿ ಎಲ್ಲರೂ ಸಹೋದರ ಭಾವನೆಯಿಂದ ಬಾಳುತ್ತಿದ್ದರು. ಇಂದು ಇದನ್ನು ಕೆಡಿಸುವ ಕಾರ್ಯ ಸೃಷ್ಟಿಯಾಗಿದೆ. ಎಂದಿಗೂ ಆಗಬಾರದು.

ನಮ್ಮಲ್ಲಿ ಕನ್ನಡದ ವಿವೇಕ ಉಳಿಯಬೇಕು. ಶಾಂತಿಯುತ ಸಮುದಾಯದ ಕಲ್ಪನೆ ಬೆಳೆಯಬೇಕು, ಕನ್ನಡದ ಬೇರು ಗಟ್ಟಿಗೊಳ್ಳಬೇಕು. ಹೀಗೆ ತನ್ಮೂಲಕ ನಾವು ನಾಡು ನುಡಿಯನ್ನು ಉಳಿಸಿ ಬೆಳೆಸಬೇಕು ಎಂದರು.

ರಾಜ್ಯೋತ್ಸವದ ಅಂಗವಾಗಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಸಾಧಕರನ್ನು ಸನ್ಮಾನಿಸಲಾಯಿತು. ಕಾರ್ಯಕ್ರಮದಲ್ಲಿ ಪ್ರಾಂಶುಪಾಲರಾದ ಡಾ.ಸೌಮ್ಯ ಈರಪ್ಪ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಧರ್ಮಾಧಿಕಾರಿ ಅನಿಲ್‌ಕುಮಾರ್, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ.ಲಾವಣ್ಯ, ಸಹಾಯಕ ಪ್ರಾಧ್ಯಾಪಕರಾದ ಸಿದ್ದಪ್ಪ, ರಶ್ಮಿ ಹಾಗೂ ಬೋಧಕ –ಬೋಧಕೇತರ ಸಿಬ್ಬಂದಿ ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ ● ನವೆಂಬರ್ 26, 2024



ರೋಟರಿ ಇಂಟರ್‌ನ್ಯಾಷನಲ್ ಜಿಲ್ಲೆ 3191 ವತಿಯಿಂದ ರೋಟರಿ ಗವರ್ನರ್ ಸತೀಶ್ ಮಾಧವನ್ ಅವರು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೂಡೇ ಪಿ.ಕೃಷ್ಣ ಅವರಿಗೆ ಜೀವಮಾನದ ಸಾಧನಾ ಪ್ರಶಸ್ತಿ ನೀಡಿ ಗೌರವಿಸಿದರು.

ವಿಜಯ ಕರ್ನಾಟಕ VK

ಶುಕ್ರವಾರ,22 ನವೆಂಬರ್ 2024,
ಬೆಂಗಳೂರು



ಹಿರಿಯ ಪ್ರಗತಿಪರ ರೈತ ಡಾ.ಎನ್.ಸಿ ಪಟೇಲ ಅವರನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ ಕೃಷ್ಣ ಹಾಗೂ ರಾಜ್ಯ ಹಣಕಾಸು ಆಯೋಗ ಅಧ್ಯಕ್ಷ ಸಿ.ನಾರಾಯಣಸ್ವಾಮಿ ಸನ್ಮಾನಿಸಿದರು. ಮಾಜಿ ಶಾಸಕ ಗಂಟಿಗಾನಹಳ್ಳಿ ಕೃಷ್ಣಪ್ಪ, ವಿಧಾನ ಪರಿಷತ್ ಮಾಜಿ ಸದಸ್ಯ ಮರಿಲಿಂಗೇಗೌಡ, ಹಾಡೋನಹಳ್ಳಿ ಅಪ್ಪಯ್ಯಣ್ಣ ಉಪಸ್ಥಿತರಿದ್ದರು.

# ಈ ಸಂಜೆ

Nov 22, 2024




ಹಿರಿಯ ಪ್ರಗತಿಪರ ಕೃಷಿಕ ಡಾ. ಎನ್. ಸಿ. ಪಟೇಲ್ ಅವರನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ಹಾಗೂ ರಾಜ್ಯ ಹಣಕಾಸು ಆಯೋಗ ಅಧ್ಯಕ್ಷ ಸಿ. ನಾರಾಯಣಸ್ವಾಮಿ ಸನ್ಮಾನಿಸಿದರು. ಮಾಜಿ ಶಾಸಕ ಗಂಟೆಗಾನಹಳ್ಳಿ ಕೃಷ್ಣಪ್ಪ, ಮಾಜಿ ವಿಧಾನ ಪರಿಷತ್ ಸದಸ್ಯ ಮರಿಲಿಂಗೇಗೌಡ, ಹಾದೋನಹಳ್ಳಿ ಅಪ್ಪಯ್ಯಣ್ಣ ಹಾಗೂ ಇತರ ಗಣ್ಯರು ಉಪಸ್ಥಿತರಿದ್ದರು.

ಪ್ರಜಾವಾಣಿ ಬುಧವಾರ • ನವೆಂಬರ್ 20, 2024



ವಿದ್ಯಾರ್ಥಿಗಳು ಸಿದ್ಧಪಡಿಸಿ ಪ್ರದರ್ಶನ ಮತ್ತು ಮಾರಾಟಕ್ಕಿಟ್ಟಿದ್ದ ಆಹಾರ ಖಾದ್ಯಗಳನ್ನು ವಿಮರ್ಶಕಿ ಆಶಾದೇವಿ ಹಾಗೂ ಶಿಕ್ಷಣತಜ್ಞ ವೂಡೇ ಪಿ.ಕೃಷ್ಣ ವೀಕ್ಷಿಸಿದರು

# ಶೇಷಾದ್ರಿಪುರ ಕಾಲೇಜಿನಲ್ಲಿ ಕನ್ನಡ ನಾಡಹಬ್ಬದ ಸಂಭ್ರಮ

ಪ್ರಜಾವಾಣಿ ವಾರ್ತೆ

ಯಲಹಂಕ: ಕೆಂಪು ಮತ್ತು ಹಳದಿ ಬಣ್ಣದ ಕಾಗದ ಮತ್ತು ಬಟ್ಟೆಗಳು, ಚಿತ್ತಾರದ ರಂಗೋಲಿ, ವಿವಿಧ ಬಗೆಯ ಹೂವು ಮತ್ತು ತಳಿರು-ತೋರಣಗಳಿಂದ ಕಂಗೊಳಿಸುತ್ತಿದ್ದ ಕಾಲೇಜು ಆವರಣ, ವಿವಿಧ ಮಾದರಿಗಳ ಪ್ರದರ್ಶನ, ಆಹಾರ ಖಾದ್ಯಗಳ ಮಾರಾಟ, ವಿವಿಧ ಉಡುಪುಗಳೊಂದಿಗೆ ಕಂಗೊಳಿಸುತ್ತಿದ್ದ ವಿದ್ಯಾರ್ಥಿಗಳು, ತೇಲಿ ಬರುತ್ತಿದ್ದ ಕನ್ನಡ ಗೀತೆಗಳಿಗೆ ಹೆಜ್ಜೆಹಾಕಿದ ಯುವಜನತೆ....

ಇಲ್ಲಿನ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ಕರ್ನಾಟಕ ರಾಜ್ಯೋತ್ಸವದ ಪ್ರಯುಕ್ತ ಆಯೋಜಿಸಿದ್ದ 'ನಾಡಹಬ್ಬ -2024'ರ ಸಮಾರಂಭದ ದೃಶ್ಯಗಳಿವು.

ವಿದ್ಯಾರ್ಥಿಗಳು ತಯಾರಿಸಿದ್ದ ವಿಧಾನಸೌಧ, ಮೈಸೂರು ಅರಮನೆ, ಚಾಮುಂಡಿ ದೇವಾಲಯ, ಶಿವನ ಮೂರ್ತಿ, ಕನ್ನಡ ನಟ-ನಟಿಯರ ಚಂದನವನ, ಗೋಲಗುಮ್ಮಟ, ಚಂದ್ರಯಾನ-3, ಕೆ.ಆರ್.ಎಸ್, ಬಿಡಿಎ, ಕೃಷಿ ಕರ್ನಾಟಕ, ಪುಸ್ತಕ ಪ್ರದರ್ಶನ, ತುಮಕೂರು ಜಿಲ್ಲೆ ಮತ್ತಿತರ ಮಾದರಿಗಳು ಜನರ ಗಮನ ಸೆಳೆದವು. ವಿದ್ಯಾರ್ಥಿಗಳು ತಾವೇ ತಯಾರಿಸಿದ್ದ ಆಹಾರ ಖಾದ್ಯಗಳು, ಚಾಟ್ಸ್ ಹಾಗೂ ತಿಂಡಿ-ತಿನಿಸುಗಳನ್ನು ಮಾರಾಟಮಾಡಿ ಖುಷಿಪಟ್ಟರು. ಅಲ್ಲದೆ ವಿವಿಧ ಕ್ರೀಡೆಗಳಲ್ಲಿ ಪಾಲ್ಗೊಂಡು ಸಂಭ್ರಮಿಸಿದರು.

ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ವಿಮರ್ಶಕಿ ಡಾ.ಆಶಾದೇವಿ, ಕನ್ನಡ ಕೇವಲ ಒಂದು ಭಾಷೆಯಾಗಿರದೆ ಜೀವನಕ್ರಮವಾಗಿದ್ದು, ಇಡೀ ಬದುಕನ್ನು ಆವರಿಸಿದೆ' ಎಂದರು.

ಸಂಜೆವಾಣಿ

ಭಾನುವಾರ 17 ನವೆಂಬರ್ 2024



ಸುಮಂಗಲಿ ಸೇವಾಶ್ರಮ ಮತ್ತು ಶೇಷಾದ್ರಿಪುರಂ ಕಾಲೇಜಿನ ಸಹಯೋಗದಲ್ಲಿ ಇಂದು ಏರ್ಪಡಿಸಿದ್ದ ಲೇಖಕಿ ಎಸ್. ಶ್ರೀದೇವಿ ಅವರ "ಹಾರ್ಮೋನಿಯಸ್ ಹೊರಾಜ್ಯೈನ್ಸ್, ಜಾಯ್ ಆಫ್ ಸ್ಟ್ಯಾಂಪ್ ಕಲೆಕ್ಟಿಂಗ್ ಮತ್ತು ಸಾಗಾ ಆಫ್ ಬುದ್ಧಿಸಂ" ಕೃತಿಗಳನ್ನು, ಹಿರಿಯ ಸಾಹಿತಿ, ನಾಡೋಜ ಹಂಪ ನಾಗರಾಜಯ್ಯರವರು ಲೋಕಾರ್ಪಣೆ ಮಾಡಿದರು. ನಾಡೋಜ ವೂಡೇ ಪಿ. ಕೃಷ್ಣ, ಮಾಜಿ ಸಚಿವೆ ರಾಣಿ ಸತೀಶ್, ಡಾ. ಎಸ್.ಜಿ. ಸುಶೀಲಮ್ಮ, ಪ್ರಸಾದ್ ಗುರೂಜಿ, ಡಾ. ಸಪ್ನ ಇದ್ದಾರೆ.

ಸಮಸ್ತ ಕನ್ನಡಿಗರ ವಿಶ್ವಾಸದ ಸಂಜೆ ದಿನಪತ್ರಿಕೆ

# ಈ ಸಂಜೆ

Nov 17, 2024



ಸುಮಂಗಲಿ ಸೇವಾಶ್ರಮ ಮತ್ತು ಶೇಷಾದ್ರಿಪುರಂ ಕಾಲೇಜಿನ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ಲೇಖಕಿ ಎಸ್.ಶ್ರೀದೇವಿ ಅವರ ಹಾರ್ಮೋನಿಯಸ್ ಹೊರಾಯ್ಜನ್ಸ್, ಜಾಯ್ ಆಫ್ ಸ್ಟಾಂಪ್ ಕಲೆಕ್ಟಿಂಗ್ ಮತ್ತು ಸಾಗಾ ಆಫ್ ಬುದ್ಧಿಸಂ ಎಂಬ ಮೂರು ಕೃತಿಗಳನ್ನು ಹಿರಿಯ ಸಾಹಿತಿ ನಾಡೋಜ ಹಂ.ಪ.ನಾಗರಾಜಯ್ಯ ಲೋಕಾರ್ಪಣೆ ಮಾಡಿದರು. ನಾಡೋಜ ಡಾ.ವೂಡೇ ಪಿ ಕೃಷ್ಣ, ಮಾಜಿ ಸಚಿವೆ ರಾಣಿ ಸತೀಶ್, ಡಾ.ಎಸ್.ಜಿ.ಸುಶೀಲಮ್ಮ, ಪ್ರಸಾದ್ ಗುರೂಜಿ, ಡಾ.ಸಪ್ನ ಮತ್ತಿತರರು ಇದ್ದರು.

ಸಂಯುಕ್ತ ಕರ್ನಾಟಕ

ಭಾನುವಾರ 17 ನವೆಂಬರ್ 2024

ಬೆಂಗಳೂರು | BENGALURU

# ಧರ್ಮ ಒಡೆದಾಳುವ ನೀತಿಯೇ ರಾಜಕೀಯ

ಬೆಂಗಳೂರು: ಪ್ರಸ್ತುತ ರಾಜಕೀಯ ಪೂಜ್ಯನೀಯ ಸ್ಥಾನ ಕಳೆದುಕೊಂಡಿದೆ. ಪೂಜ್ಯನೀಯ ಕಾಲ ಹೋಗಿ ಜಾತಿ, ಮತ, ಧರ್ಮ ಭಾಷೆ ಸಂಸ್ಕೃತಿಯನ್ನು ಒಡೆದು ಆಳುವ ನೀತಿ ಆಗಿದೆ ಎಂದು ವಿದ್ವಾಂಸ ಡಾ.ಹಂಪ ನಾಗರಾಜಯ್ಯ ಹೇಳಿದರು.

ಸುಮಂಗಲಿ ಸೇವ ಆಶ್ರಮ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಹಯೋಗದಲ್ಲಿ ನಡೆದ ಕಾರ್ಯಕ್ರಮದಲ್ಲಿ ಮೂರು ಆಂಗ್ಲ ಕೃತಿಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿದ ಅವರು, ಲೇಖಕಿ ಎನ್.ಶ್ರೀದೇವಿ ಅವರ ಈ ಮೂರು ಕೃತಿಗಳು ಆಂಗ್ಲ ಭಾಷೆಯ ಸಾಹಿತ್ಯ ಕ್ಷೇತ್ರದಲ್ಲಿ ಒಂದು ದೊಡ್ಡ ಮೈಲಿಗಲ್ಲು. ಸಮರ್ಥನೀಯ ಪದಸಂಪತ್ತು. ಬುದ್ಧನ ಇತಿಹಾಸ, ಸಂಶೋಧನೆ, ಕೃತಿಗಳನ್ನು ಹಲವು ಗ್ರಂಥಗಳನ್ನು ಅಧ್ಯಯನ ಮಾಡಿ ಬರೆದಿದ್ದಾರೆ. ಈ ಮೂರು ಗ್ರಂಥಗಳನ್ನು ಬರೆದು ದಾಖಲೆ ನಿರ್ಮಿಸಿದ್ದಾರೆಂದರು.

ಲೇಖಕಿ ಶ್ರೀದೇವಿ ಅವರು ತಮ್ಮ ಬದುಕಿನ ಬಹುಪಾಲು ಸಮಯವನ್ನು ಈ ಕೃತಿಗಳ ರಚನೆ ಮಾಡುವುದಕ್ಕೆ ಮೀಸಲಿಟ್ಟಿದ್ದಾರೆ. ಅಲ್ಲದೆ ಮುದ್ರಣವನ್ನೂ ಬಹಳ ಸುಂದರವಾಗಿ ಕಾಣುವಂತೆ ಮಾಡಿದ್ದಾರೆ. ಮೌಲಿಕ ಕೃತಿಗಳನ್ನು ಸಾಹಿತ್ಯ ಸರಸ್ವತಿಯ ಅಂಗಳದಲ್ಲಿ ಬಿತ್ತಿ ಬೆಳೆದಿದ್ದು, ಸರ್ವರಿಗೂ ಜ್ಞಾನದ ಪರಿಧಿಯನ್ನು ವಿಸ್ತರಿಸುತ್ತದೆ ಎಂದರು.



ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಭಾಂಗಣದಲ್ಲಿ ಎನ್.ಶ್ರೀದೇವಿ ಅವರ ಮೂರು ಆಂಗ್ಲ ಕೃತಿಗಳನ್ನು ಡಾ. ಹಂಪ ನಾಗರಾಜಯ್ಯ ಬಿಡುಗಡೆ ಮಾಡಿದರು. ಮಾಜಿ ಸಚಿವೆ ರಾಣಿ ಸತೀಶ್, ಶಿಕ್ಷಣ ತಜ್ಞ ಡಾ. ವೂಡೇ ಪಿ, ಕೃಷ್ಣ ಮತ್ತಿತರರಿದ್ದರು.

ಮಾಜಿ ಸಚಿವೆ ರಾಣಿ ಸತೀಶ್ ಮಾತನಾಡಿ, ಸಮಾಜದಲ್ಲಿ ಮಹಿಳೆಯರಿಗೆ ಪೇಟೆ, ಪೀಠ ಎರಡೂ ದಕ್ಕಿದಾಗ ಮಾತ್ರ ಸಮಾನತೆ ದೇಶದಲ್ಲಿ ಮೂಡಲು ಸಾಧ್ಯ. ಯುವ ಜನಾಂಗಕ್ಕೆ ಇತಿಹಾಸವನ್ನು ಪರಿಚಯಿಸುವ ಕೆಲಸ ಮಾಡಬೇಕಾಗಿದೆ. ಸಂಗೀತ ಎನ್ನುವುದು ಭಗವಂತನನ್ನು ಒಲಿಸಿಕೊಳ್ಳುವುದು. ಬುದ್ಧನ ವಿಚಾರಧಾರೆ ಆಸೆಯೇ ದುಃಖಕ್ಕೆ ಮೂಲ ಕಾರಣ, ಆದರೆ ಆಸೆ, ದುರಾಸೆಗಳು ಇಂದು ವಿಶ್ವವನ್ನು ನುಂಗುತ್ತಿರುವುದು ನಮ್ಮ ದುರ್ದೈವ ಎಂದು ಅಭಿಪ್ರಾಯಪಟ್ಟರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಸುಮಂಗಲಿ ಸೇವ ಆಶ್ರಮ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ ಮತ್ತಿತರರಿದ್ದರು.

ಮೈಸೂರು ಮಿತ್ರ

16/11/2014

## 'ಸಾಹಿತ್ಯ ಸೇತು ಸಮ್ಮಾನ್' ಪ್ರಶಸ್ತಿ ಪ್ರದಾನ



ಚೆನ್ನೈನಲ್ಲಿ ಇತ್ತೀಚೆಗೆ ಆಯೋಜಿಸಿದ್ದ ಭಾರತ ಸಾಹಿತ್ಯ ಮತ್ತು ಮೀಡಿಯಾ ಮಹೋತ್ಸವದಲ್ಲಿ ಉತ್ಕೃಷ್ಟ ದೀರ್ಘಕಾಲೀನ ಸಮರ್ಪಿತ ಹಾಗೂ ಉಲ್ಲೇಖನೀಯ ಹಿಂದಿ ಭಾಷೆ ಸಾಹಿತ್ಯದಲ್ಲಿ ಸೇವೆ ಸಲ್ಲಿಸಿರುವ ಸೇವಕರನ್ನು ಸನ್ಮಾನಿಸಲಾಯಿತು. ಈ ಸಮಾರಂಭದಲ್ಲಿ ತಮಿಳುನಾಡಿನ ರಾಜ್ಯಪಾಲ ಆರ್.ಎನ್. ರವಿ ಅವರು ಮೈಸೂರಿನ ಡಾ. ಪುಷ್ಪ ಎಲ್ ಅವರಿಗೆ 'ಸಾಹಿತ್ಯ ಸೇತು ಸಮ್ಮಾನ್' ಪ್ರಶಸ್ತಿ ಪ್ರದಾನ ಮಾಡಿದರು.

ಸಂಜೆವಾಣಿ

ಶುಕ್ರವಾರ 15 ನವೆಂಬರ್ 2024

# ನಾಳೆ ಮೂರು ಆಂಗ್ಲ ಕೃತಿಗಳ ಲೋಕಾರ್ಪಣೆ

ಬೆಂಗಳೂರು.ನ.15: ಸುಮಂಗಲಿ ಸೇವಾ ಆಶ್ರಮ ಮತ್ತು ಶೇಷಾದ್ರಿಪುರಂ ಶಿಕ್ಷಣ ದತ್ತಿ ಇವರ ಸಹಯೋಗದಲ್ಲಿ ಆಂಗ್ಲ ಕೃತಿಗಳ ಲೋಕಾರ್ಪಣಾ ಸಮಾರಂಭ ಏರ್ಪಡಿಸಲಾಗಿದೆ.

ನಾಳೆ ಬೆಳಗ್ಗೆ 11 ಗಂಟೆಗೆ ಲೇಖಕಿ ಎನ್.ಶ್ರೀದೇವಿ ವಿರಚಿತ ಹಾರ್ಮೋನಿಯಸ್ ಹೊರೈಜನ್, ಜಾಯ್ ಆಫ್ ಸ್ಟ್ಯಾಂಪ್ ಕಲೆಕ್ಟಿಂಗ್, ಸಾಗಾ ಆಫ್ ಬುದ್ಧಿಸಂ ಎಂಬ ಮೂರು ಕೃತಿಗಳ ಲೋಕಾರ್ಪಣಾ ಸಮಾರಂಭವನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಭಾಂಗಣ ಶೇಷಾದ್ರಿಪುರಂನಲ್ಲಿ ಆಯೋಜಿಸಲಾಗಿದೆ. ಕಾರ್ಯಕ್ರಮದ ಉದ್ಘಾಟನೆಯನ್ನು ಮಾಜಿ ಸಚಿವೆ ರಾಣಿ ಸತೀಶ್ ನೆರವೇರಿಸಲಿದ್ದಾರೆ.

ಪುಸ್ತಕಗಳ ಲೋಕಾರ್ಪಣೆ ಬಹುಶ್ರುತ ವಿದ್ವಾಂಸ ನಾಡೋಜ ಡಾ.ಹಂ.ಪ.ನಾಗರಾಜಯ್ಯ ಮಾಡಲಿದ್ದು, ಅಧ್ಯಕ್ಷತೆಯನ್ನು ಸುಮಂಗಲಿ ಸೇವಾ ಆಶ್ರಮ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ ವಹಿಸಲಿದ್ದಾರೆ.

ಮುಖ್ಯ ಅತಿಥಿಗಳಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ ಹಾಗೂ ಕೃತಿಗಳ ಲೇಖಕಿ ಎನ್.ಶ್ರೀದೇವಿ ಭಾಗವಹಿಸಲಿದ್ದಾರೆ.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

ಈ ಸಂಜೆ

Nov 14. 2024



ಶೇಷಾದ್ರಿಪುರಂ ಕಾಲೇಜಿನಲ್ಲಿ ಕನ್ನಡ ಸಂಘ ಮತ್ತು ಕನ್ನಡ ವಿಭಾಗದಿಂದ ಹಮ್ಮಿಕೊಂಡಿದ್ದ ಕರ್ನಾಟಕ ರಾಜ್ಯೋತ್ಸವದ ಸುವರ್ಣ ಸಂಭ್ರಮ ಕಾರ್ಯಕ್ರಮವನ್ನು ಸಾಹಿತಿ ಬಿ.ಆರ್.ಲಕ್ಷ್ಮಣ್‌ರಾವ್ ಉದ್ಘಾಟಿಸಿದರು. ನಾಡೋಜ ಡಾ.ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಡಾ.ಭಾಸ್ಕರ್, ಗೀತಾ ಮತ್ತಿತರರು ಹಾಜರಿದ್ದರು.

ಪ್ರಜಾ ಪ್ರಗತಿ

Nov 12, 2024

# ಯುವಜನತೆಗೆ ಗಾಂಧೀಜಿ ಅಧ್ಯಯನ ಅಗತ್ಯ

● ಪ್ರಜಾಪ್ರಗತಿ.ಕಾಂ

ತುರುವೇಕೆರೆ: ಇಂದಿನ ಯುವಕರು ಮಹಾತ್ಮ ಗಾಂಧೀಜಿಯವರ ಬಗ್ಗೆ ಅಧ್ಯಯನ ಮಾಡಬೇಕು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ ಕೃಷ್ಣ ಸಲಹೆ ನೀಡಿದರು.

ಪಟ್ಟಣದ ಸರ್ಕಾರಿ ಪದವಿಪೂರ್ವ ಕಾಲೇಜು ಆವರಣದಲ್ಲಿ ಗಾಂಧಿ ಚಿಂತಕರ ವೇದಿಕೆ ವತಿಯಿಂದ ಕರ್ನಾಟಕ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತರಾದ ಪ್ರೊ.ಜಿ.ಬಿ.ಶಿವರಾಜು ರವರಿಗೆ ಅಭಿನಂದನೆ ಹಾಗೂ ಯುವಕರಿಗೆ ಗಾಂಧಿ ವಿಚಾರಗಳ ಪ್ರಸ್ತುತತೆ ಎಂಬ ವಿಷಯದ ಬಗ್ಗೆ ವಿಶೇಷ ಉಪನ್ಯಾಸದಲ್ಲಿ ಮಾತನಾಡಿದರು.

ಗಾಂಧೀಜಿಯ ಜೀವನದ ಬಗ್ಗೆ ಸುಮಾರು 100 ವಾಲ್ಯೂಮ್ ಪುಸ್ತಕಗಳನ್ನು ಹೊರತರಲಾಗಿದೆ. ವಿದ್ಯಾರ್ಥಿ ದೆಸೆಯಿಂದಲೇ ಗಾಂಧೀಜಿಯವರ ಬಗ್ಗೆ ಅಧ್ಯಯನದಿಂದಾಗಿ ನನ್ನ ಬದುಕೇ ಬದಲಾಯಿತು. ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಜೊತೆಯಲ್ಲಿ ಗಾಂಧೀಜಿಯವರ




ಬಗ್ಗೆ ಅಧ್ಯಯನ ಮಾಡಬೇಕು ಎಂದು ತಿಳಿಸಿದರು.

ಸ್ವಾತಂತ್ರ್ಯಾ ನಂತರದ ದಿನಗಳಲ್ಲಿ ಮಹಾತ್ಮ ಗಾಂಧೀಜಿಯವರ ಮೌಲ್ಯಗಳನ್ನು ಕಳೆದು ಕೊಳ್ಳುವಂತಾಯಿತು. ಜನರೆ ಮಹಾತ್ಮ ಎಂಬ ಬಿರುದು ನೀಡಿದರು. ಗಾಂಧೀಜಿ ಹೇಗೆ ಬದುಕಿದರು ಎಂಬುದರ ಬಗ್ಗೆ ಮಾತ್ರ ತಿಳಿಯಬೇಕಿದೆ. ಅಹಿಂಸಾ ಸಮಾಜದ ಕಲ್ಪನೆ ಗಾಂಧೀಜಿ ಕನಸಾಗಿತ್ತು ಎಂದರು.

ನಿವೃತ್ತ ಐಎಎಸ್ ಅಧಿಕಾರಿ ಶಂಕರಲಿಂಗೇಗೌಡ ಮಾತನಾಡಿ, ಸಮಾಜದ ಏಳಿಗೆಗೆ ಬೇರೆಯವರಿಗಾಗಿ ಸೇವೆ ಮಾಡುವಂತಹ ವ್ಯಕ್ತಿಗಳನ್ನು ಸಮಾಜದಲ್ಲಿ ಗುರುತಿಸಿ ಗೌರವ ನೀಡುವಂತಹ ಪರಿಪಾಠವನ್ನು ಎಲ್ಲರೂ ಕಲಿಯಬೇಕಿದೆ. ವಿದ್ಯಾರ್ಥಿಗಳು ಗೂಗಲ್‌ನಲ್ಲಿ ಸರ್ಚ್ ಮಾಡುವ ಬದಲು ಶಾಲಾ ಕಾಲೇಜುಗಳ ಗ್ರಂಥಾಲಯಕ್ಕೆ ಭೇಟಿ ನೀಡಿ ಪುಸ್ತಕಗಳನ್ನು ಓದುವಂತಹ ಅಭ್ಯಾಸ ರೂಢಿಸಿಕೊಳ್ಳಿ ಎಂದು ಸಲಹೆ ನೀಡಿದರು.

> ಗಾಂಧೀಜಿಯವರನ್ನು ಒಂದು ಪಕ್ಷದ ದೃಷ್ಟಿಕೋನದಲ್ಲಿ ನೋಡಬಾರದು. ಎಲ್ಲವನ್ನು ತ್ಯಾಗ ಮಾಡಿ ಸತ್ಯ, ಅಹಿಂಸಾ ಮಾರ್ಗದಲ್ಲಿಯೇ ಅನ್ಯಾಯದ ವಿರುದ್ಧ ಹೋರಾಡುವಂತಹ ಗುಣ ಅವರಲ್ಲಿತ್ತು. ಗಾಂಧೀಜಿ ಎಲ್ಲರ ಹೃದಯದಲ್ಲಿದ್ದರು. ಇದರಿಂದಾಗಿಯೇ ಅವರ ಭಾಷಣಕ್ಕೆ ಲಕ್ಷಾಂತರ ಜನರು ಸೇರುತ್ತಿದ್ದರು.
>
> । ವೂಡೆ ಪಿ ಕೃಷ್ಣ ಅಧ್ಯಕ್ಷರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ.

ಅಭಿನಂದನೆ ಸ್ವೀಕರಿಸಿದ ಕರ್ನಾಟಕ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತರಾದ ಪ್ರೊ.ಜಿ.ಬಿ.ಶಿವರಾಜು ಮಾತನಾಡಿ, ನಾನು ಸೇತುವೆಯಾಗಿ ಕೆಲಸ ಮಾಡಿದ್ದು ಅಷ್ಟೆ. ಸಮಾಜದ ಋಣ ತೀರಿಸುವಂತಹ ಕೆಲಸ >08

1ನೇ ಪುಟದಿಂದ..

ಮಾಡಿದ್ದೇನೆ. ನನ್ನ ಕೊನೆಯ ಉಸಿರು ಇರುವರೆವಿಗೂ ಗಾಂಧೀಜಿಯವರ ವಿಚಾರ ಧಾರೆಗಳನ್ನು ಮಕ್ಕಳಿಗೆ ತಲುಪಿಸುವ ಕೆಲಸ ಮಾಡುತ್ತೇನೆ ಎಂದರು.

ಈ ಸಂದರ್ಭ ವಿವಿಧ ಸಂಘ ಸಂಸ್ಥೆಗಳು ಹಾಗೂ ಸಮಿತಿ ವತಿಯಿಂದ ಕರ್ನಾಟಕ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತರಾದ ಪ್ರೊ.ಜಿ.ಬಿ.ಶಿವರಾಜು ದಂಪತಿಯನ್ನು ಅಭಿನಂದಿಸಿ ಸನ್ಮಾನಿಸಲಾಯಿತು. ಪೌರ ಕಾರ್ಮಿಕರಿಗೆ ಸಮವಸ್ತ್ರ ಹಾಗೂ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಗಾಂಧೀಜಿ ಪುಸ್ತಕ ವಿತರಿಸಲಾಯಿತು.

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪ್ರಧಾನ ಕಾರ್ಯದರ್ಶಿ ಶ್ರೀ ಪ್ರಸನ್ನನಾಥ ಸ್ವಾಮೀಜಿ ಆಶೀರ್ವಚನ ನೀಡಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯಾಧ್ಯಕ್ಷ ಎನ್.ಆರ್.ವಿಠಕುಮಾರ್, ಕಾರ್ಯದರ್ಶಿ ಎಂ.ಸಿ.ನರೇಂದ್ರ, ನಿವೃತ್ತ ನೋಂದಣಿ ಮಹಾ ಪರಿವೀಕ್ಷಕಿ ಡಾ.ಬಿ.ಆರ್. ಮಮತ, ಪಟ್ಟಣ ಪಂಚಾಯಿತಿ ಸದಸ್ಯರಾದ ಚಿದಾನಂದ, ಸ್ವಪ್ನನಟೇಶ್, ಸರ್ಕಾರಿ ಪದವಿಪೂರ್ವ ಕಾಲೇಜು ಪ್ರಾಂಶುಪಾಲ ಕೆ.ಎಲ್. ಅನಂತರಾಮ್, ಉಪಪ್ರಾಂಶುಪಾಲ ಜಿ.ಬಿ.ವೆಂಕಟೇಶ್, ನಿವೃತ್ತ ಪ್ರಾಧ್ಯಾಪಕ ಪ್ರೊ.ಪುಟ್ಟರಂಗಪ್ಪ, ಒಕ್ಕಲಿಗರ ಸಂಘದ ಅಧ್ಯಕ್ಷ ಪಿ.ಹೆಚ್.ಧನಪಾಲ್, ರಾಜಣ್ಣ, ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷ ಕೆ.ಎಂ.ನಾಗರಾಜು, ಮಾಜಿ ಅಧ್ಯಕ್ಷ ಪ್ರಸನ್ನಕುಮಾರ್, ತಾಲೂಕು ರೈತ ಸಂಘದ ಅಧ್ಯಕ್ಷ ಶ್ರೀನಿವಾಸ್‌ಗೌಡ, ಮುಖಂಡರಾದ ಎಂ.ಡಿ.ಮೂರ್ತಿ, ಎನ್.ಆರ್.ಜಯರಾಮ್, ಸೋಮೇನಹಳ್ಳಿ ಸಂದೀಪ್, ಉಗ್ರೇಗೌಡ, ಕೆಂಪರಾಜು, ಹಾವಾಳ ಶಿವಕುಮಾರ್, ಐಪಿಎಸ್ ಶಾಲೆಯ ಮುಖ್ಯಸ್ಥ ಡಾ.ರುದ್ರಯ್ಯಹಿರೇಮಠ್, ಶಿಕ್ಷಕ ವೇಣುಗೋಪಾಲ್ ಸೇರಿದಂತೆ ಇತರರು ಇದ್ದರು.

ಪ್ರಜಾವಾಣಿ 10/11/2024



ಮಂಗಳೂರಿನಲ್ಲಿ ನಡೆದ ಭಾರತೀಯ ಸಾರ್ವಜನಿಕ ಸಂಪರ್ಕ ಮಂಡಳಿಯ (ಪಿಆರ್‌ಸಿಐ) 18ನೇ ವಿಶ್ವ ಸಂವಹನ ಸಮ್ಮೇಳನದಲ್ಲಿ ಕೇಂದ್ರ ಇಂಧನ ಖಾತೆ ರಾಜ್ಯ ಸಚಿವ ಶ್ರೀಪಾದ್ ಯೆಸ್ಸೊ ನಾಯ್ಕ್ ಅವರು ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ಅವರಿಗೆ 'ಚಾಣಕ್ಯ–2024' ಪ್ರಶಸ್ತಿ ಪ್ರದಾನ ಮಾಡಿದರು. ವೂಡೇ ಪಿ.ಕೃಷ್ಣ ಅವರ ಮಾನವೀಯ ಕಾರ್ಯಗಳನ್ನು ಗುರುತಿಸಿ ಈ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ

Nov 10, 2024



ಕಸಾಪ ಸಭಾಂಗಣದಲ್ಲಿ ಕುವೆಂಪು ಸಾಹಿತ್ಯ ಪ್ರಚಾರ ವೇದಿಕೆ ಹಮ್ಮಿಕೊಂಡಿದ್ದ ರಾಷ್ಟ್ರಕವಿ ಕುವೆಂಪು ಅವರ 30ನೆ ಸಂಸ್ಮರಣೆ ದಿನಾಚರಣೆಯನ್ನು ಕೃಷಿ ಸಚಿವ ಎನ್.ಚಲುವರಾಯಸ್ವಾಮಿ ಉದ್ಘಾಟಿಸಿದರು. ನಾಡೋಜ ವೂಡೆ ಪಿ.ಕೃಷ್ಣ, ಮಂಡ್ಯ ಶಂಕರೇಗೌಡ ಬಿಎಡ್ ಕಾಲೇಜಿನ ವಿಶ್ರಾಂತ ಪ್ರಾಂಶುಪಾಲ ಎಸ್.ಬಿ.ಶಂಕರೇಗೌಡ, ಕನ್ನಡಪರ ಹೋರಾಟಗಾರ ರಾ.ನಂ.ಚಂದ್ರಶೇಖರ್, ವೇದಿಕೆ ಅಧ್ಯಕ್ಷ ಗಂಗನಹಳ್ಳಿ ಶಿವಲಿಂಗಯ್ಯ, ಉಪಾಧ್ಯಕ್ಷ ಡಾ.ಸುರೇಶ್, ಪ್ರಧಾನ ಕಾರ್ಯದರ್ಶಿ ಜಯಬೋರೇಗೌಡ, ಖಜಾಂಚಿ ಶಿವೇಗೌಡ ಮತ್ತಿತರರು ಉಪಸ್ಥಿತರಿದ್ದರು.

# ಶೇಷಾದ್ರಿಪುರಂ ಟೆಕ್ನಾಲಜಿ ಕಾಲೇಜಿನಲ್ಲಿ ಫ್ರೆಷರ್ಸ್ ಡೇ

▪ ವಿಕ ಸುದ್ದಿಲೋಕ ಮೈಸೂರು

ಕಡಕೊಳ ಕೈಗಾರಿಕಾ ಪ್ರದೇಶದಲ್ಲಿರುವ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಕಾಲೇಜಿನಲ್ಲಿ ನೂತನವಾಗಿ ಪ್ರವೇಶ ಪಡೆದ ಎಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಫ್ರೆಷರ್ಸ್ ಡೇ ಆಯೋಜಿಸಲಾಗಿತ್ತು.

ಶ್ರೀ ರಾಮಕೃಷ್ಣ ವಿದ್ಯಾಶಾಲೆಯ ಸ್ವಾಮಿ ಯುಕ್ತೇಶಾನಂದಜೀ ಮಹಾರಾಜ್ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ''ಪ್ರತಿಯೊಬ್ಬ ವ್ಯಕ್ತಿಯ ಸುಸ್ಥಿರ ಬೆಳವಣಿಗೆಗೆ ದೃಢ ನಿರ್ಧಾರ, ಶ್ರಮ ಹಾಗೂ ಗುರು ಹಿರಿಯರ ಆಶೀರ್ವಾದ ಅತ್ಯಂತ ಪ್ರಮುಖವಾದುದು,'' ಎಂದು ತಿಳಿಸಿದರು.

ಇನ್ಫೋಸಿಸ್ ಸಂಸ್ಥೆಯ ಸಹ ಉಪಾಧ್ಯಕ್ಷ ಸುಂದರ್ ಮುಖ್ಯ ಭಾಷಣ ಮಾಡಿದರು. ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೆ ಪಿ.ಕೃಷ್ಣ, ಪ್ರಾಂಶುಪಾಲ ಡಾ ಜಿ .ರವಿ, ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಗವರ್ನಿಂಗ್ ಕೌನ್ಸಿಲ್ ಚೇರ್ಮನ್ ಬಿ.ಅನಂತರಾಮ್, ಶೇಷಾದ್ರಿಪುರಂ ವಿದ್ಯಾ ಸಂಸ್ಥೆಯ ಪದಾಧಿಕಾರಿಗಳಾದ ಟಿ.ಎಸ್.ಹಂಜರಪ್ಪ, ಡಬ್ಲ್ಯು. ಎಚ್. ಅನಿಲ್ ಕುಮಾರ್, ಜಂಟಿ ಕಾರ್ಯದರ್ಶಿ ಶೇಷ ನಾರಾಯಣ, ಸಹ ಜಂಟಿ ಕಾರ್ಯದರ್ಶಿ ಎಂ.ಎಸ್ ನಟರಾಜ್ ಮತ್ತಿತರರು ಇದ್ದರು.



**ಕಡಕೊಳ ಕೈಗಾರಿಕಾ ಪ್ರದೇಶದಲ್ಲಿರುವ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಕಾಲೇಜಿನಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮವನ್ನು ಯುಕ್ತೇಶಾನಂದಜೀ ಮಹಾರಾಜ್ ಉದ್ಘಾಟಿಸಿದರು.**



# ಡಾ॥ ವುಡೇ ಪಿ. ಕೃಷ್ಣ

## ಇಂಜಿನಿಯರ್ ಶಿಕ್ಷಣತಜ್ಞ ಸಮಾಜಿಕ ಕಾರ್ಯಕರ್ತ

1963ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಇವರು ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದಿಂದ ಬಂದವರು. ರಾಮಕೃಷ್ಣ ಆಶ್ರಮ ಮತ್ತು ಮಿಷನ್ ನಡೆಸುತ್ತಿರುವ ಮೈಸೂರಿನ ಪ್ರಸಿದ್ಧ ಶ್ರೀ ರಾಮಕೃಷ್ಣ ವಿದ್ಯಾಶಾಲೆಯಲ್ಲಿ ತಮ್ಮ ಪ್ರಾಥಾಮಿಕ ಶಿಕ್ಷಣವನ್ನು ಪಡೆದ ನಂತರ, ಅವರು ಎಂಜಿನಿಯರಿಂಗ್ ಮತ್ತು ಕಾನೂನಿನಲ್ಲಿ ಸ್ನಾತಕೋತ್ತರ ಪದವಿಗಳನ್ನು ಪಡೆದರು. ನಂತರ ಅವರು ಬ್ಯುಸಿನೆಸ್ ಅಡ್ಮಿನಿಸ್ಟ್ರೇಷನ್ ನಲ್ಲಿ ಪಿಎಚ್.ಡಿ ಮಾಡಿದರು.

ಡಾ. ವುಡೆ ಪಿ. ಕೃಷ್ಣ ಅವರಿಗೆ ಇಂಜಿನಿಯರಿಂಗ್ ಕ್ಷೇತ್ರದಲ್ಲಿನ ಕೊಡುಗೆಗಾಗಿ ಎಮಿನೆಂಟ್ ಮೆಕ್ಯಾನಿಕಲ್ ಇಂಜಿನಿಯರ್ ರಾಷ್ಟ್ರೀಯ ಪ್ರಶಸ್ತಿ ಗೆ ಭಾಜನರಾಗಿದ್ದಾರೆ. ಸಮಾಜಕ್ಕೆ ಅವರ ಅಸಾಧಾರಣ ಸೇವೆಗಾಗಿ ಬೆಂಗಳೂರು ವಿಶ್ವವಿದ್ಯಾನಿಲಯವು ಅವರಿಗೆ ಗೌರವ ಡಾಕ್ಟರ್ ಆಫ್ ಲೆಟರ್ಸ್ (ಡಿ. ಲಿಟ್.) ಪದವಿಯನ್ನು ನೀಡಿದೆ.



ಡಾ. ವೂಡೆ ಪಿ ಕೃಷ್ಣ ಅವರು ಅನೇಕ ಉನ್ನತ ಹುದ್ದೆಗಳಲ್ಲಿ ಹೊಣೆಗಾರಿಕೆ ನಿಭಾಯಿಸಿದ್ದಾರೆ. ಕರ್ನಾಟಕದ ಅಧ್ಯಕ್ಷ ಗಾಂಧಿ ಸ್ಮಾರಕ ನಿಧಿ; ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಟ್ರಸ್ಟಿ, ರಾಜ್ಘಾಟ್, ನವದೆಹಲಿ; ಮತ್ತು ರಾಜ್ಯ ಸಚಿವ ಶ್ರೇಣಿಯಲ್ಲಿ ಕರ್ನಾಟಕ ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರದ ಸದಸ್ಯರು. ಭಾರತೀಯ ರೆಡ್ ಕ್ರಾಸ್ ಸೊಸೈಟಿ, ಕ್ಷಯರೋಗ ಅಸೋಸಿಯೇಷನ್ ಆಫ್ ಇಂಡಿ-ಯಾ ಮತ್ತು ಪ್ಯಾನ್-ಇಂಡಿಯಾ ಉಪಸ್ಥಿತಿಯನ್ನು ಹೊಂದಿರುವ ದಿ ಇನ್ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್ (ಇಂಡಿಯಾ) ನಂತಹ ಹೆಚ್ಚು ವಿಶ್ವಾಸಾರ್ಹ ಸಂಸ್ಥೆಗಳ ರಾಷ್ಟ್ರೀಯ ನಿರ್ವಹಣೆಯಲ್ಲಿ ಪ್ರಮುಖ ಸ್ಥಾನಗಳನ್ನು ಹೊಂದಿ ಕರ್ತವ್ಯ ನಿರ್ವಹಣೆ ಮಾಡಿದ್ದಾರೆ. ಸ್ವತಃ ಒಳ್ಳೆಯ ಬರಹಗಾರರು ಆಗಿರುವ ವೂಡೆ ಪಿ ಕೃಷ್ಣ ಅವರು ಶೇಷಾದ್ರಿಪುರಂ ಶಿಕ್ಷಣ ಸಮೂಹ ಸಂಸ್ಥೆಗಳ ಗೌರವ ಪ್ರಧಾನ ಕಾರ್ಯದರ್ಶಿಯಾಗಿದ್ದಾರೆ, ಇದು 2001 ರಿಂದ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ 34 ಸಂಸ್ಥೆಗಳ ಮೂಲಕ ಶಿಶುವಿಹಾರದಿಂದ ಡಾಕ್ಟರೇಟ್ ಹಂತದವರೆಗೆ 24,500 ಕ್ಕೂ ಹೆಚ್ಚು ವಿದ್ಯಾರ್ಥಿಗಳ ಶೈಕ್ಷಣಿಕ ಅಗತ್ಯಗಳನ್ನು ಪೂರೈಸುತ್ತದೆ.

ಸರಕಾರ ವಿಕಲಚೇತನರ ಸಬಲೀಕರಣಕ್ಕಾಗಿ ಕರ್ನಾಟಕವು ಅವರಿಗೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ; ಯುವ ಮತ್ತು ಸಮುದಾಯ ಸೇವೆಗಳಿಗಾಗಿ ರಾಜ್ಯ ಯುವ ಪ್ರಶಸ್ತಿ; ಮತ್ತು, ಸಮಾಜ ಸೇವೆಯಲ್ಲಿ ಜೀವಮಾನ ಸಾಧನೆಗಾಗಿ ರಾಜ್ಯ ರಾಜ್ಯೋತ್ಸವ ಪ್ರಶಸ್ತಿ. ರಾಷ್ಟ್ರಕ್ಕೆ ಅವರ ಸಮರ್ಪಿತ ಸೇವೆಗಳನ್ನು ಗುರುತಿಸಿ, ಶ್ರೀಯುತರಿಗೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯವು ಗೌರವ ಡಾಕ್ಟರ್ ಆಫ್ ಲಿಟರೇಚರ್ (ಡಿ. ಲಿಟ್.) ಪದವಿಗೆ ಸಮಾನವಾದ ಪ್ರತಿಷ್ಠಿತ ನಾಡೋಜ ಪ್ರಶಸ್ತಿಯನ್ನು ಸಹ ನೀಡಿ ಗೌರವಿಸಿದೆ.

ಡಾ॥ ವುಡೆ ಪಿ ಕೃಷ್ಣ ಅವರು 2022 ರ ಹೈದರಾಬಾದ್ನ 37 ನೇ ರಾಷ್ಟ್ರೀಯ ಮೆಕ್ಯಾನಿಕಲ್ ಇಂಜಿನಿಯರ್ಗಳ ಸಮಾವೇಶದಲ್ಲಿ




ಇಂಜಿನಿಯರ್ಸ್ (ಭಾರತ) ದಿಂದ ಪ್ರತಿಷ್ಠಿತ ಎಮಿನೆಂಟ್ ಮೆಕ್ಯಾನಿಕಲ್ ಇಂಜಿನಿಯರ್ ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದಿದ್ದಾರೆ.

- **2002** – ಶಿಕ್ಷಣಕ್ಕಾಗಿ ಬೆಂಗಳೂರು ಮಹಾನಗರ ಪಾಲಿಕೆಯಿಂದ ಕೆಂಪೇಗೌಡ ಪ್ರಶಸ್ತಿ
- **2004** – ಕರ್ನಾಟಕ ಸರ್ಕಾರದಿಂದ ರಾಜ್ಯ ರಾಜ್ಯೋತ್ಸವ ಪ್ರಶಸ್ತಿ – ಸಾಮಾಜಿಕ ಕಾರ್ಯಕ್ಕಾಗಿ.
- **2005** – ಗೌರವಾನ್ವಿತ ಕರ್ನಾಟಕ ರಾಜ್ಯಪಾಲರಿಂದ ರೆಡ್ ಕ್ರಾಸ್ ಪ್ರಶಸ್ತಿ – ಮಾನವೀಯ ಸೇವೆಗಳಿಗಾಗಿ.
- **2011** – ಇಂಜಿನಿಯರ್ಗಳ ಸಂಸ್ಥೆಯಿಂದ ಎಮಿನೆಂಟ್ ಇಂಜಿನಿಯರ್ ಪ್ರಶಸ್ತಿ – ಎಂಜಿನಿಯರಿಂಗ್ ಕ್ಷೇತ್ರದಲ್ಲಿನ ಕೊಡುಗೆಗಾಗಿ.
- **2012** – ರೆಡ್ ಕ್ರಾಸ್ ಮಾನವೀಯ ಕೆಲಸಕ್ಕಾಗಿ ಭಾರತದ ಗೌರವಾನ್ವಿತ ರಾಷ್ಟ್ರಪತಿಗಳಿಂದ ರಾಷ್ಟ್ರಪತಿಗಳ ಚಿನ್ನದ ಪದಕ.
- **2014** – ಯುನೈಟೆಡ್ ಕಿಂಗ್ಡಂನ ಇಂಜಿನಿಯರಿಂಗ್ ಮತ್ತು ತಂತ್ರಜ್ಞಾನ ಸಂಸ್ಥೆಯ ಫೆಲೋಶಿಪ್.
- **2017** – ಶಿಕ್ಷಣವನ್ನು ಒಳಗೊಳ್ಳಲು ಮತ್ತು ಕರ್ನಾಟಕದ ಶಿಕ್ಷಣದ ಭೂದೃಶ್ಯವನ್ನು ಬದಲಾಯಿಸಲು ಅವರ ಆದರ್ಶಪ್ರಾಯ ಕೊಡುಗೆಯನ್ನು ಗುರುತಿಸಿ ಹಿಂದೂ ಗ್ರೂಪ್ನಿಂದ ಡೋಯೆನ್ಸ್ ಪ್ರಶಸ್ತಿ.
- **2020** – ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ನಾಡೋಜ ಗೌರವ ಪದವಿ . ಕರ್ನಾಟಕ ರಾಜ್ಯಪಾಲರು ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಘನತೆವೆತ್ತ ಶ್ರೀ ವಜುಭಾಯಿ ರೂಡಾಭಾಯಿ ವಾಲಾ ಅವರು ಗೌರವ ಪದವಿಯನ್ನು ಪ್ರದಾನ ಮಾಡಿದರು.
- **2023** – ಸಮಾಜಕ್ಕೆ ಅಸಾಧಾರಣ ಸೇವೆಗಾಗಿ ಬೆಂಗಳೂರು ಸಿಟಿ ವಿಶ್ವವಿದ್ಯಾಲಯದಿಂದ ಡಾಕ್ಟರ್ ಆಫ್ ಲೆಟರ್ಸ್ (ಡಿ. ಲಿಟ್.) ಗೌರವ ಪದವಿ.

## ಸಂದರ್ಶನ:

- ಪ್ರ: ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಂತಹ ಪ್ರಸಿದ್ಧ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿರುವ ತಾವು, ಶಿಕ್ಷಣ ಕ್ಷೇತ್ರ ಹೇಗಿರಬೇಕೆಂದು ತಮ್ಮ ಅಭಿಪ್ರಾಯ.?

ಡಾ. ವೂಡೆ.ಪಿ.ಕೃಷ್ಣ :– ಶಿಕ್ಷಣ ಕ್ಷೇತ್ರದಲ್ಲಿ ಜ್ಞಾನದ ಜೊತೆ–ಗೆ ವ್ಯಕ್ತಿತ್ವ ನಿರ್ಮಾಣ ಆಗಬೇಕು. ಶಿಕ್ಷಣದಲ್ಲಿ ಮಾನವೀಯ ಮೌಲ್ಯಗಳು ತತ್ವವಾದರ್ಶಗಳು ಬೋಧನೆ ಆಗಬೇಕು ಶಿಕ್ಷಣವೆಂದರೆ ಜ್ಞಾನದ ಮೂಲವಾಗಬೇಕು. ಕೇವಲ ಪಠ್ಯ ಚಟುವಟಿಕೆಗಳನ್ನು ಬೋಧಿಸುವುದಲ್ಲದೆ ವಿದ್ಯಾರ್ಥಿಗಳಲ್ಲಿ ಮಾನವೀಯ ಮೌಲ್ಯ ಆದರ್ಶ ಗಳನ್ನು ವಿಶೇಷವಾಗಿ ಬೋಧಿಸಿ ಅವರಿಗೆ ಅರಿವು ಮೂಡಿಸಬೇಕು. ನೈತಿಕ ಶಿಕ್ಷಣ ಬೋಧಿಸಿದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ನಿಜವಾದ ಶಿಕ್ಷಣವನ್ನು ಕೊಟ್ಟಂತಾಗುತ್ತದೆ ಆ ಮೂಲಕ ಸಮಾಜಕ್ಕೆ ಪರಿಪೂರ್ಣ ವ್ಯಕ್ತಿಯನ್ನು ಕೊಟ್ಟಂತಾಗುತ್ತದೆ. ಈ ರೀತಿಯಲ್ಲಿ ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಣೆ ಮಾಡಿದಲ್ಲಿ ಉತ್ತಮ ಸಮಾಜ ನಿರ್ಮಾಣ ಸಾಧ್ಯ.

- ಪ್ರ. ಶಿಕ್ಷಣದಲ್ಲಿ ಮೂಲ ಉದ್ದೇಶ ನಿಮ್ಮ ಅಭಿಪ್ರಾಯದಲ್ಲಿ..?

ಡಾ.ವೂಡೆ.ಪಿ.ಕೃಷ್ಣ :– ಶಿಕ್ಷಣದಲ್ಲಿ ಮೂಲ ಉದ್ದೇಶ ಜ್ಞಾನ ವಿಕಾಸನ. ಅವರಲ್ಲಿನ ಜ್ಞಾನವನ್ನು ವಿಕಸಿತಗೊಳಿಸುವುದು ಹಾಗೂ ಇಲ್ಲದ ಜ್ಞಾನವನ್ನು ಅವರಲ್ಲಿ ಮೂಡಿಸುವುದು. ದುರಂತವೆಂದರೆ ಇಂದಿನ ಬಹುತೇಕ ಶಿಕ್ಷಣ ಸಂಸ್ಥೆಗಳು ಪ್ಲೇಸ್ಮೆಂಟ್ ಹೆಸರಿನಲ್ಲಿ ಉದ್ಯೋಗ ವಿನಿಮಯ ಕಚೇರಿಯಂತೆ ಕಾರ್ಯನಿರ್ವಹಣೆ ಮಾಡುತ್ತಿವೆ. ಅದಾಗಬಾರದು ಅಂದರೆ ಕೆಲಸ ಕೊಡಿಸಬಾರದೆಂದುಲ್ಲ, ಜ್ಞಾನವನ್ನು ವೃದ್ಧಿಪನಗೊಳಿಸುವುದು ಮೂಲ ಉದ್ದೇಶವಾಗಬೇಕು. ಸಮರ್ಥವಾದ ಶಿಕ್ಷಣವನ್ನು ನೀಡಿದಲ್ಲಿ ಉದ್ಯೋಗವನ್ನು ಸ್ವತಃ ಪಡೆಗಟ್ಟುಕೊಳ್ಳುತ್ತಾರೆ. ಅವರಿಗೆ ಬೇಕಾದ ಸಂಸ್ಥೆಗಳನ್ನು ಅಥವಾ ಸಂಸ್ಥೆಗಳಿಗೆ ಸೂಕ್ತವಾಗುವ ವ್ಯಕ್ತಿಗಳನ್ನು ಉದ್ಯೋಗ ಸಂಸ್ಥೆಗಳು ಪಡೆದುಕೊಳ್ಳುತ್ತವೆ.





ಇದ್ಯಾವುದೂ ಇಲ್ಲದೆ ಸಹ ಸ್ವತಃ ಸ್ವಯಂ ಉದ್ಯೋಗ ನಿರ್ವಹಣೆ ಮಾಡಿಕೊಳ್ಳುವಂತಹ ಸಮರ್ಥ ಶಿಕ್ಷಣ ನೀಡುವಂತಾಗಬೇಕು.

- ಪ್ರ. ಶಿಕ್ಷಣ ಸಂಸ್ಥೆಗಳು ಉದ್ಯೋಗ ಕೊಡಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸಬಾರದೆಂದರೆ ಭವಿಷ್ಯ ಹೇಗೆ..?

ಡಾ.ವೂಡೆ.ಪಿ.ಕೃಷ್ಣ :– ಶಿಕ್ಷಣ ಸಂಸ್ಥೆಗಳ ಜ್ಞಾನವನ್ನು ಕೊಡುವಂತಹ ಕೇಂದ್ರಗಳಾಗಬೇಕೆ ಹೊರತು ಉದ್ಯೋಗವನ್ನು ಕೊಡುವ ಕೇಂದ್ರಗಳಾಗಬಾರದು. ನಾವು ಕೆಲಸ ಕೊಡಿಸುತ್ತೇವೆ ನೀವು ಓದಿ ಎನ್ನುವಂತಾಗಬಾರದು. ಇವತ್ತು ಮಾಹಿತಿ ಈಗ ಯಾರಿಗೆ ಏನು ಬೇಕು ಎಂಬುದನ್ನು ಕೇವಲ ಬೆರಳ ತುದಿಯಲ್ಲಿ ಪಡೆಯುವಂತಹ ಸಂದರ್ಭದಲ್ಲಿ ಅವರಿಗೆ ಏನು ಬೇಕು ಅವರು ಪಡೆದುಕೊಳ್ಳುತ್ತಾರೆ. ಶುದ್ಧವಾದ ನೈತಿಕವಾದ ಜೀವನಕ್ಕೆ ಪೂರಕವಾದ ವಿದ್ಯೆಯನ್ನು ಕೊಡಬೇಕು ವಿದ್ಯಾ ಸಂಸ್ಥೆಗಳ ಮೂಲ ಉದ್ದೇಶ ವಿದ್ಯೆಯನ್ನು ಕೊಡುವಂತಾಗಬೇಕು.

- ಪ್ರ. ಹಾಗಾದರೆ ಶಿಕ್ಷಣ ಸಂಸ್ಥೆಗಳು ಹೇಗಿರಬೇಕು

ಉತ್ತರ:– ಶಿಕ್ಷಣ ಸಂಸ್ಥೆಗಳು ಮುಕ್ತವಾಗಿ ಕಾರ್ಯನಿರ್ವಹಣೆ ಮಾಡಬೇಕು ಧರ್ಮಧಾರಿತ ಶಿಕ್ಷಣಗಳು ಪಡೆಯಬೇಕು ಶುದ್ಧ ಆಧ್ಯಾತ್ಮಿಕ ಶಿಕ್ಷಣ ಕೊಡಬೇಕು. ಯಾವುದೇ ಧರ್ಮ ಬೋಧನೆ ಮಾಡಬೇಕೆಂದಲ್ಲ. ನೈತಿಕ ಶಿಕ್ಷಣ. ಒಳ್ಳೆಯದು ಕೆಟ್ಟದರ ವಿಶ್ಲೇಷಣೆ ಗುರುಹಿರಿಯರಲ್ಲಿನ ಗೌರವಭಾವ ಸಮಾಜಕ್ಕೆ ನಮ್ಮಿಂದ ತೊಂದರೆ ಆಗಬಾರದು ಬದಲಾಗಿ ಸಮಾಜಕ್ಕೆ ನಮ್ಮ ಕೊಡುಗೆ ನೀಡಬೇಕೆಂಬ ಮಾನವೀಯ ಮೌಲ್ಯಗಳ ಉದ್ದಿಪನಗೊಳಿಸುವಂತಹ ನೈತಿಕ ಶಿಕ್ಷಣ ನೀಡಬೇಕು ಜೊತೆಜೊತೆಗೆ ಪಠ್ಯ ಚಟುವಟಿಕೆಗಳನ್ನು ಕಲಿಸಬೇಕು.

- ಪ್ರ ವೃತ್ತಿ ಆಧಾರಿತದ ಶಿಕ್ಷಣವೇ ಇಂದು ಪ್ರಮುಖ ವಿಷಯವಾಗಿದೆ. ಈ ಕಾಲಘಟ್ಟದಲ್ಲಿ ಮೌಲ್ಯಗಳ ಶಿಕ್ಷಣ ಸಾಧ್ಯವೇ..?

ಉತ್ತರ:– ಖಂಡಿತ ಸಾಧ್ಯವಿದೆ ಪಠ್ಯ ನಿರೂಪಣೆಯಲ್ಲಿ ಒಂದು ಕಡ್ಡಾಯ ನೈತಿಕ ಶಿಕ್ಷಣ ಪಠ್ಯವಾಗಿ ಬೋಧನೆ ಮಾಡುವಂತ ಆಗಬೇಕು. ಹಾಗಾದಲ್ಲಿ ಮಾತ್ರ ಉತ್ತಮ ಸಮಾಜ ನಿರ್ಮಾಣ ಸಾಧ್ಯ. ಇಲ್ಲದೆ ಹೋದಲ್ಲಿ ಕೇವಲ ಹಣ ಗಳಿಸುವ ಹಣ ಗಳಿಸುವ ಎಂಬಂತಾಗಿ ಮೌಲ್ಯಗಳು ಕಳೆದುಹೋಗುತ್ತವೆ ಸಮಾಜದಲ್ಲಿ ವಿಪರೀತ ಏರು ಇಳಿತಗಳು ನಡೆಯುತ್ತದೆ ಅದು ಸ್ವಾಸ್ಥ್ಯ ಸಮಾಜಕ್ಕೆ ಒಳ್ಳೆಯದಲ್ಲ.

- ಪ್ರ. ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಗುರಿ ಏನು ಎಂದು ವಿವರಿಸಿ..?

ಉತ್ತರ:– ಇದೊಂದು ಪಯಣ ಈ ಕ್ಷೇತ್ರದಲ್ಲಿ ಹೀಗೆ ಆಗಬೇಕೆಂಬ ನಿರ್ದಿಷ್ಟ ಗುರಿಯಲ್ಲ. ನಮ್ಮ ಮಾರ್ಗ ಶುದ್ಧವಾಗಿರಬೇಕು ನಮ್ಮ ವಿಚಾರ ಗುರಿಯಾಗಬೇಕು. ಆ ಗುರಿಯೊಂದಿಗೆ  ನಮ್ಮ ಪಯಣ ಸಾಗಬೇಕು. ಆ ಮೂಲಕ ತನ್ನ ಜೀವನ ಸಾಕ್ಷಾತ್ಕಾರವಾಗಬೇಕು.

- ಪ್ರ. ತಾವು ಸಮಾಜದಲ್ಲಿ ಸಾಕಷ್ಟು ಸಾಧನೆ ಮಾಡಿದ್ದೀರಿ, ಇದೆಲ್ಲಾ ಸಾಧ್ಯವಾದುದರ ಬಗ್ಗೆ ತಿಳಿಸಿ

ಉತ್ತರ :– ಸಣ್ಣ ವಯಸ್ಸಿನಲ್ಲಿ ರಾಮಕೃಷ್ಣ ಆಶ್ರಮದ ಪರಿಸರದಲ್ಲಿ ವಿದ್ಯಾಭ್ಯಾಸ ಮಾಡಿದೆ. ಗಾಂಧಿವಾದ ಮತ್ತು ಸಮಾಜ ಅಧ್ಯಯನ ಮಾಡಿದೆ. ಮುಖ್ಯವಾಗಿ ಸಮಯ ಪರಿಪಾಲನೆ ನಾವು ಮಾಡಬೇಕಾದ ನಿರ್ದಿಷ್ಟ ಕಾರ್ಯಯೋಜನೆ ಇದರೊಂದಿಗೆ ನಾವು ಕೆಲಸ ಮಾಡುವ ಕ್ಷೇತ್ರದಲ್ಲಿ ಪರಿಪೂರ್ಣ ಕಾರ್ಯ ಮಾಡುವಂತಾಗಬೇಕು. ನಾವು ಕಾರ್ಯ ಮಾಡುವ ಕ್ಷೇತ್ರದಲ್ಲಿ ನಾವು ವಿಶೇಷವಾಗಬೇಕು ಪರಿಪೂರ್ಣವಾಗಬೇಕು ಆ ಮೂಲಕ ಸಮಾಜಕ್ಕೆ ನಮ್ಮಿಂದ ಒಂದಿಷ್ಟು ಕೊಡುಗೆಯಾಗಬೇಕು ಎಂದು ಯೋಚಿಸುವುದಾದರೆ ಎಲ್ಲವೂ ಸಾಧ್ಯ ಎಂಬುದು ನನ್ನ ಅಭಿಪ್ರಾಯ.



# ಎಂಜಿಸಿ ಎಂಬ ಕನ್ನಡದ ಮೇಷ್ಟ್ರು

– ಹುಲಿಕುಂಟೆ ಮೂರ್ತಿ

ದೊಡ್ಡಬಳ್ಳಾಪುರದ ಕೊಂಗಾಡಿಯಪ್ಪ ಕಾಲೇಜಿನ ಕನ್ನಡ ತರಗತಿಗಳಲ್ಲಿ ನನಗೆ ಸಿಕ್ಕ ಕನ್ನಡ ತಿಳಿವಳಿಕೆ ಜೊತೆಯಲ್ಲಿ ಬಂಪರ್ ಆಫರ್ ಹಾಗೆ ಸಿಕ್ಕಿದವರು ಎಂ.ಜಿ.ಚಂದ್ರಶೇಖರಯ್ಯ ಮೇಷ್ಟ್ರು. ಪಿಯುಸಿ ಮುಗಿಸಿ ಯಾವುದೇ ಮಹತ್ವಾಕಾಂಕ್ಷೆಯಿಲ್ಲದೆ ಬಂದು ಕೊಂಗಾಡಿಯಪ್ಪ ಕಾಲೇಜು ಸೇರಿದ ನನಗೆ ಸಂವಾದದ ಜನಾರ್ದನ್ ಕೆಸರಗದ್ದೆಯವರ ಜತೆಯಲ್ಲಿ ಸಿಕ್ಕ ಎಲ್ಲವೂ ಎಲ್ಲರೂ ಇವತ್ತಿಗೂ ನನ್ನ ಬದುಕಿನ ಭಾಗವಾಗಿರುವುದು ಸೋಜಿಗ. 1999ರಲ್ಲಿ ಸಂವಾದ ಎಂಬ ಸ್ವಯಂ ಸೇವಾ ಸಂಸ್ಥೆ ಆಯೋಜಿಸಿದ್ದ ಯಾಣ ಚಾರಣದಿಂದ ನನ್ನಲ್ಲಿ ಮೂಡಿದ ಆತ್ಮವಿಶ್ವಾಸ ಕೊಂಗಾಡಿಯಪ್ಪ ಕಾಲೇಜಿನವರೆಗೂ ಕರೆತಂತು. ಬಿ.ಎ. ಓದಲು ದೊಡ್ಡಬಳ್ಳಾಪುರಕ್ಕೆ ಬಂದು ಅಲ್ಲಿನ ಸಂವಾದ ಕಚೇರಿಯಲ್ಲಿ ಉಳಿದುಕೊಂಡು ಜನಧ್ವನಿ ಯುವ ವೇದಿಕೆ ಜೊತೆಗೂಡಿ ಸಮಾಜಮುಖಿಯಾಗಿ ಯೋಚನೆ ಮಾಡುತ್ತಿದ್ದಂತೆ ನನ್ನೊಳಗೆ ಸಾಹಿತ್ಯಕ ಅರಿವಿನೊಂದಿಗೆ ಮೆಲ್ಲಗೆ ಮೊಳಕೆಯೊಡೆಯುತ್ತಿದ್ದ ಜನಪರ ಆಲೋಚನಾ ಕ್ರಮವೊಂದರ ಹಿಂದೆ ಈ ಎಂಜಿಸಿ ಇದ್ದರು. ಅಲ್ಲಿಯವರೆಗೆ ಕನ್ನಡ ಸಾಹಿತ್ಯವನ್ನು ರಂಜಕವಾಗಿ, ಮನರಂಜನೆಗಾಗಿ ಓದುತ್ತಿದ್ದ ನನ್ನಂಥವರಿಗೆ ಎಂಜಿಸಿ ಅವರ ತರಗತಿಗಳು ಸಾಹಿತ್ಯವನ್ನು ಓದುವ ನಿಜವಾದ ಮಾರ್ಗದಲ್ಲಿ ತಂದು ನಿಲ್ಲಿಸುತ್ತಿದ್ದವು.

ಬಿ.ಎ. ಓದಲು ಸೇರಿದ ಹೊಸತರಲ್ಲಿ ಡಿ.ಆರ್.ನಾಗರಾಜ್ ಅವರ ನೆನಪಿನ ಸಭೆಯೊಂದನ್ನು ಸಂವಾದ ಸಂಸ್ಥೆ ಏರ್ಪಡಿಸಿತ್ತು. ಅವತ್ತು ಮಂಜುನಾಥ ಅದ್ದೆ ಮತ್ತು ಕೆ.ವೆಂಕಟೇಶ್ ಮಾತನಾಡಿದರು. ಅವರಿಬ್ಬರ ಮಾತುಗಳಲ್ಲಿ ನಾಲ್ಕಾಣೆ ಭಾಗವೂ ಅರ್ಥವಾಗದಿದ್ದರೂ ಅದ್ದೆಯವರು ಹೇಳಿದ 'ಬಿದಿರು ಹೂ ಬಿಡುವ' ಪ್ರಸಂಗ ನನ್ನಲ್ಲಿ ಉಳಿದುಬಿಟ್ಟಿತು. 'ಯಾರು ಇವರೆಲ್ಲ..? ಕನ್ನಡವನ್ನು ಹೀಗೂ ಮಾತನಾಡಬಹುದೇ..?' ಎನ್ನುವ ಪ್ರಶ್ನೆಗಳು ಮೂಡಿದಾಗ ಖಾಸಿಂ ಸಾಬ್ ಮತ್ತು ಬೆಳಚಿಕ್ಕನಹಳ್ಳಿ ಶ್ರೀನಾಥ್ 'ಎಂಜಿಸಿ ಶಿಷ್ಯರೆಲ್ಲಾ ಹೀಗೇ ಮಾತನಾಡುತ್ತಾರೆ; ಅವರಿಗೆಲ್ಲಾ ಓದಿನ ವಿಸ್ತಾರ ಜಾಸ್ತಿ' ಎಂತಲೂ 'ತಾವೂ ಆ ಪ್ರಭಾವಲಯದ ಫಲಿತಗಳೇ' ಅನ್ನುವ ಅರ್ಥದಲ್ಲಿ ವಿವರಿಸಿದ್ದರು. ಶ್ರೀನಾಥ ಮತ್ತು ಖಾಸಿಂ ಇಬ್ಬರೂ ಮಾಡುತ್ತಿದ್ದ ಸಾಹಿತ್ಯಕ ಚರ್ಚೆಗಳು ಅವರ ವಾಗ್ವಾದಗಳಿಗೆ ತಾತ್ವಿಕ ಮೆರಗು ನೀಡುತ್ತಿದ್ದ ಮಂಜುನಾಥ ಅದ್ದೆ, ಕೆ.ವೆಂಕಟೇಶ್, ನೆಲ್ಲುಕುಂಟೆ ವೆಂಕಟೇಶ್ ಮತ್ತು ಕೆ.ನರಸಿಂಹಮೂರ್ತಿ ಅಂಥವರು ಮಾತಿನ ಮಧ್ಯೆ ಎಂಜಿಸಿ ಅವರನ್ನು ಉಲ್ಲೇಖಿಸುತ್ತಿದ್ದುದು ಅವರ ಬಗ್ಗೆ ಸಹಜ ಕುತೂಹಲಕ್ಕೆ ಕಾರಣವಾಗಿತ್ತು. ಈ ಕಾರಣದಿಂದ ಅವರ ತರಗತಿಗಳ ಬಗೆಗಿನ ನನ್ನ ನಿರೀಕ್ಷೆ ದೊಡ್ಡದಾಗಿರುತ್ತಿತ್ತು ಮತ್ತು ನಿಜಕ್ಕೂ ಆ ತರಗತಿಗಳು ವಿಶಿಷ್ಟವಾಗಿರುತ್ತಿದ್ದವು. ಸಂಘಟನೆಯ ಕೆಲಸ ಮತ್ತು ಸುತ್ತಲಿನ ಸಮಾಜದ ಹಿಪೋಕ್ರಸಿ ಬಗೆಗಿನ ವ್ಯಗ್ರತೆ ನನ್ನ ಯೌವನ ಸಹಜ ವ್ಯಕ್ತಿತ್ವಕ್ಕೆ ಪ್ರತಿಭಟನಾತ್ಮಕ ಲಕಣವನ್ನು ತಂದುಕೊಟ್ಟಿದ್ದರಿಂದ ಕೇವಲ ಸಿಲಬಸಿನ ಬೋಸಾ ತರಗತಿಗಳಿಂದ ಆಚೆಗೆ ಬಿಡತೊಡಗಿದ್ದೆ. ಕೆಲವು ದಿನಗಳಲ್ಲಂತೂ ಎಂಜಿಸಿ ತರಗತಿಗಳನ್ನು ಬಿಟ್ಟು ಬೇರೆ ಯಾವ ತರಗತಿಗೂ ಹೋಗುತ್ತಿರಲಿಲ್ಲ.

ದೊಡ್ಡಬಳ್ಳಾಪುರದಲ್ಲಿ ಜೋರಾಗಿ ನಡೆಯುತ್ತಿದ್ದ ಸಾಹಿತ್ಯಕ ಚರ್ಚೆಗಳು ಹಾಗು ಸಾಹಿತ್ಯಾಸಕ್ತಿಗಳ ಹಿಂದೆ ಹೇಗೆ ಎಂಜಿಸಿ ಇದ್ದರೋ ಹಾಗೇ ಎಂಜಿಸಿ ಹಿಂದೆ ಗಾಂಧಿ ತತ್ವಗಳ ಜೊತೆಗೆ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಬೇಕಾದ ನಿಖರ ತಿಳಿವಳಿಕೆ ಇತ್ತು. ಆ ದಾರಿಯಲ್ಲೇ ಅವರೂ ನಡೆಯುತ್ತಾ ನಮ್ಮನ್ನೂ ನಡೆಸಿದರು. ಮುಖ್ಯವಾಗಿ ಇಂಗ್ಲಿಷ್ ಮೇಷ್ಟ್ರು ನಾರಾಯಣ್ ಅವರ ಸಖ್ಯ ಎಂಜಿಸಿ ಅವರ ಈ ನಡಿಗೆಗೆ ಬಹಳ ಸಹಕಾರಿಯಾಯಿತು. ಅದುವರೆಗೆ ಅನುವಾದಗಳಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಹುಡುಕುತ್ತಿದ್ದ ಸಾಹಿತ್ಯದ ಹುಡುಗಿ ಹುಡುಗರಿಗೆ ನಾರಾಯಣ್ ಅವರು ಇಂಗ್ಲಿಷಿನ ನೈಜ ಜಗತ್ತನ್ನು ಕಾಣಿಸತೊಡಗಿದರು. ಈ ಕಾಣುವಿಕೆ ಕನ್ನಡವನ್ನೂ ವಿಶ್ವಾತ್ಮಕವಾಗಿ ಕಾಣಬೇಕಾದ ಅಗತ್ಯವನ್ನು ವಿದ್ಯಾರ್ಥಿಗಳ ಎದುರು ತೆರೆದಿಟ್ಟಿತು. ಈ ಅಗತ್ಯವನ್ನು ಪೂರೈಸುತ್ತಿದ್ದವರು ಎಂಜಿಸಿ. ಈ ಕಾರಣದಿಂದ ದೇವನೂರ ಮಹಾದೇವ, ತೇಜಸ್ವಿ, ಲಂಕೇಶ್, ಡಿ.ಆರ್.ನಾಗರಾಜ್ ಕನ್ನಡದ ಸಾಹಿತ್ಯದ ವಿದ್ಯಾರ್ಥಿಗಳ ಎದೆಯೊಳಗೆ ಇಳಿಯತೊಡಗಿದರು.

ಆಗ ನಾನು ನೋಡಿದ ದೊಡ್ಡಬಳ್ಳಾಪುರದಲ್ಲಿ ನಡೆಯುತ್ತಿದ್ದ ಸಾಹಿತ್ಯಕ ಕಾರ್ಯಕ್ರಮಗಳು, ಜನಪರ ಚಳವಳಿಗಳು, ಕನ್ನಡಪರ ಹೋರಾಟಗಳು ಎಲ್ಲದರಲ್ಲೂ ಕೊಂಗಾಡಿಯಪ್ಪ ಕಾಲೇಜಿನ ಸಂಬಂಧವಿರುತ್ತಿತ್ತು. ಸಾಹಿತ್ಯ ಪರಿಷತ್ತಿನ [illegible] ಸಾಹಿತ್ಯಕ ಭಜನೆಗಳಿಂದಾಚೆಗೆ ಲಂಕೇಶ್ ಕುರಿತ ಓದೋ, ಡಿಆರ್‌ಎನ್–ಮಾದೇವ ಕುರಿತ ಓದೋ ಇದ್ದರೆ ಅಲ್ಲಿ ಎಂಜಿಸಿ ಮತ್ತವರ ವಿದ್ವತ್ ಶಿಷ್ಯರ ಪಡೆ ಇರುತ್ತಿತ್ತು. ಆಗತಾನೇ ದೊಡ್ಡಬಳ್ಳಾಪುರದಲ್ಲಿ ಕಾಲೂರುತ್ತಿದ್ದ ಕೋಮುವಾದಿ ಸಂಘಟನೆಗಳ ಮುಖಂಡರು ವಿದ್ಯಾರ್ಥಿಗಳನ್ನು ಎಂಜಿಸಿ ವಿರುದ್ಧ ಎತ್ತಿಕಟ್ಟುವ ಕೆಲಸವನ್ನೂ ಆರಂಭಿಸಿದ್ದರು. ಈ ಕಾರಣಗಳಿಂದ ದೊಡ್ಡಬಳ್ಳಾಪುರ ಮಿನಿ ಇಂಡಿಯಾ ಅನ್ನಿಸುತ್ತಿತ್ತು. ಇಂಥಾ ಊರಿನಲ್ಲಿ ತಣ್ಣಗೆ ನಡೆಯುತ್ತಿದ್ದ 'ಸಾಹಿತ್ಯದ ಮೂಲಕ ಸಮಾಜವನ್ನು ಅರ್ಥಮಾಡಿಕೊಳ್ಳುವ' ತಾತ್ವಿಕ ಪ್ರಕ್ರಿಯೆಯ ಹಿಂದೆ ಎಂಜಿಸಿ ಇದ್ದರು. ಈ ಪ್ರಕ್ರಿಯೆಗೆ ಒಳಗಾದವರು ಗಾಂಧಿ– ಅಂಬೇಡ್ಕರರನ್ನು, ಲೋಹಿಯಾ–ಸಮಾಜವಾದವನ್ನೂ ತಮ್ಮೊಳಗೆ ತೆಗೆದುಕೊಳ್ಳತೊಡಗಿದರು. ಮತ್ತು ಹಾಗೆ ತೆಗೆದುಕೊಂಡವರು ಇವತ್ತಿಗೂ ಸಮಾಜಮುಖಿಗಳಾಗಿದ್ದಾರೆ.

ಎಂಜಿಸಿ ಎನ್.ಎಸ್.ಎಸ್ ಅಧಿಕಾರಿಯಾಗಿದ್ದ ಕಾರಣಕ್ಕೆ.. ವಾರದಲ್ಲಿ ಒಂದು ದಿನ ಮಸಾಲೆ ದೋಸೆ ಕೊಡುತ್ತಿದ್ದ ಕಾರಣಕ್ಕೆ ನಾನವರಿಗೆ



ವೂಡೆ ಪಿ. ಕೃಷ್ಣ ಅವರಿಂದ ಗೌರವ ಸಮರ್ಪಣೆ

ಹತ್ತಿರವಾಗಿದ್ದೆ; ಅಥವಾ ನನಗವರು ಹತ್ತಿರವಾಗಿದ್ದರು. ನನ್ನ ಹಾಗೆ ಇನ್ನೂ ಕೆಲವರು ಇದ್ದರು. ಎಂಜಿಸಿ ತರಗತಿಗಳಲ್ಲದೆ ಹೊರಗೆ ಸಿಕ್ಕಾಗ ಕೂಡಾ ಸಾಹಿತ್ಯ ಮತ್ತು ಸಮಾಜದ ನಡುವಿನ ಸಂಬಂಧ ಎಂಥಾದ್ದು ಎಂದು ಅರ್ಥಮಾಡಿಸುತ್ತಿದ್ದರು. ಅವರ ಇಂಥಾ ಸಾಹಿತ್ಯಕ ವಿಶ್ಲೇಷಣೆಗಳಿಂದ ಅವರಿಂದ ದೂರವಾಗುತ್ತಿದ್ದವರಿಗಿಂತ ಹತ್ತಿರವಾಗುತ್ತಿದ್ದವರೇ ಹೆಚ್ಚು. ಸಾಮಾಜಿಕ ಏರು ಪೇರುಗಳಿಂದಲೇ ಸೃಷ್ಟಿಯಾದ ಹಾಗೂ ಆ ಕಾರಣಕ್ಕೆ ಎದೆಯೊಳಗೆ ಬೆಂಕಿಯನ್ನು ಹೊತ್ತು ತಿರುಗುತ್ತಿದ್ದ ನನ್ನಂಥ ಯುವಜನರು ಎಂಜಿಸಿಯವರನ್ನು ಪ್ರೀತಿಸದಿರುವುದು ಅಸಾಧ್ಯವಾಗಿತ್ತು. ಡಿಗ್ರಿ ಸಿಲಬಸ್ಸುಗಳ ಒಣ ಬದನೆಕಾಯಿಯ ಬಡಾಯಿಕೋರ ಮೇಷ್ಟ್ರು- ಮೇಡಂಗಳ ನಡುವೆ ಎಂಜಿಸಿ ಭಿನ್ನವಾಗಿದ್ದರು. ಸಾಹಿತ್ಯದ ಸಿಲಬಸ್ಸಿನ ಎಂಥಾದ್ದೇ ಪಾಠವನ್ನೂ ಅವರು ನಮ್ಮಂಥವರಿಗಾಗಿಯೇ ವಿವರಿಸುತ್ತಿದ್ದರು. ಅದಕ್ಕಾಗಿ ಅವರು ದೇವನೂರು ಮಹಾದೇವ, ಡಿಆರ್‌ಎನ್, ಕುವೆಂಪುರನ್ನು ಹೆಚ್ಚು ಆಶ್ರಯಿಸುತ್ತಿದ್ದರು; ಅದು ನಮ್ಮನ್ನು ಮುಟ್ಟಿಬಿಡುತ್ತಿತ್ತು ಹಾಗೂ ಇಂಥಾದ್ದು ದೊಡ್ಡಬಳ್ಳಾಪುರದ ಸಾಹಿತ್ಯಕ ಚುವಟಿಕೆಗಳ ದಿಕ್ಕನ್ನು ಬದಲಿಸಿತು.




ಕರ್ನಾಟಕದಲ್ಲಿ ಇಂತಹ ಗುರು ಶಿಷ್ಯ ಪರಂಪರೆ ಇಂಥಾದ್ದೇ ಹಾದಿಯಲ್ಲಿ ಬೆಳೆದುಬಂದಿದೆ ಹಾಗು ನೂರಾರು ಮೇಷ್ಟ್ರುಗಳು ಹಲವು ತಲೆಮಾರುಗಳ ಪ್ರಜ್ಞೆಯನ್ನು ಜನಮುಖಿಯಾಗಿ ತಿದ್ದಿದ್ದಾರೆ. ಇವತ್ತು ನಾಡಿನ ಭಿನ್ನ ಚಳವಳಿಗಳಲ್ಲಿ ತೊಡಗಿಸಿಕೊಂಡಿರುವ, ಪ್ರಗತಿಪರ ಆಲೋಚನೆಗಳನ್ನು ತಮ್ಮ ಬರವಣಿಗೆಯಲ್ಲಿ ಬಿತ್ತುತ್ತಿರುವ ಸಾವಿರಾರು ಯುವಜನರ ಹಿಂದೆ ಎಂಜಿಸಿ ಅವರಂಥ ಮೇಷ್ಟ್ರುಗಳಿದ್ದಾರೆ. ಇದಕ್ಕೆ ವೆಂಕಣ್ಣಯ್ಯ, ಕುವೆಂಪು, ಕಿರಂ ನಾಗರಾಜ, ಡಿ.ಆರ್.ನಾಗರಾಜ, ಕೆ.ವಿ.ನಾರಾಯಣರಿಂದ ಹಿಡಿದು ಎಸ್.ಜಿ.ಸಿದ್ಧರಾಮಯ್ಯ, ರಹಮತ್ ತರೀಕೆರೆ, ನಟರಾಜ್ ಹುಳಿಯಾರ್, ಕೆ.ವೈ.ನಾರಾಯಣಸ್ವಾಮಿವರೆಗೆ.. ಅಲ್ಲಿಂದಲೂ ಮುಂದಕ್ಕೆ ಸಣ್ಣ ವೈಚಾರಿಕ ತೊರೆಯೊಂದು ಹರಿಯುತ್ತಲೇ ಇದೆ. ಈ ತೊರೆ ಇದ್ದಕ್ಕಿಂದ್ದಂತೆ ಪುಸ್ತಕ ಸಖ್ಯ ಮಾತ್ರದಿಂದ ಉದ್ಭವವಾದದ್ದಲ್ಲ; ಬಸವಲ್ಲಮಷರೀಪಗೋವಿಂದಗುರುಗಳು ತಮ್ಮ ಹಿಂದಿನ ಪರಂಪರೆಯಿಂದ ಪಡೆದ ರಿಲೇ ಓಟವಿದು. ಅದನ್ನು ತೆಗೆದುಕೊಂಡು ಓಡುವುದೂ ಅಷ್ಟು ಸುಲಭವಲ್ಲ.. ಅದೊಂದು ರೀತಿಯಲ್ಲಿ ಮಂಟೇದ ಸಿದ್ದಪ್ಪಾಜಿ ಸಂಬಂಧದಂತೆ.. ಗುರು ಕಟ್ಟಿದ ಉರಿಗದ್ದುಗೆಯಲ್ಲಿ ಶಿಷ್ಯ ಕೂರಬೇಕಾದ ಪವಾಡದಂತೆ.

ಈ ಪವಾಡ ಎಂಜಿಸಿ ವಿಷಯದಲ್ಲಿ ತೀರಾ ಭಿನ್ನವಾದುದು; ಯಾಕೆಂದರೆ ಗಾಂಧಿ ಅನುಯಾಯಿಯಾದ ಅವರ ಬಹುತೇಕ ವಿದ್ಯಾರ್ಥಿಗಳು ಎಡ ಚಿಂತನೆಗಳಿಂದ ಪ್ರೇರಿತರಾದವರು ಮತ್ತು ಆ ದಾರಿಯಲ್ಲಿ ಬಹುದೂರ ನಡೆದವರು. ಉನ್ನತ ಶಿಕ್ಷಣಕ್ಕೆ ತೆರೆದುಕೊಳ್ಳುವ ಗ್ರಾಮೀಣ ಭಾಗದ ಯುವಜನರಲ್ಲಿ ಅಂತರ್ಗ ತವಾಗಿದ್ದ ಪ್ರತಿಭಟನಾತ್ಮಕ ಮನೋಭಾವವನ್ನು ಎಂಜಿಸಿ ತಮ್ಮ ತರಗತಿಗಳಲ್ಲಿ ಎಚ್ಚರಿಸುತ್ತಿದ್ದರು. ತಾವು ಪಾಠ ಮಾಡುವ ಪಠ್ಯಕ್ರಮದ ಮೂಲಕವೇ ಸಾಮಾಜಿಕ ಅಸಮಾನತೆಗಳನ್ನು ಪ್ರಶ್ನಿಸುವ, ಸಮಾನತೆಯ ಹೊಸದಾರಿಗಳನ್ನು ಕಂಡುಕೊಳ್ಳುವ ಹಾಗೂ ಸಿದ್ಧಮಾದರಿಯ ನೋಟ ಕ್ರಮಗಳಿಂದಲ್ಲದೆ ಸಮಾಜಮುಖಿ ನೋಟಕ್ರಮಗಳ ಮೂಲಕ ಜಗತ್ತನ್ನು ಕಾಣುವಂತೆ ವಿದ್ಯಾರ್ಥಿಗಳನ್ನು ಎಂಜಿಸಿ ಪ್ರೇರೇಪಿಸುತ್ತಿದ್ದರು. ಇದರ ಪರಿಣಾಮವಾಗಿ ಸಾಮಾಜಿಕ ಕಟ್ಟಳೆಗಳಿಂದ ನೋವುಂಡ ಯುವಜನರು ತಾವು ಕುಳಿತು ಪಾಠ ಕೇಳುತ್ತಿರುವ ಶಿಕ್ಷಣ ಸಂಸ್ಥೆಯಲ್ಲೇ ಆಗುತ್ತಿದ್ದ ಅನ್ಯಾಯಗಳನ್ನು ಖಂಡಿಸುವ ಪ್ರತಿಭಟನಾ ಸಭೆಗಳ ರೂಪುರೇಷೆಗಳನ್ನು ಅವರ ತರಗತಿಗಳಲ್ಲೇ ರೂಪಿಸಿಕೊಳ್ಳುತ್ತಿದ್ದರು.

ಇದು ಮಾತ್ರವಲ್ಲದೆ ದೊಡ್ಡಬಳ್ಳಾಪುರದ ಸರ್ಕಾರಿ ಕಾಲೇಜಿನ ಅವ್ಯವಸ್ಥೆಯನ್ನು ಸರಿಪಡಿಸಲು, ವಿದ್ಯಾರ್ಥಿನಿಯರಿಗೆ ಶೌಚಾಲಯ ಕಟ್ಟಿಸಲು, ಸರ್ಕಾರಿ ಶಾಲಾ ಕಾಲೇಜುಗಳ ಕಾಂಪೌಂಡು ಕಟ್ಟಿಸಲು, ಸಮರ್ಪಕ ರಸ್ತೆ ನಿರ್ಮಿಸಲು, ದಲಿತ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಲಭ್ಯ ಒದಗಿಸಲು, ರಸ್ತೆ ಅಗಲೀಕರಣಕ್ಕಾಗಿ ಮರಗಳನ್ನು ಕಡಿಯುವುದನ್ನು ತಡೆಯಲು, ಕೈಗಾರಿಕಾ ಪ್ರದೇಶದಲ್ಲಿ ವಿಷಕಾರಿ ತ್ಯಾಜ್ಯವನ್ನು ಹೊರಗೆ ಬಿಡುವುದನ್ನು ತಪ್ಪಿಸಲು, ನಾಗರ-ಕೆರೆ ಹೂಳೆತ್ತಲು ಅಂದು 'ಜನಧ್ವನಿ ಯುವವೇದಿಕೆ' ರೂಪಿಸಿದ ಹೋರಾಟಗಳ ಹಿಂದೆ ಇದೇ ಎಂಜಿಸಿಯವರು ಪಾಠ ಮಾಡುವ ಕೊಂಗಾಡಿಯಪ್ಪ ಕಾಲೇಜಿನ ಹುಡುಗರಿದ್ದರು.

ಮೊನ್ನೆ ಎಂ.ಜಿ.ಚಂದ್ರಶೇಖರಯ್ಯನವರಿಗೆ ವೃತ್ತಿಯಿಂದ ನಿವೃತ್ತಿಯಾದ ಕಾರಣಕ್ಕೆ ಅವರ ವಿದ್ಯಾರ್ಥಿಗಳು ಅಭಿನಂದನಾ ಸಮಾರಂಭ ನಡೆಸಿದರು. ಇವತ್ತು ರಾಜ್ಯದ ಮೂಲೆಮೂಲೆಯಲ್ಲಿ ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿರುವ, ತಮ್ಮ ಜನಪರ ಕೆಲಸಗಳಿಂದ ಹೆಸರುವಾಸಿಯಾಗಿರುವ ಹತ್ತಾರು ಯುವಜನರು ಅಲ್ಲಿ ಸೇರಿದ್ದರು. ದೊಡ್ಡಬಳ್ಳಾಪುರದ ಪ್ರಗತಿಪರ ಗುರು ಶಿಷ್ಯ ಪರಂಪರೆಯೊಂದು ಈ ಸಮಾರಂಭದ ಮೂಲಕ ಮತ್ತೊಂದು ಹೊರಳಿಗೆ, ಉನ್ನತ ಶಿಕ್ಷಣ ಕುರಿತು ತಾವು ಮಾಡಬೇಕಿರುವ ಕ್ರಾಂತಿಕಾರಿ ಸಂಘಟನಾ ಪ್ರಕ್ರಿಯೆಗೆ ಅರ್ಥಪೂರ್ಣವಾಗಿ ತೊಡಗಿ-ಕೊಂಡಿತು. ಇದು ನಮ್ಮ ನಾಡಿನ ತುಂಬಾ ಪಸರಿಸಿದರೆ ವ್ಯಕ್ತಿ ಮತ್ತು ಸಾಮುದಾಯಿಕ ಪ್ರಜ್ಞೆಯಲ್ಲಿ ಗುಲಾಮಗಿರಿಯನ್ನು ಬಿತ್ತುತ್ತಿರುವ ಉನ್ನತ ಶಿಕ್ಷಣವನ್ನು ಬದಲಿಸಿ ನಮ್ಮ ದೇಸೀ ಬದುಕುಗಳನ್ನು ಮತ್ತೆ ಕಟ್ಟಿಕೊಳ್ಳುವ ಕಾರ್ಯಕ್ಕೆ ಚಾಲನೆ ಸಿಗಬಹುದು.

ಕನ್ನಡಪ್ರಭ
ಗುರುವಾರ 7.11.2024

# ರಫಾಯಲ್ ರಾಜ್‌ಗೆ ನುಡಿನಮನ ಕಾರ್ಯಕ್ರಮ

ಬೆಂಗಳೂರು: ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘದಿಂದ ನಗರದ ಪುರಭವನದಲ್ಲಿ ಕನ್ನಡಪರ ಹೋರಾಟಗಾರ ರಫಾಯಲ್ ರಾಜ್ ಅವರ ನುಡಿನಮನ ಕಾರ್ಯಕ್ರಮ ನಡೆಯಿತು. 'ಕನ್ನಡ ಚಳವಳಿಯಲ್ಲಿ ಕ್ರೈಸ್ತ ಕಲಿಗಳು' ಕುರಿತು ಡಾ। ರೀಟಾರೀನಿ ಅವರು ರಚಿಸಿರುವ ಕೃತಿಯನ್ನು ಡಾ। ಮನು ಬಳಿಗಾರ್ ಲೋಕಾರ್ಪಣೆಗೊಳಿಸಿದರು. ಸಮಾರಂಭದಲ್ಲಿ ಡಾ। ಹಂಪ ನಾಗರಾಜಯ್ಯ, ಡಾ। ಪ್ರೊಡೇ. ಪಿ ಕೃಷ್ಣ, ಸಾ.ರಾ.ಗೋವಿಂದು, ಡಾ। ಬಿ.ಟಿ. ಲಲಿತಾ ನಾಯಕ್, ಫಾದರ್ ಥಾಮಸ್, ಫಾದರ್ ಬರ್ತಲೋಮಿಯ, ರಾ.ನಂ.ಚಂದ್ರಶೇಖರ, ವ.ಚ. ಚನ್ನೇಗೌಡ, ಪಾಲನೇತ್ರ, ಸಮೀವುಲ್ಲಾ ಖಾನ್, ಕಾಣಿಕ್ಯ ಮೇರಿ ರಫಾಯಲ್ ರಾಜ್, ಎ.ಐಸಾಕ್, ದೇವಕುಮಾರ್ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ ಸೋಮವಾರ,4 ನವೆಂಬರ್ 2024

# ರಫಾಯಲ್ ರಾಜ್ ಸ್ಮರಣೆ

ವಿಕ ಸುದ್ದಿಲೋಕ ಬೆಂಗಳೂರು

''ಕನ್ನಡ, ಕನ್ನಡಿಗ ಮತ್ತು ಕರ್ನಾಟಕಕ್ಕೆ ಎಳ್ಳಷ್ಟು ಧಕ್ಕೆ ಬಂದರೂ ಸಿಡಿದೇಳುತ್ತಿದ್ದ ಅಗ್ರಮಾನ್ಯ ಕನ್ನಡದ ಹೋರಾಟಗಾರರಲ್ಲಿ ರಫಾಯಲ್ ರಾಜ್ ಮುಂಚೂಣಿಯಲ್ಲಿದ್ದರು'' ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಹಾಗೂ ಕೆಎಸ್‌ಆರ್‌ಟಿಸಿ ಕೇಂದ್ರ ಕನ್ನಡ ಕ್ರಿಯಾ ಸಮಿತಿ ಅಧ್ಯಕ್ಷ ಡಾ. ಮನು ಬಳಿಗಾರ್ ನುಡಿದರು.

ಅಖಿಲ ಕರ್ನಾಟಕ ಕೆಥೋಲಿಕ ಕ್ರೈಸ್ತರ ಕನ್ನಡ ಸಂಘವು ಪುರಭವನದಲ್ಲಿ ಆಯೋಜಿಸಿದ್ದ ಕನ್ನಡದ ಕಟ್ಟಾಳು ರಫಾಯಲ್ ರಾಜ್ ಅವರಿಗೆ ನುಡಿನಮನ ಕಾರ್ಯಕ್ರಮದಲ್ಲಿ ಭಾನುವಾರ ಅವರು ಮಾತನಾಡಿದರು.

''ನಮ್ಮ ಸಮಕಾಲೀನ ಕನ್ನಡ ಹೋರಾಟಗಾರರಲ್ಲಿ ರಫಾಯಲ್ ರಾಜ್ ಅವರದ್ದು ಪ್ರಮುಖವಾದ ಸ್ಥಾನ. ಕನ್ನಡದ ಕೆಲಸಗಳಲ್ಲಿ ಸದಾ ಜಾಗೃತರಾಗಿದ್ದ ರಫಾಯಲ್ ರಾಜ್, ಕನ್ನಡ ಕುರಿತು ಸ್ವಲ್ಪ ವ್ಯತ್ಯಾಸವಾದರೂ ಸ್ಫೋಟಗೊಳ್ಳುತ್ತಿದ್ದರು. ಚರ್ಚ್‌ಗಳಲ್ಲಿ ಕನ್ನಡದಲ್ಲಿ ಪ್ರಾರ್ಥನೆ ಮಾಡಬೇಕೆಂಬುದೂ ಸೇರಿದಂತೆ ಕಾವೇರಿ, ಮಹದಾಯಿ, ಗಡಿ ಹೋರಾಟ, ಕನ್ನಡಿಗರಿಗೆ ಉದ್ಯೋಗ ಒದಗಿಸಿಕೊಡುವಲ್ಲಿ ಬಿಎಂಟಿಸಿ ಕ್ರಿಯಾ ಸಮಿತಿಯಿಂದ ಹಾಗೂ ವೈಯಕ್ತಿಕವಾಗಿ ಹೋರಾಟ ಮಾಡಿದರು,'' ಎಂದು ಸ್ಮರಿಸಿದರು.

ಕರ್ನಾಟಕ ವಿಕಾಸ ರಂಗದ ಅಧ್ಯಕ್ಷ ವ. ಚ. ಚನ್ನೇಗೌಡ ಮಾತನಾಡಿ, ''ಅಖಿಲ ಕರ್ನಾಟಕ ಕೆಥೋಲಿಕ ಕ್ರೈಸ್ತರ ಕನ್ನಡ ಸಂಘವು ರಫಾಯಲ್ ರಾಜ್ ಹೆಸರಿನಲ್ಲಿ ಪ್ರಶಸ್ತಿ ಸ್ಥಾಪಿಸಿ, ನಾಡು-ನುಡಿಗಾಗಿ ಹೋರಾಡಿದ ಒಬ್ಬರಿಗೆ ಪ್ರತಿ ವರ್ಷ ಅವರ ಜನ್ಮದಿನ ಅಥವಾ ನಿಧನದ ದಿನದಂದು ನೀಡುವ ಮೂಲಕ ಅವರನ್ನು ನೆನೆಯುವ ಕೆಲಸ ಮಾಡಬೇಕು'' ಎಂದು ಸಲಹೆ ಮಾಡಿದರು.

'ಕನ್ನಡ ಚಳುವಳಿಯಲ್ಲಿ ಕ್ರೈಸ್ತ ಕಲಿಗಳು' ಕುರಿತು ಡಾ. ರೀಟಾರೀನಿ ಅವರು ರಚಿಸಿರುವ ಕೃತಿಯನ್ನು ಇದೇ ವೇಳೆ ಬಿಡುಗಡೆ ಮಾಡಲಾಯಿತು. ಹಿರಿಯ ಸಾಹಿತಿ ಹಂಪ ನಾಗರಾಜಯ್ಯ, ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ, ಚಲನಚಿತ್ರ ನಿರ್ಮಾಪಕ ಸಾ.ರಾ. ಗೋವಿಂದು, ಮಾಜಿ ಸಚಿವೆ ಡಾ. ಬಿ.ಟಿ. ಲಲಿತಾನಾಯಕ್, ಫಾದರ್ ಥಾಮಸ್, ಫಾದರ್ ಬರ್ತಲೋಮಿಯ, ಕನ್ನಡ ಗೆಳೆಯರ ಬಳಗದ ವ.ಚ. ಚನ್ನೇಗೌಡ, ಪಾಲನೇತ್ರ, ಕಾಣೆಕ್ಯ ಮೇರಿ ರಫಾಯಲ್ ರಾಜ್, ಸಮೀವುಲ್ಲಾಖಾನ್ ಸೇರಿದಂತೆ ಹಲವರು ಪಾಲ್ಗೊಂಡಿದ್ದರು.



ಕನ್ನಡದ ಕಟ್ಟಾಳು ರಫಾಯಲ್ ರಾಜ್ ಅವರಿಗೆ ನುಡಿನಮನ ಸಲ್ಲಿಸಲಾಯಿತು.




ಅಖಿಲ ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘ ಇಂದು ನಗರದ ಪುರಭವನದಲ್ಲಿ ಏರ್ಪಡಿಸಿದ್ದ ಕನ್ನಡ ಹೋರಾಟಗಾರ ದಿ. ರಫಾಯಲ್‌ರಾಜ್ ನುಡಿ ನಮನ ಕಾರ್ಯಕ್ರಮದಲ್ಲಿ ನಾಡೋಜ ಹಂಪಾ ನಾಗರಾ- ಜಯ್ಯ, ನಾಡೋಜ ಮನುಬಳಿಗಾರ್, ನಾಡೋಜ ವೂಡೇ ಪಿ. ಕೃಷ್ಣ, ಡಾ. ಬಿ.ಟಿ ಲಲಿತಾನಾಯಕ್, ವಾ.ಚ. ಚನ್ನಗೌಡ,, ಪಾಲನೇತ್ರ, ವಂದನೀಯ ಸ್ವಾಮಿ, ಅ. ತೋಮಸ್, ವಂ.ಸ್ವಾಮಿ,. ಸಿ. ಫ್ರಾನ್ಸಿಸ್ ಮತ್ತಿತರರು ಭಾಗವಹಿಸಿದ್ದರು.

ಸಂಜೆವಾಣಿ

# ಈ ಸಂಜೆ




ಅಖಿಲ ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘ ಹಮ್ಮಿಕೊಂಡಿದ್ದ ಕನ್ನಡ ಪರ ಹೋರಾಟಗಾರ ರಫಾಯಲ್‌ರಾಜ್ ಅವರ ನುಡಿನಮನ ಕಾರ್ಯಕ್ರಮದಲ್ಲಿ ನಾಡೋಜ ಡಾ.ಹಂಪನಾಗರಾಜಯ್ಯ, ಹಿರಿಯ ಕನ್ನಡಪರ ಹೋರಾಟಗಾರ ಸಾ.ರಾ.ಗೋವಿಂದು, ವೂಡೇಪಿ ಕೃಷ್ಣ, ಡಾ.ಮನುಬಳಿಗಾರ್, ಡಾ.ಬಿ.ಟಿ.ಲಲಿತಾನಾಯಕ್, ಬಾಲನೇತ್ರ, ಡಾ.ಟಿ.ಚನ್ನೇಗೌಡ, ಸ್ವಾಮಿ ಸಿ.ಫ್ರಾನ್ಸಿಸ್ ಮುಂತಾದವರು ಹಾಜರಿದ್ದರು.

ತುಮಕೂರು ವಾರ್ತೆ
25 Oct 2024

# ಅಧ್ಯಾತ್ಮ ಎತ್ತಿ ಹಿಡಿದದ್ದು ಗಾಂಧೀಜಿ, ವಿವೇಕಾನಂದ



ತುಮಕೂರು: ಎಲ್ಲಾ ಜಾತಿ ಧರ್ಮಗಳನ್ನು ಒಗ್ಗೂಡಿಸುವ ದೇಶದ ಅಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ನಂಬಿದ್ದರು, ಮನುಷ್ಯತ್ವ ಸಮಾನತೆಯ ರಾಷ್ಟ್ರ ನಿರ್ಮಿಸುವ ಶಿಕ್ಷಣದ ಅಗತ್ಯ ಭಾರತಕ್ಕಿದೆ ಎಂದು ಸಾರಿದರು ಎಂದು ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು.

ತುಮಕೂರು ವಿವಿ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕ, ಕೌಶಲ್ಯಾಭಿವೃದ್ಧಿ ಘಟಕ, ವಿವಿ ವಿಜ್ಞಾನ ಕಾಲೇಜು, ಕಲಾ ಕಾಲೇಜು ಹಾಗೂ ಸ್ನಾತಕೋತ್ತರ ವಿಭಾಗಗಳ ವತಿಯಿಂದ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಮಾಲೆ ಉದ್ಘಾಟಿಸಿ ಮಹಾತ್ಮ ಗಾಂಧಿ ಮತ್ತು ಸ್ವಾಮಿ ವಿವೇಕಾನಂದರ ಚಿಂತನೆಗಳ ಸಾಮ್ಯತೆ ಕುರಿತು ಮಾತನಾಡಿದರು.

ಗಾಂಧೀಜಿ ಹಾಗೂ ವಿವೇಕಾನಂದರು ವಿರೋಧಿಸಿದ ಜಾತೀಯತೆ ಮತ್ತು ಮತೀಯ ಭೇದ ಭಾವಗಳ ಗದ್ದಲ, ತಾಂತ್ರಿಕ ಅರ್ಭಟದಿಂದ ಹಾಳಾಗುತ್ತಿರುವ ಮನುಷ್ಯ ಸಂಬಂಧ, ಜೀವನ ಶೈಲಿಯ ಬದಲಾವಣೆಯಿಂದಾಗಿ ಪ್ರಕೃತಿಯೊಂದಿಗಿನ ಸಂಬಂಧ ಕಡಿತ, ಸಾಮಾಜಿಕ ಮಾಧ್ಯಮಗಳು, ಜಾಲತಾಣಗಳಿಂದ ದಾರಿ ತಪ್ಪಿರುವ, ತಪ್ಪುತ್ತಿರುವ ಯುವಕರಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಪಾಶ್ಚಾತ್ಯ ಶಿಕ್ಷಣಕ್ಕೆ, ಸಂಸ್ಕೃತಿಗೆ ಬಲಿಯಾಗಿ ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವ ಪೀಳಿಗೆಯನ್ನು ಕಾಣುತ್ತಿದ್ದೇವೆ, ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರ ಚಿಂತನಾ ನಾಯಕತ್ವ ಬೇಕಿದೆ, ಒಳ್ಳೆಯ ಆಲೋಚನೆಗಳೆ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಈ ಇಬ್ಬರು ಮಹನೀಯರ ಒಂದಂಶವನ್ನೂ ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳದಿರುವುದು ವಿಷಾದನೀಯ ಎಂದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹುಮಹಡಿಯ ಕಟ್ಟಡ, ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ, ಬಹುತ್ವತತ್ವವನ್ನು ಉಳಿಸಿಕೊಳ್ಳುವುದರಲ್ಲಿ ಮಂದಿ ಸೋತಿದ್ದಾರೆ ಎಂದು ಗಾಂಧೀಜಿ ಅವರು ತಮ್ಮ ನಡೆಯಲ್ಲಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದು ಹೇಳಿದರು.

ಪಾವಗಡದ ಶ್ರೀರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ ಮಾತನಾಡಿ, ರಾಷ್ಟ್ರ ಗೀತೆಗೆ ಎದ್ದು ನಿಲ್ಲುವಷ್ಟು ತಾಳ್ಮೆಯಿಲ್ಲದ ಮಂದಿಯಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ, ಈಗಿನ ಯುವ ಪೀಳಿಗೆಗೆ ಗಾಂಧೀಜಿ ಹಾಗೂ ವಿವೇಕಾನಂದರ ಉತ್ಕೃಷ್ಟ ಚಿಂತನೆಗಳು ಹಳತಾಗಿರುವುದು ನೋವಿನ ಸಂಗತಿ ಎಂದರು.

ವಿವಿ ಕುಲಪತಿ ಪ್ರೊ.ಎಂ.ವೆಂಕಟೇಶ್ವರಲು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ, ಬುದ್ಧಿಯ ಹಸಿವನ್ನು ನೀಗಿಸುವುದು ಶಿಕ್ಷಣ ಸಂಸ್ಥೆಗಳ ಕರ್ತವ್ಯ, ಧ್ವನಿ ರಹಿತ, ಶೋಷಣೆಯ ಪರವಾದ, ಜವಾಬ್ದಾರಿ ರಹಿತವಾದ ಅಸತ್ಯ ಬದುಕನ್ನು ಸಾಗಿಸುತ್ತಿರುವವರಿಂದ ದೇಶ ಏನನ್ನೂ ನಿರೀಕ್ಷಿಸಬಾರದು ಎಂದರು.

ಕುಲಸಚಿವೆ ನಾಹಿದಾ ಜ಼ಮ್ ಜ಼ಮ್, ಪರೀಕ್ಷಾಂಗ ಕುಲಸಚಿವ ಪ್ರೊ.ಪ್ರಸನ್ನ ಕುಮಾರ್.ಕೆ., ವಿಜ್ಞಾನ ಕಾಲೇಜಿನ ಪ್ರಾಂಶುಪಾಲ ಪ್ರೊ.ಪ್ರಕಾಶ್ ಎಂ.ಶೇಟ್, ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಬಸವರಾಜ.ಜಿ, ಕೌಶಲ್ಯಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಕೆ.ಜಿ.ಪರಶುರಾಮ, ಉಪನ್ಯಾಸಕಿ ಆಶಾರಾಣಿ ಬಗ್ಗನಡು ಇತರರು ಇದ್ದರು.

ಉದಯಕಾಲ
ಕನ್ನಡಿಗರ ಜೀವಾಳ
Oct 25, 2024

# ದಾರಿ ತಪ್ಪುತ್ತಿರುವ ಯುವಕರಿಂದ ರಾಷ್ಟ್ರ ನಿರ್ಮಾಣ ಅಸಾಧ್ಯ: ಡಾ.ವೂಡೇ ಪಿ.ಕೃಷ್ಣ



ಉದಯಕಾಲ ನ್ಯೂಸ್

ತುಮಕೂರು: ಎಲ್ಲಜಾತಿ ಧರ್ಮಗಳನ್ನು ಒಗ್ಗೂಡಿಸುವ ದೇಶದ ಅಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ನಂಬಿದ್ದರು. ಮನುಷ್ಯತ್ವವನ್ನು, ಸಮಾನತೆಯ ರಾಷ್ಟವನ್ನು ನಿರ್ಮಿಸುವ ಶಿಕ್ಷಣದ ಅಗತ್ಯ ಭಾರತಕ್ಕಿದೆ ಎಂದು ಸಾರಿದರು ಎಂದು ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು.

ತುಮಕೂರು ವಿವಿ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕ, ಕೌಶಲ್ಯಾಭಿವೃದ್ಧಿ ಘಟಕ, ವಿವಿ ವಿಜ್ಞಾನ ಕಾಲೇಜು, ಕಲಾ ಕಾಲೇಜು ಹಾಗೂ ಸ್ನಾತಕೋತ್ತರ ವಿಭಾಗಗಳ ವತಿಯಿಂದ ಗುರುವಾರ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಮಾಲೆಯನ್ನು ಉದ್ಘಾಟಿಸಿ 'ಮಹಾತ್ಮ ಗಾಂಧಿ ಮತ್ತು ಸ್ವಾಮಿ ವಿವೇಕಾನಂದರ ಚಿಂತನೆಗಳ ಸಾಮ್ಯತೆ' ಕುರಿತು ಮಾತನಾಡಿದರು.

ಪಾಶ್ಚಾತ್ಯ ಶಿಕ್ಷಣಕ್ಕೆ, ಸಂಸ್ಕೃತಿಗೆ ಬಲಿಯಾಗಿ, ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವಪೀಳಿಗೆಯನ್ನು ಕಾಣುತ್ತಿದ್ದೇವೆ. ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರಂತಹ ಚಿಂತನೆ ಬೇಕಿದೆ. ಒಳ್ಳೆಯ ಆಲೋಚನೆಗಳೆ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಈ ಇಬ್ಬರು ಮಹನೀಯರ ಒಂದಂಶವನ್ನೂ ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳದಿರುವುದು ವಿಷಾದನೀಯ ಎಂದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹುಮಹಡಿಯ ಕಟ್ಟಡ. ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ. ಬಹುತ್ವ ತತ್ವವನ್ನು ಉಳಿಸಿಕೊಳ್ಳುವುದರಲ್ಲಿ ಮಂದಿ ಸೋತಿದ್ದಾರೆ ಎಂದು ಗಾಂಧೀಜಿ ಅವರು ತಮ್ಮ ನಡೆಯಲ್ಲಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದರು.

ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ ಮಾತನಾಡಿ, ರಾಷ್ಟಗೀತೆಗೆ ಎದ್ದು ನಿಲ್ಲುವಷ್ಟು ತಾಳ್ಮೆಯಿಲ್ಲದ ಮಂದಿಯಿಂದ ರಾಷ್ಟ ನಿರ್ಮಾಣ ಸಾಧ್ಯವಿಲ್ಲ. ಈಗಿನ ಯುವಪೀಳಿಗೆಗೆ ಗಾಂಧೀಜಿ ಹಾಗೂ ವಿವೇಕಾನಂದರ ಉತ್ಕೃಷ್ಟ ಚಿಂತನೆಗಳು ಹಳತಾಗಿರುವುದು ನೋವಿನ ಸಂಗತಿ ಎಂದು ಹೇಳಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಿವಿ ಕುಲಪತಿ ಪ್ರೊ.ಎಂ.ವೆಂಕಟೇಶ್ವರಲು ವಹಿಸಿದ್ದರು. ಕುಲಸಚಿವೆ ನಾಹಿದಾ ಜಮ್‌ಜಮ್, ಪರೀಕ್ಷಾಂಗ ಕುಲಸಚಿವ ಪ್ರೊ.ಪ್ರಸನ್ನಕುಮಾರ್ ಕೆ., ವಿಜ್ಞಾನ ಕಾಲೇಜಿನ ಪ್ರಾಂಶುಪಾಲ ಪ್ರೊ.ಪ್ರಕಾಶ್ ಎಂ.ಶೇಟ್, ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಬಸವರಾಜ ಜಿ., ಕೌಶಲ್ಯಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಕೆ.ಜಿ.ಪರಶುರಾಮ, ಉಪನ್ಯಾಸಕಿ ಆಶಾರಾಣಿ ಬಗ್ಗನಡು ಉಪಸ್ಥಿತರಿದ್ದರು.

# ರಫಾಯಲ್ ರಾಜ್ ಸ್ಮರಣೆ

■ ವಿಕ ಸುದ್ದಿಲೋಕ ಬೆಂಗಳೂರು

''ಕನ್ನಡ, ಕನ್ನಡಿಗ ಮತ್ತು ಕರ್ನಾಟಕಕ್ಕೆ ಎಳ್ಳಷ್ಟು ಧಕ್ಕೆ ಬಂದರೂ ಸಿಡಿದೇಳುತ್ತಿದ್ದ ಅಗ್ರಮಾನ್ಯ ಕನ್ನಡದ ಹೋರಾಟಗಾರರಲ್ಲಿ ರಫಾಯಲ್ ರಾಜ್ ಮುಂಚೂಣಿಯಲ್ಲಿದ್ದರು'' ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಹಾಗೂ ಕೆಎಸ್ಆರ್‌ಟಿಸಿ ಕೇಂದ್ರ ಕನ್ನಡ ಕ್ರಿಯಾ ಸಮಿತಿ ಅಧ್ಯಕ್ಷ ಡಾ. ಮನು ಬಳಿಗಾರ್ ನುಡಿದರು.

ಅಖಿಲ ಕರ್ನಾಟಕ ಕೆಥೋಲಿಕ ಕ್ರೈಸ್ತರ ಕನ್ನಡ ಸಂಘವು ಪುರಭವನದಲ್ಲಿ ಆಯೋಜಿಸಿದ್ದ ಕನ್ನಡದ ಕಟ್ಟಾಳು ರಫಾಯಲ್ ರಾಜ್ ಅವರಿಗೆ ನುಡಿನಮನ ಕಾರ್ಯಕ್ರಮದಲ್ಲಿ ಭಾನುವಾರ ಅವರು ಮಾತನಾಡಿದರು.

''ನಮ್ಮ ಸಮಕಾಲೀನ ಕನ್ನಡ ಹೋರಾಟಗಾರರಲ್ಲಿ ರಫಾಯಲ್ ರಾಜ್ ಅವರದ್ದು ಪ್ರಮುಖವಾದ ಸ್ಥಾನ. ಕನ್ನಡದ ಕೆಲಸಗಳಲ್ಲಿ ಸದಾ ಜಾಗೃತರಾಗಿದ್ದ ರಫಾಯಲ್ ರಾಜ್, ಕನ್ನಡ ಕುರಿತು ಸ್ವಲ್ಪ ವ್ಯತ್ಯಾಸವಾದರೂ ಸ್ಫೋಟಗೊಳ್ಳುತ್ತಿದ್ದರು. ಚರ್ಚ್‌ಗಳಲ್ಲಿ ಕನ್ನಡದಲ್ಲಿ ಪ್ರಾರ್ಥನೆ ಮಾಡಬೇಕೆಂಬುದೂ ಸೇರಿದಂತೆ ಕಾವೇರಿ, ಮಹದಾಯಿ, ಗಡಿ ಹೋರಾಟ, ಕನ್ನಡಿಗರಿಗೆ ಉದ್ಯೋಗ ಒದಗಿಸಿಕೊಡುವಲ್ಲಿ ಬಿಎಂಟಿಸಿ ಕ್ರಿಯಾ ಸಮಿತಿಯಿಂದ ಹಾಗೂ ವೈಯಕ್ತಿಕವಾಗಿ ಹೋರಾಟ ಮಾಡಿದರು,'' ಎಂದು ಸ್ಮರಿಸಿದರು.



ಕನ್ನಡದ ಕಟ್ಟಾಳು ರಫಾಯಲ್ ರಾಜ್ ಅವರಿಗೆ ನುಡಿನಮನ ಸಲ್ಲಿಸಲಾಯಿತು.

ಕರ್ನಾಟಕ ವಿಕಾಸ ರಂಗದ ಅಧ್ಯಕ್ಷ ವ. ಚ. ಚನ್ನೇಗೌಡ ಮಾತನಾಡಿ, ''ಅಖಿಲ ಕರ್ನಾಟಕ ಕೆಥೋಲಿಕ ಕ್ರೈಸ್ತರ ಕನ್ನಡ ಸಂಘವು ರಫಾಯಲ್ ರಾಜ್ ಹೆಸರಿನಲ್ಲಿ ಪ್ರಶಸ್ತಿ ಸ್ಥಾಪಿಸಿ, ನಾಡು-ನುಡಿಗಾಗಿ ಹೋರಾಡಿದ ಒಬ್ಬರಿಗೆ ಪ್ರತಿ ವರ್ಷ ಅವರ ಜನ್ಮದಿನ ಅಥವಾ ನಿಧನದ ದಿನದಂದು ನೀಡುವ ಮೂಲಕ ಅವರನ್ನು ನೆನೆಯುವ ಕೆಲಸ ಮಾಡಬೇಕು'' ಎಂದು ಸಲಹೆ ಮಾಡಿದರು.

'ಕನ್ನಡ ಚಳುವಳಿಯಲ್ಲಿ ಕ್ರೈಸ್ತ ಕಲಿಗಳು' ಕುರಿತು ಡಾ. ರೀಟಾರೀನಿ ಅವರು ರಚಿಸಿರುವ ಕೃತಿಯನ್ನು ಇದೇ ವೇಳೆ ಬಿಡುಗಡೆ ಮಾಡಲಾಯಿತು. ಹಿರಿಯ ಸಾಹಿತಿ ಹಂಪ ನಾಗರಾಜಯ್ಯ, ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ, ಚಲನಚಿತ್ರ ನಿರ್ಮಾಪಕ ಸಾ.ರಾ. ಗೋವಿಂದು, ಮಾಜಿ ಸಚಿವೆ ಡಾ. ಬಿ.ಟಿ. ಲಲಿತಾನಾಯಕ್, ಫಾದರ್ ಥಾಮಸ್, ಫಾದರ್ ಬರ್ತಲೋಮಿಯ, ಕನ್ನಡ ಗೆಳೆಯರ ಬಳಗದ ವ.ಚ. ಚನ್ನೇಗೌಡ, ಪಾಲನೇತ್ರ, ಕಾಣಿಕ್ಯ ಮೇರಿ ರಫಾಯಲ್ ರಾಜ್, ಸಮೀವುಲ್ಲಾಖಾನ್ ಸೇರಿದಂತೆ ಹಲವರು ಪಾಲ್ಗೊಂಡಿದ್ದರು.

ವಿಶ್ವವಾಣಿ
ವಿಶ್ವಾಸವೇ ವಿಶ್ವ



ಪುರಭವನದಲ್ಲಿ ಕ್ಯಾಥೋಲಿಕ್ ಕ್ರೈಸ್ತರ ಕನ್ನಡ ಸಂಘ ಏರ್ಪಡಿಸಿದ್ದ ದಿ. ರಫಾಯಲ್ ರಾಜ್ ಅವರ ನಮನ ಸಮಾರಂಭದಲ್ಲಿ ಕನ್ನಡ ಚಳವಳಿಯಲ್ಲಿ ಕ್ರೈಸ್ತ ಕಲಿಗಳು ಕುರಿತು ಡಾ. ರೀಟಾರೀನಿ ರಚಿಸಿರುವ ಕೃತಿಯನ್ನು ಡಾ. ಮನು ಬಳಿಗಾರ್ ಲೋಕಾರ್ಪಣೆಗೊಳಿಸಿದರು. ನಾಡೋಜ ಹಂಪ ನಾಗರಾಜಯ್ಯ, ನಾಡೋಜ ವೂಡೇ ಪಿ ಕೃಷ್ಣ, ಸಾ.ರಾ. ಗೋವಿಂದು, ಡಾ. ಬಿ.ಟಿ.ಲಲಿತಾ ನಾಯಕ್ ಮುಂತಾದವರು ಉಪಸ್ಥಿತರಿದ್ದರು.

ಬೆವರ ಹನಿ

Oct 25, 2024

# “ಹಾದಿ ತಪ್ಪುತ್ತಿರುವ ಯುವ ಜನತೆ”

## ವಿವಿ ಪ್ರೇರಣಾ ಉಪನ್ಯಾಸದಲ್ಲಿ ವೂಡೇ ಪಿ. ಕೃಷ್ಣ ವಿಷಾದ

'ಬೆವರ ಹನಿ' ವರದಿ

ತುಮಕೂರು: ಎಲ್ಲ ಜಾತಿ ಧರ್ಮಗಳನ್ನು ಒಗ್ಗೂಡಿಸುವ ದೇಶದ ಅಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ನಂಬಿದ್ದರು. ಮನುಷ್ಯತ್ವವನ್ನು, ಸಮಾನತೆಯ ರಾಷ್ಟ್ರವನ್ನು ನಿರ್ಮಿಸುವ ಶಿಕ್ಷಣದ ಅಗತ್ಯ ಭಾರತಕ್ಕಿದೆ ಎಂದು ಸಾರಿದರು ಎಂದು ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು.



ತುಮಕೂರು ವಿವಿ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕ, ಕೌಶಲ್ಯಾಭಿವೃದ್ಧಿ ಘಟಕ, ವಿವಿ ವಿಜ್ಞಾನ ಕಾಲೇಜು, ಕಲಾ ಕಾಲೇಜು ಹಾಗೂ ಸ್ನಾತಕೋತ್ತರ ವಿಭಾಗಗಳ ವತಿಯಿಂದ ಗುರುವಾರ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಮಾಲೆಯನ್ನು ಉದ್ಘಾಟಿಸಿ 'ಮಹಾತ್ಮಗಾಂಧಿ ಮತ್ತು ಸ್ವಾಮಿ ವಿವೇಕಾನಂದರ ಚಿಂತನೆಗಳ ಸಾಮ್ಯತೆ' ಕುರಿತು ಅವರು ಮಾತನಾಡಿದರು.

ಗಾಂಧೀಜಿ ಹಾಗೂ ವಿವೇಕಾನಂದರು ವಿರೋಧಿಸಿದ ಜಾತೀಯತೆ ಮತ್ತು ಮತೀಯ ಬೇಧಭಾವಗಳ ಗದ್ದಲ, ತಾಂತ್ರಿಕ ಆರ್ಭಟದಿಂದ ಹಾಳಾಗುತ್ತಿರುವ ಮನುಷ್ಯ ಸಂಬಂಧ, ಜೀವನ ಶೈಲಿಯ ಬದಲಾವಣೆಯಿಂದಾಗಿ ಪ್ರಕೃತಿಯೊಂದಿಗಿನ ಸಂಬಂಧ ಕಡಿತ, ಸಾಮಾಜಿಕ ಮಾಧ್ಯಮಗಳು, ಜಾಲತಾಣಗಳಿಂದ ದಾರಿತಪ್ಪಿರುವ, ತಪ್ಪುತ್ತಿರುವ ಯುವಕರಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಪಾಶ್ಚಾತ್ಯ ಶಿಕ್ಷಣಕ್ಕೆ, ಸಂಸ್ಕೃತಿಗೆ ಬಲಿಯಾಗಿ, ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವಪೀಳಿಗೆಯನ್ನು ಕಾಣುತ್ತಿದ್ದೇವೆ. ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರಂತಹ ಚಿಂತನಾ ನಾಯಕತ್ವ ಬೇಕಿದೆ. ಒಳ್ಳೆಯ ಆಲೋಚನೆಗಳೆ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಈ ಇಬ್ಬರು ಮಹನೀಯರ ಒಂದಂಶವನ್ನೂ ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳದಿರುವುದು ವಿಷಾದನೀಯ ಎಂದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹುಮಹಡಿಯ ಕಟ್ಟಡ. ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ. ಬಹುತ್ವತತ್ವವನ್ನು ಉಳಿಸಿಕೊಳ್ಳುವುದರಲ್ಲಿ ಮಂದಿ ಸೋತಿದ್ದಾರೆ ಎಂದು ಗಾಂಧೀಜಿ ತಮ್ಮ ನಡೆಯಲ್ಲಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದು ಹೇಳಿದರು.

ಕುಲಪತಿ ಪ್ರೊ.ಎಂ.ವೆಂಕಟೇಶ್ವರಲು, ಪಾವಗಡದ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ, ರಿಜಿಸ್ಟ್ರಾರ್ ನಾಹಿದಾ ಜಮ್‌ಜಮ್, ಪರೀಕ್ಷಾಂಗ ಕುಲಸಚಿವ ಪ್ರೊ.ಪ್ರಸನ್ನಕುಮಾರ್, ವಿಜ್ಞಾನ ಕಾಲೇಜಿನ ಪ್ರಾಂಶುಪಾಲ ಪ್ರೊ.ಪ್ರಕಾಶ್ ಎಂ.ಶೇಟ್, ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಬಸವರಾಜ, ಕೌಶಲ್ಯಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಕೆ.ಜಿ. ಪರಶುರಾಮ ಹಾಜರಿದ್ದರು. ಉಪನ್ಯಾಸಕಿ ಆಶಾರಾಣಿ ಬಗ್ಗನಡು ನಿರೂಪಿಸಿದರು.

ಸಂಯುಕ್ತ ಕರ್ನಾಟಕ

ಶುಕ್ರವಾರ 25 ಅಕ್ಟೋಬರ್ 2024

# ಸಮಾನತೆ ಸೃಷ್ಟಿಸುವ ಶಿಕ್ಷಣ ಅವಶ್ಯ

## ತಾಂತ್ರಿಕತೆಯ ಆರ್ಭಟದಿಂದ ಮಾನವ ಸಂಬಂಧಗಳು ಹಾಳು । ಡಾ. ವೂಡೇ ಪಿ. ಕೃಷ್ಣ ಹೇಳಿಕೆ

ಸಂ.ಕ. ಸಮಾಚಾರ, ತುಮಕೂರು

ಎಲ್ಲ ಜಾತಿ ಧರ್ಮಗಳನ್ನು ಒಗ್ಗೂಡಿಸುವ ದೇಶದ ಆಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ನಂಬಿದ್ದರು. ಮನುಷ್ಯತ್ವವನ್ನು, ಸಮಾನತೆಯ ರಾಷ್ಟ್ರವನ್ನು ನಿರ್ಮಿಸುವ ಶಿಕ್ಷಣದ ಅಗತ್ಯ ಭಾರತಕ್ಕಿದೆ ಎಂದು ಸಾರಿದರು ಎಂದು ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಹೇಳಿದರು.

ತುಮಕೂರು ವಿವಿ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕ, ಕೌಶಲ್ಯಾಭಿವೃದ್ಧಿ ಘಟಕ, ವಿವಿ ವಿಜ್ಞಾನ ಕಾಲೇಜು, ಕಲಾ ಕಾಲೇಜು ಹಾಗೂ ಸ್ನಾತಕೋತ್ತರ ವಿಭಾಗಗಳ ವತಿಯಿಂದ ಗುರುವಾರ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಮಾಲೆಯನ್ನು ಉದ್ಘಾಟಿಸಿ 'ಮಹಾತ್ಮ ಗಾಂಧಿ ಮತ್ತು ಸ್ವಾಮಿ ವಿವೇಕಾನಂದರ ಚಿಂತನೆಗಳ ಸಾಮ್ಯತೆ' ಕುರಿತು ಮಾತನಾಡಿ, ಗಾಂಧೀಜಿ ಹಾಗೂ ವಿವೇಕಾನಂದರು ವಿರೋಧಿಸಿದ್ದ ಜಾತೀಯತೆ ಮತ್ತು ಮತೀಯ ಭೇದಭಾವಗಳ ಗದ್ದಲ, ತಾಂತ್ರಿಕ ಆರ್ಭಟದಿಂದ ಹಾಳಾಗುತ್ತಿರುವ ಮನುಷ್ಯ ಸಂಬಂಧ, ಜೀವನ ಶೈಲಿಯ ಬದಲಾವಣೆಯಿಂದಾಗಿ ಪ್ರಕೃತಿಯೊಂದಿಗಿನ ಸಂಬಂಧ ಕಡಿತ, ಸಾಮಾಜಿಕ ಮಾಧ್ಯಮಗಳು, ಜಾಲತಾಣಗಳಿಂದ ದಾರಿ ತಪ್ಪಿರುವ, ತಪ್ಪುತ್ತಿರುವ ಯುವಕರಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.



ವಿವಿ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಮಾಲೆಯನ್ನು ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು. ಪ್ರೊ. ಎಂ. ವೆಂಕಟೇಶ್ವರಲು, ಸ್ವಾಮಿ ಜಪಾನಂದಜೀ, ನಾಹಿದಾ ಜಮ್ ಜಮ್ ಮತ್ತಿತರರಿದ್ದರು.

ಪಾಶ್ಚಾತ್ಯ ಶಿಕ್ಷಣಕ್ಕೆ, ಸಂಸ್ಕೃತಿಗೆ ಬಲಿಯಾಗಿ, ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವಪೀಳಿಗೆಯನ್ನು ಕಾಣುತ್ತಿದ್ದೇವೆ. ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರಂತಹ ಚಿಂತನಾ ನಾಯಕತ್ವ ಬೇಕಿದೆ. ಒಳ್ಳೆಯ ಆಲೋಚನೆಗಳೆ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಈ ಇಬ್ಬರು ಮಹನೀಯರ ಒಂದಂಶವನ್ನೂ ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳದಿರುವುದು ವಿಷಾದನೀಯ ಎಂದು ಹೇಳಿದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹುಮಹಡಿಯ ಕಟ್ಟಡ. ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ. ಬಹುತ್ವ ತತ್ವವನ್ನು ಉಳಿಸಿಕೊಳ್ಳುವುದರಲ್ಲಿ ಮಂದಿ ಸೋತಿದ್ದಾರೆ ಎಂದು ಗಾಂಧೀಜಿ ಅವರು ತಮ್ಮ ನಡೆಯಲ್ಲಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದರು.

ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ ಮಾತನಾಡಿ, [illegible] ಎದ್ದು ನಿಲ್ಲುವಷ್ಟು ತಾಳ್ಮೆಯಿಲ್ಲದ ಮಂದಿಯಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ. ಈಗಿನ ಯುವಜನರಿಗೆ ಗಾಂಧೀಜಿ ಹಾಗೂ ವಿವೇಕಾನಂದರ ಉತ್ಕೃಷ್ಟ ಚಿಂತನೆಗಳು ಮರೆಯಾಗಿರುವುದು ನೋವಿನ ಸಂಗತಿ ಎಂದು ತಿಳಿಸಿದರು.

ವಿವಿ ಕುಲಪತಿ ಪ್ರೊ. ಎಂ. ವೆಂಕಟೇಶ್ವರಲು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ, ಬುದ್ಧಿಯ ಹಸಿವನ್ನು ನೀಗಿಸುವುದು ಶಿಕ್ಷಣ ಸಂಸ್ಥೆಗಳ ಕರ್ತವ್ಯ. ಧ್ವನಿ ರಹಿತ, [illegible] ಪರವಾದ, ಜವಾಬ್ದಾರಿ ರಹಿತವಾದ [illegible] ಬದುಕನ್ನು ಸಾಗಿಸುತ್ತಿರುವವರಿಂದ ಬೇರೆ ಏನನ್ನೂ ನಿರೀಕ್ಷಿಸಬಾರದು ಎಂದರು.

ಕುಲಸಚಿವೆ ನಾಹಿದಾ ಜಮ್ ಜಮ್, ಪರೀಕ್ಷಾಂಗ ಕುಲಸಚಿವ ಪ್ರೊ. ಕೆ. ಪ್ರಸನ್ನಕುಮಾರ್, ವಿಜ್ಞಾನ ಕಾಲೇಜಿನ ಪ್ರಾಂಶುಪಾಲ ಪ್ರೊ. [illegible] ಶೇಟ್, ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ. ಪಿ. ಬಸವರಾಜ, ಕೌಶಲ್ಯಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ. ಕೆ. ಜಿ. [illegible] ಉಪಸ್ಥಿತರಿದ್ದರು. ಉಪನ್ಯಾಸಕಿ [illegible] ನಿರೂಪಿಸಿದರು.

ಕನ್ನಡಪ್ರಭ

Oct 25. 2024

# ದಾರಿ ತಪ್ಪಿದ ಯುವಕರಿಂದ ರಾಷ್ಟ್ರ ನಿರ್ಮಾಣ ಅಸಾಧ್ಯ

## ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ಅಭಿಮತ | ಪ್ರೇರಣಾ ಉಪನ್ಯಾಸ ಕಾರ್ಯಕ್ರಮ | ಸಾಮಾಜಿಕ ಮಾಧ್ಯಮ, ಜಾಲತಾಣ ದುರುಪಯೋಗ

• ಕನ್ನಡಪ್ರಭ ವಾರ್ತೆ ತುಮಕೂರು

ಎಲ್ಲ ಜಾತಿ ಧರ್ಮಗಳನ್ನು ಒಗ್ಗೂಡಿಸುವ ದೇಶದ ಅಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ನಂಬಿದ್ದರು. ಮನುಷ್ಯತ್ವ, ಸಮಾನತೆಯ ರಾಷ್ಟ್ರವನ್ನು ನಿರ್ಮಿಸುವ ಅಗತ್ಯ ಭಾರತಕ್ಕಿರುವುದಾಗಿ ಅವರು ಸಾರಿದ್ದಾರೆ ಎಂದು ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು.

ತುಮಕೂರು ವಿವಿಯಲ್ಲಿ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ಘಟಕ, ಕೌಶಲ್ಯಾಭಿವೃದ್ಧಿ ಘಟಕ, ವಿವಿ ವಿಜ್ಞಾನಕಾಲೇಜು, ಕಲಾ ಕಾಲೇಜು ಹಾಗೂ ಸ್ನಾತಕೋತ್ತರ ವಿಭಾಗಗಳ ವತಿಯಿಂದ ಗುರುವಾರ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಗಾಂಧೀಜಿ ಹಾಗೂ ವಿವೇಕಾನಂದರು ವಿರೋಧಿಸಿದ ಜಾತೀಯತೆ ಮತ್ತು ಮತೀಯ ಬೇದ ಭಾವಗಳ ಗದ್ದಲ, ತಾಂತ್ರಿಕ ಆರ್ಭಟದಿಂದ ಹಾಳಾಗುತ್ತಿರುವ ಮನುಷ್ಯ ಸಂಬಂಧ, ಜೀವನ ಶೈಲಿಯ ಬದಲಾವಣೆಯಿಂದಾಗಿ ಪ್ರಕೃತಿಯೊಂದಿಗಿನ ಸಂಬಂಧ ಕಡಿತ, ಸಾಮಾಜಿಕ ಮಾಧ್ಯಮಗಳು, ಜಾಲತಾಣಗಳಿಂದ ದಾರಿ ತಪ್ಪಿರುವ, ತಪ್ಪುತ್ತಿರುವ ಯುವಕರಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.



ತುಮಕೂರು ವಿವಿಯಲ್ಲಿ ಆಯೋಜಿಸಿದ್ದ ಪ್ರೇರಣಾ ಉಪನ್ಯಾಸ ಕಾರ್ಯಕ್ರಮವನ್ನು ಗಣ್ಯರು ಉದ್ಘಾಟಿಸಿದರು.

ಪಾಶ್ಚಾತ್ಯ ಶಿಕ್ಷಣಕ್ಕೆ, ಸಂಸ್ಕೃತಿಗೆ ಬಲಿಯಾಗಿ, ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವ ಪೀಳಿಗೆಯನ್ನು ಕಾಣುತ್ತಿದ್ದೇವೆ. ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರಂತಹ ಚಿಂತನಾ ನಾಯಕತ್ವ ಬೇಕಿದೆ. ಒಳ್ಳೆಯ ಆಲೋಚನೆಗಳೇ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಈ ಇಬ್ಬರು ಮಹನೀಯರ ಒಂದಂಶವನ್ನೂ ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳದಿರುವುದು ವಿಷಾದನೀಯ ಎಂದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹುಮಹಡಿಯ ಕಟ್ಟಡ. ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ. ಬಹುತತ್ವವನ್ನು ಉಳಿಸಿಕೊಳ್ಳುವುದರಲ್ಲಿ ಜನರು ಸೋತಿದ್ದಾರೆ ಎಂದು ಗಾಂಧೀಜಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದರು.

ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿಜಪಾನಂದಜೀ ಮಾತನಾಡಿ, ರಾಷ್ಟ್ರಗೀತೆಗೆ ಎದ್ದು ನಿಲ್ಲುವಷ್ಟು ತಾಳ್ಮೆಯಿಲ್ಲದ ಮಂದಿಯಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ. ಈಗಿನ ಯುವಪೀಳಿಗೆಗೆ ಗಾಂಧೀಜಿ ಹಾಗೂ ವಿವೇಕಾನಂದರ ಉತ್ಕೃಷ್ಟ ಚಿಂತನೆಗಳು ಹಳತಾಗಿರುವುದು ನೋವಿನ ಸಂಗತಿ ಎಂದರು.

ವಿವಿ ಕುಲಪತಿ ಪ್ರೊ.ಎಂ.ವೆಂಕಟೇಶ್ವರಲು ಮಾತನಾಡಿ, ಬುದ್ಧಿಯ ಹಸಿವನ್ನು ನೀಗಿಸುವುದು ಶಿಕ್ಷಣ ಸಂಸ್ಥೆಗಳ ಕರ್ತವ್ಯವಾಗಿದೆ. ಧ್ವನಿ ರಹಿತ, ಶೋಷಣೆಯ ಪರವಾದ, ಜವಾಬ್ದಾರಿ ರಹಿತವಾದ ಅಸತ್ಯ ಬದುಕನ್ನು ಸಾಗಿಸುತ್ತಿರುವವರಿಂದ ದೇಶ ಏನನ್ನೂ ನಿರೀಕ್ಷಿಸಬಾರದು ಎಂದರು.

ಕುಲಸಚಿವೆ ನಾಹಿದಾಜಮ್‌ಜಮ್, ಪರೀಕ್ಷಾಂಗ ಕುಲಸಚಿವ ಪ್ರೊ.ಪ್ರಸನ್ನಕುಮಾರ್ ಕೆ., ಪ್ರೊ.ಪ್ರಕಾಶ್ ಎಂ.ಶೇಟ್, ಪ್ರೊ.ಬಸವರಾಜ ಜಿ., ಪ್ರೊ.ಕೆ.ಜಿ. ಪರಶುರಾಮ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ

Oct 25, 2024

# ಶಿಕ್ಷಣದಿಂದ ಮಾತ್ರ ನವಸಮಾಜ ನಿರ್ಮಾಣ



ತುಮಕೂರು: ಎಲ್ಲ ಜಾತಿ ಧರ್ಮವನ್ನು [illegible] ದೇಶದ ಆಧ್ಯಾತ್ಮವನ್ನು ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ಸಂದೇಶವು. [illegible] ಮನಸ್ಸಿನ ರಾಷ್ಟ್ರವನ್ನು ನಿರ್ಮಿಸುವ [illegible] ಸಾಧ್ಯವೆಂದು ಸಾರಿದವರು ಎಂದು ಶಿಕ್ಷಣ [illegible] ಹೇಳಿದರು.

[illegible] ವಿವಿ ವಿದ್ಯಾರ್ಥಿಕ್ಷೇಮಾಭಿವೃದ್ಧಿ [illegible] ಘಟಕ, ವಿವಿ ವಿಜ್ಞಾನ [illegible] ಕಾಲೇಜು ಹಾಗೂ ಸ್ನಾತಕೋತ್ತರ [illegible] ಆಯೋಜಿಸಿದ್ದ ವಿಶೇಷ ಉಪನ್ಯಾಸ [illegible] 'ಮಹಾತ್ಮಗಾಂಧಿ ಮತ್ತು [illegible] ವಿವೇಕಾನಂದರ ಚಿಂತನೆಯ ಸಾಮ್ಯತೆ' ಕುರಿತು ಮಾತನಾಡಿ, ಗಾಂಧೀಜಿ ಹಾಗೂ ವಿವೇಕಾನಂದರು [illegible] ಮಾನವೀಯತೆ ಮತ್ತು ಮಹೀಯ [illegible] ಗದಲ. ತಾಂತ್ರಿಕ ಆರ್ಭಟದಿಂದ [illegible]ರುವ ಮನುಷ್ಯ ಸಂಬಂಧ, ಜೀವನ ಶೈಲಿಯ [illegible]ವಾಗಿ ಪ್ರಕೃತಿಯೊಂದಿಗಿನ ಸಂಬಂಧ [illegible] ಸಾಮಾಜಿಕ ಮಾಧ್ಯಮ, ಜಾಲತಾಣದಿಂದ [illegible]ರುವ, [illegible]ರುವ ಯುವಜನರಿಂದ ರಾಷ್ಟ್ರ ನಿರ್ಮಾಣ ಸಾಧ್ಯವಿಲ್ಲ ಎಂದು ಆತಂಕಪಟ್ಟರು. ಪಾಶ್ಚಾತ್ಯ ಶಿಕ್ಷಣ, ಸಂಸ್ಕೃತಿಗೆ ಬಲಿಯಾಗಿ, ಮತ್ತೊಬ್ಬರ ನೋವಿಗೆ ಸ್ಪಂದಿಸದ ಯುವಪೀಳಿಗೆಯನ್ನು ಕಾಣುತ್ತಿದ್ದೇವೆ. ಮಹಾತ್ಮಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರ ಚಿಂತನಾ ಸಾಯುಜ್ಯ ಬೇಕಿದೆ. ಒಳ್ಳೆಯ ಆಲೋಚನೆ ಗೆಲುವಿನ ಗುಟ್ಟು, ಸರ್ವರ ಒಳಿತು, ಸರ್ವರ ಗೆಲುವು ಎಂದು ಸಾರಿದ ಗಾಂಧೀಜಿ ಸ್ವಾಮೀಜಿಯವರ ಚಿಂತನೆಗಳನ್ನು ಬದುಕಿಗೆ ಇಂದಿನ ಸಮಾಜ ಅಳವಡಿಸಿಕೊಳ್ಳಬೇಕಿರುವುದು ಅನಿವಾರ್ಯ ಎಂದರು.

ಜಾತೀಯತೆ ಎಂದರೆ ಮೆಟ್ಟಿಲುಗಳಿಲ್ಲದ ಬಹು ಮಹಡಿಯ ಕಟ್ಟಡ. ಅಲ್ಲಿ ಜಾತಿ ಧರ್ಮಗಳು ಆಯಾ ಅಂತಸ್ತಿನಲ್ಲಿ ಸಿಲುಕಿ ನರಳುತ್ತಿವೆ. ಬಹುತ್ವವನ್ನು ಉಳಿಸಿಕೊಳ್ಳುವುದರಲ್ಲಿ ಮುಂದೆ ಸೋತಿದ್ದೇವೆಂದು ಗಾಂಧೀಜಿ, ವಿವೇಕಾನಂದರು ತಮ್ಮ ನುಡಿಯಲ್ಲಿ ಸಮಾಜಕ್ಕೆ ತಿಳಿಸಿದರು ಎಂದು ಹೇಳಿದರು.

ಕುಲಸಚಿವೆ ನಾಹಿದಾ ಜಮ್‌ಜಮ್, ಪರೀಕ್ಷಾಂಗ ಕುಲಸಚಿವ ಪ್ರೊ.ಪ್ರಸನ್ನಕುಮಾರ್ ಕೆ., ವಿಜ್ಞಾನ ಕಾಲೇಜಿನ ಪ್ರಾಂಶುಪಾಲ ಪ್ರೊ.ಪ್ರಕಾಶ್ ಎಂ.ಶೇಟ್, ವಿದ್ಯಾರ್ಥಿಕ್ಷೇಮಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ. ಬಸವರಾಜ ಜಿ., ಕೌಶಲ್ಯಾಭಿವೃದ್ಧಿ ಘಟಕದ ನಿರ್ದೇಶಕ ಪ್ರೊ.ಕೆ.ಜಿ. ಪರಶುರಾಮ ಉಪಸ್ಥಿತರಿದ್ದರು. ಉಪನ್ಯಾಸಕಿ ಆಶಾರಾಣಿ ಬಗ್ಗನಾಡು ನಿರೂಪಿಸಿದರು.

ಅಕ್ಟೋಬರ್, ೨೦೦೮

# ಕನ್ನಡ ನಾಡಿಗೆ ಪರಭಾಷಿಕರ ಹಾವಳಿ ಹೆಚ್ಚಾಗುತ್ತಿದೆ : ಡಾ. ವೂಡೇ ಪಿ. ಕೃಷ್ಣ





ನಮ್ಮ ಮನೆ ಮಠ ಸಾಹಿತ್ಯ, ಸಂಸ್ಕೃತಿ ಕನ್ನಡದಲ್ಲೇ ಬರೆದು ಓದಿ-ಸಂಸ್ಕಾರ-ಕಲಿತು-ಈ ಬೆಂಗಳೂರಿನಲ್ಲಿ ಬೆಳೆದವರು. ಆದರೆ ಇಂದು ಆಧುನಿಕತೆಯ ಭರಾಟೆಯಲ್ಲಿ ಕನ್ನಡ ಕನ್ನಡಿಗ ಕರ್ನಾಟಕದ ಸ್ಥಿತಿ-ಗತಿ ಮುಂದಿನ ದಿನಗಳಲ್ಲಿ ಹೋರಾಟದ ಹೆಜ್ಜೆಗಳು ಕಣ್ಮರೆಯಾಗುವ ಲಕ್ಷಣಗಳು ಕಾಣಿಸುತ್ತಿವೆ. ಕಾರಣ ಪರಭಾಷಿಕರ ಹಾವಳಿ ಹೆಚ್ಚಾಗಿದ್ದು ಎಲ್ಲಾ ಕಡೆ, ಎಲ್ಲಾ ಊರು, ಬಡಾವಣೆ, ನಗರಗಳಲ್ಲಿ ಪರದೇಶಿಗರು, ಹೊರ ರಾಜ್ಯದ ಜನರು ದಿನೇ ದಿನೇ ಹೆಚ್ಚಾಗಿ ಆಗಮಿಸುತ್ತಿದ್ದು, ನಮ್ಮವರೇ ಹಿಂದಿ, ಇಂಗ್ಲೀಷ್ ಭಾಷೆಯ ಕಡೆಗೆ ವ್ಯಾಮೋಹಕ್ಕೆ ಒಳಗಾಗುತ್ತಿರುವುದು ಶೋಚನೀಯ, ವಿಷಾದನೀಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಅಭಿಪ್ರಾಯಪಟ್ಟರು.

ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ರಾಜ್ಯ ಮಟ್ಟದ 15ನೇ ಕನ್ನಡ ಸಾಹಿತ್ಯ ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದರು. ಯುವಕರಿಗೆ, ವಿದ್ಯಾರ್ಥಿಗಳಿಗೆ ಕನ್ನಡ ನಾಡಿನ ಹೆಮ್ಮೆಯ ವಿಷಯ ವಿಚಾರಗಳನ್ನು ಮುಕ್ತವಾಗಿ ಪರಿಚಯಿಸುವ ಕಾರ್ಯವನ್ನು ನಾವೆಲ್ಲ ಮಾಡಬೇಕಿದೆ ಎಂದರು.

ಪ್ರಸಿದ್ಧ ವಿದ್ವಾಂಸರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಅಧ್ಯಕ್ಷತೆ ವಹಿಸಿ ನಮ್ಮ ಪರಂಪರೆ, ಸಂಸ್ಕೃತಿ ಜಾಗೃತಿ ಮೂಡಿಸುವ ಕೆಲಸವನ್ನು ಸಿಸಿರಾ ಮತ್ತು ಅವರ ಕುಟುಂಬ, ಶ್ಲಾಘನೀಯ ಎಂದರು.

ಸಮಾವೇಶದ ಅಧ್ಯಕ್ಷರಾದ ಪ್ರೊ. ಲೀಲಾ ವಾಸುದೇವ್ ಅವರು ಮಾತನಾಡಿ ವೇದಗಳ ಕಾಲದಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನ-ಮಾನ ಇತ್ತು. ಆದರೆ ಆಧುನಿಕ ತಂತ್ರಜ್ಞಾನ ಕಾಲದಲ್ಲಿ ಪುರುಷ ದೌರ್ಜನ್ಯ, ಪ್ರಕರಣಗಳು ಹೆಚ್ಚುತ್ತಿವೆ. ಮಹಿಳೆಯರು ಸ್ವಾವಲಂಬನೆಯಾಗಿ ಇರಲು ಕುಟುಂಬ, ಸಮಾಜ ಒಪ್ಪುತ್ತಿಲ್ಲ. ಗಾಂಧಿ ಸಾಹಿತ್ಯ, ನಮ್ಮ ಪರಂಪರೆಯ ಮೌಲ್ಯಗಳನ್ನು, ಪುಸ್ತಕ ಮತ್ತು ವರ್ತಮಾನ ಪತ್ರಿಕೆಗಳ ಓದುವ, ನಮ್ಮ ಮಾನಸಿಕ ತುಮುಲಗಳನ್ನು ಬರೆಯುವ, ಕೌಟುಂಬಿಕ ಸುಂದರ ವಾತಾವರಣವನ್ನು ನಿರ್ಮಿಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದರು.

ಟ್ರಸ್ಟ್‌ನ ಅಧ್ಯಕ್ಷರಾದ ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ) ಅವರು ಸಂಸ್ಥೆಯ ಇಪ್ಪತ್ತಾರು ವರ್ಷಗಳ ಕಾರ್ಯಚಟುವಟಿಕೆಗಳ ಬಗ್ಗೆ ಮಾತನಾಡಿ ಎಲ್ಲರನ್ನೂ ಸ್ವಾಗತಿಸಿದರು.

ಸಾಹಿತಿಗಳಾದ ಡಾ. ಆರ್. ವಾದಿರಾಜ್, ಡಾ. ಕೃಷ್ಣ ಹಾನ್‌ಬಾಳ್, ಕಾರ್ಯದರ್ಶಿ ಸಿ. ಹೇಮಾವತಿ ಮುಂತಾದವರಿದ್ದರು.

ಬೆಳಗ್ಗೆ ಧ್ವಜಾರೋಹಣವನ್ನು ನಿಕಟಪೂರ್ವ ಜಿಲ್ಲಾ ಕ.ಸಾ.ಪ. ಅಧ್ಯಕ್ಷ ಮಾಯಣ್ಣ, ಸಾಹಿತಿ ಡಾ. ಅಂಬುಜಾ ಪ್ರಕಾಶ್, ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಹೋರಾಟಗಾರ್ತಿ ಶಾಂತಲಾ ಸುರೇಶ್ ಪುಸ್ತಕ ಮಾರಾಟ ಪ್ರದರ್ಶನ ಮಳಿಗೆಗೆ ಚಾಲನೆ ನೀಡಿದರು.

ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹನೀಯರಾದ ಪ್ರೊ. ಲೀಲಾ ವಾಸುದೇವ್ (ಸಾಹಿತ್ಯ) ಉದಯರವಿ (ಪತ್ರಿಕೆ), ಅರ್ಚನಾ ರವಿ (ಕಂಪ್ಯೂಟರ್), ಸುನಿತ ನವೀನ್‌ಗೌಡ (ಸಂಗೀತ ನೃತ್ಯ) ಬಿ.ಎಸ್. ಶಂಕರ್ (ಶಿಕ್ಷಣ, ಸಹಕಾರ), ಅವರಿಗೆ ಅನಿಕೇತನ ದತ್ತಿ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ

Oct 19, 2024



ಭಾರತೀಯ ವಿದ್ಯಾಭವನದಲ್ಲಿಂದು ಪಾಲಿ ಇನ್‌ಸ್ಟಿಟ್ಯೂಟ್ ಭಾರತ ವಿದ್ಯಾಭವನ ಹಾಗೂ ಮಹಾಬೋಧಿ ಸಂಶೋಧನಾ ಕೇಂದ್ರದ ಸಹಯೋಗದಲ್ಲಿ ನಡೆದ ಕಾರ್ಯಕ್ರಮದಲ್ಲಿ ಹಿರಿಯ ವಿದ್ವಾಂಸರನ್ನು ಸನ್ಮಾನಿಸಿ ಪಾಲಿ ಕನ್ನಡ ಶಬ್ದಕೋಶದ ಮೂರು ಸಂಪುಟಗಳ ಲೋಕಾರ್ಪಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಆನಂದ್ ಬಂತೇಜಿ, ನಾಡೋಜ ಪ್ರೊ. ಹಂಪ ನಾಗರಾಜಯ್ಯ, ರಾಹುಲ್ ಎಂ. ಖರ್ಗೆ, ನಾಡೋಜ ವೂಡೆ ಪಿ. ಕೃಷ್ಣ, ಪ್ರೊ. ಮಲ್ಲೆಪುರಂ ಜಿ.ವೆಂಕಟೇಶ್ ಮತ್ತಿತರ ಗಣ್ಯರು ಉಪಸ್ಥಿತರಿದ್ದರು.

ವಿಜಯವಾಣಿ ನಂ.1 ಕನ್ನಡ ದಿನಪತ್ರಿಕೆ

Oct 19, 2024

## ನ್ಯಾಯಮೂರ್ತಿ ವಿ. ಶ್ರೀಷಾನಂದ ಬಣ್ಣನೆ । 'ಮೇಧಾನಮನಮ್' ಕಾರ್ಯಕ್ರಮ

# ಮತ್ತೆ ಮತ್ತೆ ಪುಟಿದೇಳುವ ಸಂಸ್ಕೃತ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ದೇಶದ ಮೇಲಾಗಿರುವ ಹಲವು ದಾಳಿಗಳ ಪರಿಣಾಮ ಸಂಸ್ಕೃತ ಕಣ್ಮರೆಯಾಗುತ್ತ ಸಾಗಿತು. ಇಂದಿಗೂ ಸಮಾಜದಲ್ಲಿ ಪ್ರಾಚೀನ ಭಾಷೆಯ ಮೇಲೆ ದಾಳಿಗಳಾಗುತ್ತಿವೆ. ಹೀಗಿದ್ದೂ ಸಂಸ್ಕೃತ ಮತ್ತೆ ಮತ್ತೆ ಪುಟಿದೇಳುತ್ತಲೇ ಇದೆ. ಇದು ಸಂಸ್ಕೃತ ಭಾಷೆಯ ವೈಶಿಷ್ಟ್ಯ ಎಂದು ಹೈಕೋರ್ಟ್ ನ್ಯಾಯಮೂರ್ತಿ ವಿ. ಶ್ರೀಷಾನಂದ ಹೇಳಿದ್ದಾರೆ.

ಮೈತ್ರೀ ಸಂಸ್ಕೃತ- ಸಂಸ್ಕೃತಿ ಪ್ರತಿಷ್ಠಾನ ವೈಯಾಲಿಕಾವಲ್‌ನಲ್ಲಿರುವ ಚೌಡಯ್ಯ ಸ್ಮಾರಕ ಭವನದ ಸಭಾಂಗಣದಲ್ಲಿ ಗುರುವಾರ ಆಯೋಜಿಸಿದ್ದ 'ಮೇಧಾನಮನಮ್' ಕಾರ್ಯಕ್ರಮದಲ್ಲಿ ಮಾತನಾಡಿದರು.

ಸಂಸ್ಕೃತ ಭಾಷೆಯ ಸೊಗಡನ್ನು ಹಾಳುಗೆಡವುವ ಪ್ರಯತ್ನ ಆಗಿಂದಾಗ್ಗೆ ನಡೆಯುತ್ತಿದೆ. 'ಸಂಸ್ಕೃತಿ'ಯ ಉಳಿವಿನಲ್ಲಿ 'ಸಂಸ್ಕೃತ'ದ ಪಾಲು ಬಹಳಷ್ಟಿದೆ. ಸಮಾಜದಲ್ಲಿ ಸಂಸ್ಕೃತ ಭಾಷೆಯ ಪಾತ್ರವನ್ನು ಯಾರಿಂದಲೂ ಅಲ್ಲಗಳೆಯಲು ಸಾಧ್ಯವಿಲ್ಲ. ವಿಶ್ವಕ್ಕೆ ಬೇಕಾಗಿರುವ ಎಲ್ಲ ವಿಚಾರಗಳನ್ನು ಸಂಸ್ಕೃತ ಕೊಡುತ್ತಿದೆ. ಸಂಸ್ಕೃತವನ್ನು ಹೇಳಿಕೊಡಲು ಇಂದಿಗೂ ಹಿರಿಯರು ಸಿದ್ಧರಿದ್ದಾರೆ. ಆದರೆ ಯುವ ತಲೆಮಾರು ಇತರೆ ಆಕರ್ಷಣೆಗಳಿಗೆ ಒಳಗಾಗಿದ್ದಾರೆ. ಹೀಗಾಗಿ ಹೊಸ ಸಾಧ್ಯತೆಗಳನ್ನು ಬಳಸಿಕೊಂಡು ಸಂಸ್ಕೃತ ಕಲಿಸಬೇಕಾಗಿದೆ ಎಂದು ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ನಿರ್ದೇಶಕ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಸಂಸ್ಕೃತವೇ ನಮ್ಮ ಸಂಸ್ಕೃತಿಯ ಮೂಲಧಾತು. ಹೀಗಾಗಿ ನಮ್ಮ ಸಂಸ್ಕೃತಿ ಮುಂದಿನ ತಲೆಮಾರಿಗೂ ಉಳಿಯಬೇಕು ಎಂದಾದರೆ ಸಂಸ್ಕೃತ ಉಳಿಯಬೇಕು. ಇಂಗ್ಲೀಷ್‌ನಿಂದಲೇ ಎಲ್ಲವನ್ನೂ ಸಾಧಿಸುತ್ತೇವೆ ಎಂಬ ಕಲ್ಪನೆ ಸರಿಯಲ್ಲ. ಮಾತೃಭಾಷೆ ಜೊತೆಜೊತೆಗೆ ಸಂಸ್ಕೃತವನ್ನೂ ಕಲಿತರೆ ಉತ್ತಮ ಶಿಕ್ಷಣ ಸಿಗುತ್ತದೆ. ಶಿಕ್ಷಣದೊಂದಿಗೆ ಸಂಸ್ಕಾರವನ್ನೂ ಕೊಟ್ಟಾಗ ಮಕ್ಕಳು ಸಮಾಜದಲ್ಲಿ ಪರಿಪೂರ್ಣ ವ್ಯಕ್ತಿಗಳಾಗಿ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂದು ಹೇಳಿದರು.



'ಮೇಧಾನಮನಮ್' ಕಾರ್ಯಕ್ರಮದಲ್ಲಿ ಡಾ. ಮೀನಾಕ್ಷಿ ಶ್ರೀನಿವಾಸ್ ಹಾಗೂ ಡಾ. ಎಚ್. ವಿ. ನಾಗರಾಜ್ ಅವರಿಗೆ 'ಮೈತ್ರಿ ಪುರಸ್ಕಾರ' ಪ್ರಶಸ್ತಿ ಪ್ರದಾನ ಮಾಡಲಾಯಿತು. ಹೈಕೋರ್ಟ್ ನ್ಯಾಯಮೂರ್ತಿ ವಿ. ಶ್ರೀಷಾನಂದ, ನಟ ಸುಚೇಂದ್ರ ಪ್ರಸಾದ್ ಇತರರಿದ್ದರು.

ಡಾ. ಮೀನಾಕ್ಷಿ ಶ್ರೀನಿವಾಸ್ ಹಾಗೂ ಡಾ. ಎಚ್. ವಿ. ನಾಗರಾಜ್ ಅವರಿಗೆ 'ಮೈತ್ರಿ ಪುರಸ್ಕಾರ' ಪ್ರಶಸ್ತಿ ಪ್ರದಾನ ಮಾಡಲಾಯಿತು. 30 ನಿವೃತ್ತ ಯೋಧರನ್ನು ಗೌರವಿಸಲಾಯಿತು. ಕಳೆದ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ಅತಿಹೆಚ್ಚು ಅಂಕ ಗಳಿಸಿದ 300 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನಡೆಯಿತು. ಹಿರಿಯ ವಕೀಲ ಅಶೋಕ್ ಹಾರನಹಳ್ಳಿ, ಡಾ. ಬಿ. ಎಸ್. ರಾಘವೇಂದ್ರ ಭಟ್, ಜಿ. ವಿ. ಕೃಷ್ಣ, ಗಣಪತಿ ಹೆಗಡೆ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ
ಶುಕ್ರವಾರ • ಅಕ್ಟೋಬರ್ 18, 2024

## ಎಂ.ಜಿ. ಹೆಗಡೆ ಅವರ 'ಚಿಮಣಿ ಬೆಳಕಿನಿಂದ' ಪುಸ್ತಕ ಬಿಡುಗಡೆ

# 'ವದಂತಿ ಸೃಷ್ಟಿಸಿ ಹರಡುವ ಆರ್‌ಎಸ್‌ಎಸ್'

ಪ್ರಜಾವಾಣಿ ವಾರ್ತೆ



ಅಹರ್ನಿಶಿ ಪ್ರಕಾಶನ ನಗರದಲ್ಲಿ ಗುರುವಾರ ಆಯೋಜಿಸಿದ್ದ ಎಂ.ಜಿ. ಹೆಗಡೆ ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಪುಸ್ತಕವನ್ನು ಬಿ.ಕೆ. ಹರಿಪ್ರಸಾದ್ ಬಿಡುಗಡೆ ಮಾಡಿದರು. ಅಕ್ಷತಾ ಹುಂಚದ ಕಟ್ಟೆ, ಪೂಡೇ ಪಿ. ಕೃಷ್ಣ, ಪುರುಷೋತ್ತಮ ಬಿಳಿಮಲೆ ಹಾಜರಿದ್ದರು. — ಪ್ರಜಾವಾಣಿ ಚಿತ್ರ

ಬೆಂಗಳೂರು: ವದಂತಿಗಳನ್ನು ಸೃಷ್ಟಿಸಿ ಹಂಚುವ ಸಂಸ್ಥೆಯೇ ಆರ್‌ಎಸ್‌ಎಸ್. ಅದೊಂದು ಸುಳ್ಳಿನ ಕಾರ್ಖಾನೆ ಎಂದು ವಿಧಾನಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ಹೇಳಿದರು.

ಎಂ.ಜಿ. ಹೆಗಡೆ ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಕೃತಿಯನ್ನು ಗುರುವಾರ ಬಿಡುಗಡೆ ಮಾಡಿ ಅವರು ಮಾತನಾಡಿದರು.

'ಸುಭಾಶ್ಚಂದ್ರ ಬೋಸ್ ಅವರ ಸಾವಿಗೆ ಕಾರಣ ಯಾರು? ಲಾಲ್ ಬಹದ್ದೂರ್ ಶಾಸ್ತ್ರಿ ಅವರ ಸಾವಿಗೆ ಕಾರಣ ಯಾರು? ದೀನ ದಯಾಳ್ ಉಪಾಧ್ಯಾಯರನ್ನು ಕೊಂದವರು ಯಾರು? ಹೀಗೆ ಪ್ರಶ್ನೆಗಳನ್ನು ಹರಡಿ, ಜನರ ತಲೆಯಲ್ಲಿ ಹುಳ ಬಿಟ್ಟು ಆಮೇಲೆ ಕಾಂಗ್ರೆಸ್ ಕಡೆ ಕೈ ತೋರಿಸುವುದನ್ನು ಹಿಂದಿನಿಂದ ಮಾಡಿಕೊಂಡು ಬಂದಿದ್ದಾರೆ. 10 ವರ್ಷದಿಂದ ಅಧಿಕಾರದಲ್ಲಿ ಅವರೇ ಇರುವುದರಿಂದ ಈ ಪ್ರಶ್ನೆಗಳನ್ನು ಕೇಳುವುದಾಗಲಿ, ತನಿಖೆಗೆ ಮುಂದಾಗುವುದಾಗಲಿ ಮಾಡುತ್ತಿಲ್ಲ. ಸುಳ್ಳುಗಳನ್ನು ಪದೇ ಪದೇ ಹೇಳಿ ಹೇಳಿ ಸತ್ಯ ಎಂದು ನಂಬಿಸುವುದಷ್ಟೇ ಇವರ ಕೆಲಸ' ಎಂದು ಆರೋಪಿಸಿದರು.

ದೇಶ ಕಟ್ಟುವ ಬಗ್ಗೆ ಅದ್ಭುತವಾಗಿ ಮಾತನಾಡಿ ಯುವಜನರನ್ನು ಸೆಳೆಯುತ್ತಾರೆ. ಆ ನಂತರ ನಿಧಾನಕ್ಕೆ ಹಿಂದೂ ಮುಸ್ಲಿಂ ದ್ವೇಷವನ್ನು ಅವರ ತಲೆಗೆ ತುಂಬುತ್ತಾರೆ. ಹಿಂದುತ್ವದ ಹೆಸರಿನಲ್ಲಿ ಅಮಾಯಕರ ಬಲಿ ಕೊಡುತ್ತಾರೆ. ಇದನ್ನೆಲ್ಲ ತಿಳಿಯಲು 'ಚಿಮಣಿ ಬೆಳಕಿನಿಂದ' ಓದಬೇಕು ಎಂದು ಸಲಹೆ ನೀಡಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ ಮಾತನಾಡಿದರು.

ಕೃತಿಕಾರ ಎಂ.ಜಿ.ಹೆಗಡೆ ಮಾತನಾಡಿ, 'ಗಾಂಧೀಜಿಯ ಬಗೆಗಿನ ನಿಂದನಾತ್ಮಕ ವಿಚಾರಗಳು, ನಿಂದನಾತ್ಮಕ ಪ್ರಶ್ನೆಗಳಿಗೆ ಮೂಲ ಯಾವುದು ಎಂದು ಹುಡುಕಿಕೊಂಡು ಹೋದಾಗ ಅದು 'ನಾನೇಕೆ ಗಾಂಧಿಯನ್ನು ಕೊಂದೆ' ಎಂಬ ಗೋಡ್ಸೆಯ ಕೃತಿಗೆ ಬಂದು ನಿಲ್ಲುತ್ತದೆ' ಎಂದರು.

'ಅದನ್ನು ನಾಥೂರಾಂ ಗೋಡ್ಸೆ ಬರೆದಿಲ್ಲ. ಆತ ಸತ್ತ ಕೆಲವು ವರ್ಷಗಳ ಬಳಿಕ ಗೋಪಾಲ ಗೋಡ್ಸೆ ಬರೆದಿರುವುದು. ನಾಥೂರಾಂ ಗೋಡ್ಸೆ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ಎಂದು 200 ಪುಟಗಳು ಆ ಕೃತಿಯಲ್ಲಿವೆ. ನಾನು ಮಾಹಿತಿ ಹಕ್ಕಿನಲ್ಲಿ ಅರ್ಜಿ ಸಲ್ಲಿಸಿ ಪಡೆದ ಮಾಹಿತಿ ಪ್ರಕಾರ, ಹೇಳಿಕೆ ಕೇವಲ 8 ಪುಟಗಳಿವೆ. ಹಾಗಾದರೆ 200 ಪುಟ ಹೇಗಾದವು? ಇದನ್ನೆಲ್ಲ ಹುಡುಕಿಕೊಂಡು ಗಾಂಧೀಜಿಯನ್ನು ಸಮಗ್ರವಾಗಿ ಓದಿದ ಮೇಲೆ ನನ್ನ ದಾರಿ ಯಾವುದು ಎಂಬುದು ಸ್ಪಷ್ಟವಾಯಿತು' ಎಂದು ಅವರು ಹೇಳಿದರು.

ಉದಯವಾಣಿ
ಶುಕ್ರವಾರ, ಅಕ್ಟೋಬರ್ 18, 2024

# 'ಆರೆಸ್ಸೆಸ್ ಅಂದ್ರೆ ರೂಮರ್ಸ್ ಸ್ಪ್ರೆಡಿಂಗ್ ಸಂಘ'

## ಬಿ.ಕೆ. ಹರಿಪ್ರಸಾದ್ ಆರೋಪ । ಎಂ.ಜಿ.ಹೆಗಡೆ ಅವರ 'ಚಿಮಣಿ ಬೆಳಕಿನಿಂದ' ಕೃತಿ ಬಿಡುಗಡೆ

**ಉದಯವಾಣಿ ಸಮಾಚಾರ**



ಕಾರ್ಯಕ್ರಮದಲ್ಲಿ ಲೇಖಕ ಎಂ.ಜಿ.ಹೆಗಡೆ ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಕೃತಿ ಬಿಡುಗಡೆ ಮಾಡಲಾಯಿತು. ಎಂಎಲ್‌ಸಿ ಬಿ.ಕೆ.ಹರಿಪ್ರಸಾದ್ ಇತರರಿದ್ದರು.

**ಬೆಂಗಳೂರು:** ಆರ್‌ಎಸ್‌ಎಸ್ ಎಂದರೆ (ರೂಮರ್ಸ್ ಸ್ಪ್ರೆಡಿಂಗ್ ಸಂಘ್) ವದಂತಿಗಳನ್ನು ಹರಡುವ ಸಂಘ. ವದಂತಿಗಳನ್ನು ಹಬ್ಬಿಸಿ ಕಳ್ಳರನ್ನು ಸುಳ್ಳ ಮಾಡುತ್ತಾರೆ, ಸುಳ್ಳರನ್ನು ಕಳ್ಳ ಮಾಡುತ್ತಾರೆ. ಸತ್ಯವಾಗಿರುವವರನ್ನು ಕಳ್ಳರನ್ನಾಗಿಸುವ ಶಕ್ತಿ ಆರ್‌ಎಸ್‌ಎಸ್‌ನವರಿಗೆ ಇದೆ ಎಂದು ವಿಧಾನ ಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಕಿಡಿಕಾರಿದ್ದಾರೆ.

ಅಹರ್ನಿಶಿ ಪ್ರಕಾಶನವು ಗಾಂಧಿ ಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಲೇಖಕ ಎಂ.ಜಿ.ಹೆಗಡೆ ಮಂಗಳೂರು ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿದರು.

ಆರ್‌ಎಸ್‌ಎಸ್‌ನವರು ತ್ರಿವರ್ಣ ಧ್ವಜಕ್ಕೆ ಗೌರವ ಕೊಡಲಿಲ್ಲ, 1947ರಲ್ಲಿ ತ್ರಿವರ್ಣ ಧ್ವಜ ಬಂದಾಗ ನಮ್ಮ ಹಿಂದೂ ಸಂಪ್ರದಾಯದಲ್ಲಿ 3 ಬಣ್ಣ ಅಶುಭ. ಅದನ್ನು ಒಪ್ಪಿಕೊಳ್ಳಲಾಗುವುದಿಲ್ಲ, ನಾವು ಭಾಗಧ್ವಜ ಮಾತ್ರ ಒಪ್ಪಿಕೊಳ್ಳುವುದು ಎಂದು ಹೇಳಿ 52 ವರ್ಷ ಆರ್‌ಎಸ್‌ಎಸ್ ಕಚೇರಿಯಲ್ಲಿ ತ್ರಿವರ್ಣ ಧ್ವಜ ಹಾರಿಸಲಿಲ್ಲ, ಇವರು ದೇಶ ಭಕ್ತಿ ಬಗ್ಗೆ ನಮಗೆ ಹೇಳಿ ಕೊಡುತ್ತಾರೆ ಎಂದರು.

ಬಿಜೆಪಿಯ ಶ್ರೇಷ್ಠ ನಾಯಕರಾಗಿದ್ದ ದೀನ್ ದಯಾಳ್ ಉಪಾದ್ಯಾಯ ರೈಲಿನಲ್ಲಿ ಬರುವ ವೇಳೆ ಸಾವನ್ನಪ್ಪಿದ್ದರು. ಆ ಸಾವು ಹೇಗಾಯಿತು ಎಂಬುದನ್ನು ಸಂಘ ಪರಿವಾರ ಹೇಳಬೇಕು. ದೀನ್ ದಯಾಳ್ ಉಪಾಧ್ಯಾಯ ಕೊಲೆ ಆಗಿದ್ದು ಜನಸಂಘದ ಕಡೆಯೇ ತೋರಿಸುತ್ತದೆ. ಇದರ ಬಗ್ಗೆ ಯಾರೂ ಸ್ಪಷ್ಟವಾಗಿ ಹೇಳುತ್ತಲೇ ಇಲ್ಲ, ನರೇಂದ್ರ ಮೋದಿ, ಅಮಿತ್ ಷಾ ಅಥವಾ ಮೋಹನ್ ಭಾಗವತ್‌ರಂತವರು ಹೇಳಲಿ. ಇಲ್ಲದಿದ್ದರೆ ನಾನು ಚುನಾವಣೆ ಆದ ನಂತರ ಅವರ ಹೆಸರು ಹೇಳುತ್ತೇನೆ. ಇನ್ನು ಈ ಹಿಂದೆ ಎಬಿವಿಪಿಯೂ ಸಹ ಇಂದಿನಷ್ಟು ಕೆಟ್ಟದ್ದಾಗಿರಲಿಲ್ಲ, ಆರ್‌ಎಸ್‌ಎಸ್‌ನವರು ಬಡ ಜನರನ್ನು ಶೋಷಣೆ ಮಾಡುತ್ತಿದ್ದಾರೆ. ಹಿಂದುತ್ವದ ಹೆಸರಿನಲ್ಲಿ ಬಡ, ಅಮಾಯಕರನ್ನು ಬಲಿ ತೆಗೆದುಕೊಳ್ಳುತ್ತಿದ್ದಾರೆ. ಇದರ ಬಗ್ಗೆ ಎಚ್ಚರವಹಿಸಬೇಕು ಎನ್ನುವುದಕ್ಕೆ 'ಚಿಮಣಿ ಬೆಳಕಿನಿಂದ' ಕೃತಿ ಬೆಳಕಾಗಿದೆ ಎಂದು ತಿಳಿಸಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ ಮಾತನಾಡಿ, 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬರುವಾಗ ಹಿಂದೂಗಳು ಬ್ರಿಟಿಷರನ್ನು ವಿರೋಧಿಸಿದ್ದರು. ಆದರೆ, ಇಂಗ್ಲಿಷ್ ಅನ್ನು ವಿರೋಧಿಸಲಿಲ್ಲ ಎಂದು ತಿಳಿಸಿದರು.

ಈ ವೇಳೆ ಲೇಖಕ ಎಂ.ಜಿ.ಹೆಗಡೆ ಮಂಗಳೂರು, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜಾ ಡಾ.ವೊಡೇ ಪಿ. ಕೃಷ್ಣ ಅಹರ್ಶಿನಿ ಪ್ರಕಾಶನದ ಅಕ್ಷತಾ ಇತರರಿದ್ದರು.

ಸಂಯುಕ್ತ ಕರ್ನಾಟಕ

04 | ಶುಕ್ರವಾರ 18 ಅಕ್ಟೋಬರ್ 2024
ಬೆಂಗಳೂರು I BENGALURU

# ಜನಸಂಘದಿಂದ ದೀನ್‌ದಯಾಳ್ ಉಪಾಧ್ಯಾಯರ ಹತ್ಯೆ

ಬೆಂಗಳೂರು: ಬಿಜೆಪಿಯ ದೀನ್ ದಯಾಳ್ ಉಪಾಧ್ಯಾಯ ಅವರ ಹತ್ಯೆ ಮಾಡಿದ್ದು ಜನ ಸಂಘದವರು. ಇವರ ಕೊಲೆ ಬಗ್ಗೆ ಪ್ರಶ್ನಿಸಿದರೆ ಎಲ್ಲರೂ ಜನ ಸಂಘದ ಕಡೆ ಬೆರಳು ತೋರುತ್ತಾರೆ ಎಂದು ವಿಧಾನ ಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ಹೇಳಿದರು.

ಗಾಂಧಿ ಭವನದಲ್ಲಿ ಎಂ.ಜಿ.ಹೆಗಡೆ ಅವರ ಚಿಮಣಿ ಬೆಳಕಿನಿಂದ ಆತ್ಮಕತೆ ಕೃತಿ ಬಿಡುಗಡೆ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು.

ದೀನ್‌ದಯಾಳ್ ಉಪಾಧ್ಯಾಯ ಅವರನ್ನು ಕೊಂದವರು ಯಾರು. ಅವರ ಕೊಲೆ ಹೇಗೆ ನಡೆಯಿತು ಎಂದು ಸಂಘಪರಿವಾರದವರು ಹೇಳಬೇಕು. ಎಲ್ಲರೂ ಈ ಕೊಲೆ ಜನ ಸಂಘದ ಕಡೆಯಿಂದಲೇ ನಡೆದಿದೆ ಎನ್ನುತ್ತಾರೆ. ಆದರೆ ಈ ಬಗ್ಗೆ ಯಾರು ಸ್ಪಷ್ಟವಾಗಿ ಉತ್ತರ ನೀಡುತ್ತಿಲ್ಲ ಎಂದು ವಾಗ್ದಾಳಿ ನಡೆಸಿದರು.

ಬಿಜೆಪಿ ಮತ್ತು ಆರ್‌ಎಸ್‌ಎಸ್ ಕಾಲಾಳುಗಳೆಲ್ಲ ಬಡವರು. ಅಧಿಕಾರ ಹಾಗೂ ಸಂಪತ್ತು ಪಡೆಯುವವರು ಬೇರೆಯವರು. ಅದೇ ರೀತಿ ಜೈಲಿಗೆ ಹೋಗುವವರು ಬೇರೆಯವರು. ಸಂಘ ಪರಿವಾರದ ಸಹವಾಸದಿಂದ ಹೋರಾಟ ಮಾಡಿದವರು ಒಂದೋ ಜೈಲಿಗೆ ಹೋಗಬೇಕು ಇಲ್ಲ ಸ್ಮಶಾನ ಸೇರಬೇಕು. ಹೋರಾಟ ಮಾಡುವುದು ಪುನೀತ್ ಕೆರೆಹಳ್ಳಿ ತರದ ಬಡವರು. ಬಿಸಿಸಿಐ ಅಧ್ಯಕ್ಷ ಆಗುವವರು ಜೈ ಶಾ ಅವರಂತವರು ಎಂದು ಹೇಳಿದರು.

ಎಬಿವಿಪಿಯವರು ಆರಂಭದಲ್ಲಿ ಮುಸ್ಲಿಮರ ಬಗ್ಗೆ ಮಾತನಾಡುವುದೇ ಇಲ್ಲ. ಇವರಿಗೆ ಶೂದ್ರ ಹುಡುಗರು ಸಿಕ್ಕಿದರೆ ಮೊದಲು ರಾಷ್ಟ್ರ ಕಟ್ಟಬೇಕು ಅಂತಾರೆ.

ಆ ಮೇಲೆ ನಿಧಾನವಾಗಿ ಶೂದ್ರ ಹುಡುಗರ ತಲೆಯಲ್ಲಿ ಮುಸ್ಲಿಂ ಹಾಗೂ ಹಿಂದೂ ದ್ವೇಷದ ಗೊಬ್ಬರ ತುಂಬುತ್ತಾರೆ. ದೇಶಭಕ್ತರು ಎನ್ನುವ ಆರ್‌ಎಸ್‌ಎಸ್ ಸದಸ್ಯರು ತ್ರಿವರ್ಣ ಧ್ವಜಕ್ಕೆ ಗೌರವ ಕೊಡುವುದಿಲ್ಲ. 52 ವರ್ಷ ಆರ್‌ಎಸ್‌ಎಸ್ ಕಚೇರಿ ಮೇಲೆ ರಾಷ್ಟ್ರ ಧ್ವಜ ಹಾರಿಸಿಲ್ಲ ಎಂದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ ಹಾಗೂ ಇತರರು ಇದ್ದರು.

## ಹತ್ಯೆ ಬಗ್ಗೆ ಜನಸಂಘದವರು ಸ್ಪಷ್ಟವಾಗಿ ಹೇಳಬೇಕು



ಅಹರ್ನಿಶಿ ಪ್ರಕಾಶನದಿಂದ ಹೊರ ತಂದಿರುವ ಎಂ.ಜಿ. ಹೆಗಡೆ ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಕೃತಿಯನ್ನು ವಿಧಾನಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಬಿಡುಗಡೆಗೊಳಿಸಿದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಇತರರಿದ್ದಾರೆ.

## ಕಾಂಗ್ರೆಸ್‌ನಲ್ಲಿ ಮೃದು ಹಿಂದೂತ್ವವಾದಿಗಳು

ನಾವು ಮೃದು ಹಿಂದುತ್ವದವರಲ್ಲ. ಹಿಂದೂಗಳು ಅಷ್ಟೇ. ಕಾಂಗ್ರೆಸ್‌ನಲ್ಲಿ ಕೆಲವರು ಹಿಂದುತ್ವದ ಬಗ್ಗೆ ಮೃಧುಧೋರಣೆ ಅನುಸರಿಸುವವರು ಒದ್ದಾರೆ. ಕೆಲವರು ಹಿಂದೂ ರಾಷ್ಟ್ರ ಕಟ್ಟುವ ಮಾತನಾಡ್ತಾರೆ. ಇಂದಿನ ಪರಿಸ್ಥಿತಿ ಎಲ್ಲಿಗೆ ಬಂದು ನಿಂತಿದೆ. ನಾನು ಮೊದಲಿಂದಲೂ ಎಬಿವಿಪಿ, ಆರ್‌ಎಸ್‌ಎಸ್ ವಿರುದ್ಧ ಇದ್ದವನು. ವಿದ್ಯಾರ್ಥಿ ಸಂಘಟನೆಯಿಂದಲೇ ಬೆಳೆದವನು. ಕಾಂಗ್ರೆಸ್‌ನಲ್ಲಿ ಆಗ ಮೂರು ಗುಂಪುಗಳು ಇದ್ದವು. ದೇವರಾಜ ಅರಸು ಹಾಗೂ ಗುಂಡೂರಾವ್ ಅವರ ಪ್ರತ್ಯೇಕ ಗುಂಪು. ಉಳಿದ ಇನ್ನೊಂದು ಗುಂಪು. ಮೂರು ಗುಂಪುಗಳು ಇದ್ದರೂ ಕೊನೆಗೆ ನಮ್ಮದು ಕಾಂಗ್ರೆಸ್ ಗುಂಪು. ನಾವು ಎಂದೂ ಕಾಂಗ್ರೆಸ್ ಸಿದ್ಧಾಂತ ಹಾಗೂ ನೀತಿ ಬಿಟ್ಟು ಹೋದವರಲ್ಲ ಎಂದರು.

ಪ್ರಜಾವಾಣಿ

ಶುಕ್ರವಾರ ● ಅಕ್ಟೋಬರ್ 18, 2024

## 'ಮುದ್ದಣ ಕೃತಿ ಕರಜನ' ಕೃತಿ ಬಿಡುಗಡೆ ಮಾಡಿದ ಹಂಪನಾ

# ಸ್ಥಿತ್ಯಂತರ ಕಾಲದ ಕವಿ ಮುದ್ದಣ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಹಳೆಗನ್ನಡ ಹಿಂದಕ್ಕೆ ಸರಿದು ಹೊಸಗನ್ನಡ ಮುನ್ನೆಲೆಗೆ ಬರುವ ಸ್ಥಿತ್ಯಂತರ ಕಾಲದ ಕವಿ ಮುದ್ದಣ' ಎಂದು ಸಂಶೋಧಕ ಹಂಪ ನಾಗರಾಜಯ್ಯ ಹೇಳಿದರು.

ನಗರದಲ್ಲಿ ಬುಧವಾರ ನಡೆದ ಸಮಾರಂಭದಲ್ಲಿ ಎ.ವಿ. ನಾವಡ ಸಂಪಾದಿಸಿದ 'ಮುದ್ದಣ ಕೃತಿ ಕರಜನ' ಕೃತಿಯನ್ನು ಬುಧವಾರ ಬಿಡುಗಡೆ ಮಾಡಿ ಅವರು ಮಾತನಾಡಿದರು.

ತುಳು ಸೇರಿದಂತೆ ಪ್ರಾದೇಶಿಕ ಘಾಟಿನ ಭಾಷೆಯನ್ನು ಬಳಸಿರುವ ಮುದ್ದಣ ಹಳೆಗನ್ನಡ, ಹೊಸಗನ್ನಡವನ್ನು ಹಿತವಾಗಿ ಬೆಸೆದ ಬರಹಗಾರ. ಸರಾಗವಾಗಿ ಆಸಕ್ತಿಯಿಂದ ಓದಿಸಿಕೊಂಡು ಹೋಗುವ ಶೈಲಿ ಅವರದ್ದು ಎಂದು ಬಣ್ಣಿಸಿದರು.

ಹಳೆಗನ್ನಡ ಕಾವ್ಯಗಳು ಈಗ ಕಪಾಟುಗಳಲ್ಲೇ ಉಳಿಯುತ್ತಿವೆ. ಹೊಸ ತಲೆಮಾರಿನ ಓದುಗರೂ ಆಸಕ್ತಿ ವಹಿಸುತ್ತಿಲ್ಲ. ವಿಶ್ವವಿದ್ಯಾಲಯಗಳಲ್ಲೂ ಮನ್ನಣೆ ಸಿಗುತ್ತಿಲ್ಲ ಎಂದು ವಿಷಾದಿಸಿದರು.



ಎ.ವಿ. ನಾವಡ ಅವರು ಸಂಪಾದಿಸಿರುವ 'ಮುದ್ದಣ ಕೃತಿ ಕರಜನ' ಕಾವ್ಯ ಸಂಪುಟದ ಮೊದಲ ಪ್ರತಿಯನ್ನು ಸಾಹಿತಿ ಹಂಪ ನಾಗರಾಜಯ್ಯ ಅವರಿಂದ ವಿಧಾನ ಸಭೆಯ ಅಧ್ಯಕ್ಷ ಯು.ಟಿ.ಖಾದರ್ ಸ್ವೀಕರಿಸಿದರು.. ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ ಭಾಗವಹಿಸಿದ್ದರು ಪ್ರಜಾವಾಣಿ ಚಿತ್ರ

ಕೃತಿ ಕುರಿತು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ ಮಾತನಾಡಿ, 'ಮುದ್ದಣ ಬರೆದ ರತ್ನಾವತಿ ಕಲ್ಯಾಣ, ಕುಮಾರವಿಜಯ, ಶ್ರೀರಾಮ ಪಟ್ಟಾಭಿಷೇಕ, ಅದ್ಭುತ ರಾಮಾಯಣ, ಶ್ರೀ ರಾಮಾಶ್ವಮೇಧ ಕೃತಿಗಳು ಜೊತೆಗೆ ಬೇರೆ ಹಾಡುಗಳು ಎಲ್ಲವನ್ನು ಸೇರಿಸಿ ತಂದಿರುವ ಈ ಕೃತಿಯು ಗ್ರಂಥ ಸಂಪಾದನೆ ಶಾಸ್ತ್ರದ ಉತ್ತಮ ಆಕರವಾಗಿದೆ. ಆಕರಸೂಚಿ, ಪಠ್ಯ, ತದ್ಭವ, ತುಳುಪದ, ನಿಘಂಟು ಹೀಗೆ ಎಲ್ಲವನ್ನು ಈ ಗ್ರಂಥ ಒಳಗೊಂಡಿದೆ' ಎಂದು ವಿವರಿಸಿದರು.

ಮುದ್ದಣ ತನ್ನ ಕಾವ್ಯಕ್ಕೆ ಸೃಷ್ಟಿಸಿದ ಅದ್ಭುತ ವಿಮರ್ಶಕಿಯೇ ಮನೋರಮೆ. ಈ ರೀತಿಯ ಸಂಭಾಷಣೆಯನ್ನು ಕಟ್ಟಿಕೊಟ್ಟ ಮೊದಲ ಮತ್ತು ಕೊನೆಯ ಕವಿ ಆತ. ತನ್ನ ಕಥೆಯನ್ನೇ ಹೇಳುವ, ಕೇಳುವ ಹಿಂದಿನ ಪರಂಪರೆಯ ಮುಂದುವರಿದ ಭಾಗ ಅವರು ಎಂದು ಹೇಳಿದರು.

ಕೃತಿಕಾರ ಎ.ವಿ. ನಾವಡ ಅವರು, 'ಮುದ್ದಣ ಬರೆದ ಹಸ್ತಪ್ರತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿದೆ. ಅದನ್ನು ಪ್ರಕಟಿಸುವ ಬುದ್ಧಿ ವಿಶ್ವವಿದ್ಯಾಲಯಕ್ಕೆ ಬರಲಿ' ಎಂದು ಹಾರೈಸಿದರು.

ವಿಧಾನಸಭೆ ಅಧ್ಯಕ್ಷ ಯು.ಟಿ.ಖಾದರ್, ಶೇಷಾದ್ರಿಪುರ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಕರ್ನಾಟಕ ಸಂಸ್ಕೃತ ವಿ.ವಿ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ. ವೆಂಕಟೇಶ, ಶೇಷಾದ್ರಿಪುರ ಸಂಜೆ ಕಾಲೇಜಿನ ಪ್ರಾಂಶುಪಾಲ ಎನ್.ಎಸ್. ಸತೀಶ್, ಗೋಧೂಳಿ ಕನ್ನಡ ಸಂಘದ ಸಂಚಾಲಕ ಸತ್ಯಮಂಗಲ ಮಹಾದೇವ ಭಾಗವಹಿಸಿದ್ದರು.

ವಿಜಯವಾಣಿ
ಕನ್ನಡ ದಿನಪತ್ರಿಕೆ
VIJAYAVANI >> BENGALURU

ಶುಕ್ರವಾರ 18 ಅಕ್ಟೋಬರ್ 2024
18 OCTOBER 2024

# ಎಂ ಜಿ ಹೆಗಡೆ ಮಂಗಳೂರು ಅವರ ಆತ್ಮಕತೆ

ವಿಜಯವಾಣಿ ಚಿತ್ರ



ಗಾಂಧಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಲೇಖಕ ಎಂ.ಜಿ. ಹೆಗಡೆ ಮಂಗಳೂರು ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಕೃತಿಯನ್ನು ವಿಧಾನಪರಿಷತ್ ಸದಸ್ಯ ಹರಿಪ್ರಸಾದ್ ಬಿಡುಗಡೆ ಮಾಡಿದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ, ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಅಹರ್ಶಿನಿ ಪ್ರಕಾಶನದ ಅಕ್ಷತಾ ಇದ್ದರು.

ಪ್ರಜಾ ಪ್ರಗತಿ

Oct 18, 2024

# ಚಿಮಣಿ ಬೆಳಕಿನಿಂದ ಪುಸ್ತಕ ಬಿಡುಗಡೆ







ಬೆಂಗಳೂರು ; ನಗರದ ಗಾಂಧಿ ಭವನದಲ್ಲಿಂದು ಎಂ.ಜಿ. ಹೆಗಡೆ, ಮಂಗಳೂರು ಅವರ ಆತ್ಮಕಥೆ 'ಚಿಮಣಿ ಬೆಳಕಿನಿಂದ' ಪುಸ್ತಕ ಬಿಡುಗಡೆ ಕಾರ್ಯಕ್ರಮ ನಡೆಯಿತು. ಪುಸ್ತಕವನ್ನು ವಿಧಾನ ಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ಅವರು ಬಿಡುಗಡೆ ಮಾಡಿದರು. ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ, ಗಾಂಧಿವಾದಿ ಶ್ರೀಧರ ಭಿಡೆ, ಲೇಖಕ ಎಂ.ಜಿ. ಹೆಗಡೆ , ವಿದ್ಯಾರ್ಥಿ ಸಂಘದ ನಾಯಕ ಅನಿಲ್ ರೆಡ್ಡಿ ಸೇರಿದಂತೆ ಮತ್ತಿತರರಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ

Oct 18, 2024

# ಆರೆಸ್ಸೆಸ್ ಎಂದರೆ 'ರೂಮರ್ಸ್ ಸ್ಪ್ರೆಡಿಂಗ್ ಸಂಘ'

## ಬಿ.ಕೆ.ಹರಿಪ್ರಸಾದ್



ಬೆಂಗಳೂರು, ಅ.17: 'ರಾಷ್ಟ್ರೀಯ ಸ್ವಯಂ ಸೇವಕರ ಸಂಘ' (ಆರೆಸ್ಸೆಸ್) ಎಂದರೆ 'ರೂಮರ್ಸ್ ಸ್ಪ್ರೆಡಿಂಗ್ ಸಂಘ' ಆಗಿದ್ದು, ಅವರು ಕಳ್ಳನನ್ನು ಸುಳ್ಳ ಮಾಡುತ್ತಾರೆ, ಸುಳ್ಳನನ್ನು ಸತ್ಯವಂತ ಮಾಡುತ್ತಾರೆ. ಬಡವರು, ಅಮಾಯಕರನ್ನು ಧರ್ಮದ ಹೆಸರಲ್ಲಿ ದಾರಿ ತಪ್ಪಿಸುತ್ತಾರೆ ಎಂದು ವಿಧಾನ ಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ಟೀಕಿಸಿದ್ದಾರೆ.

ಗುರುವಾರ ಗಾಂಧಿ ಭವನದಲ್ಲಿ ಅಹರ್ನಿಶಿ ಪ್ರಕಾಶನ ವತಿಯಿಂದ ಎಂ.ಜಿ. ಹೆಗಡೆ ಮಂಗಳೂರು ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ದೇಶಭಕ್ತರು ಎಂದು ಬಿಂಬಿಸಿಕೊಳ್ಳುವ ಆರೆಸ್ಸೆಸ್ ನವರು ತ್ರಿವರ್ಣ ಧ್ವಜಕ್ಕೆ ಗೌರವ ಕೊಡುವುದಿಲ್ಲ. 52 ವರ್ಷದಿಂದ ಇರುವ ಆರೆಸ್ಸೆಸ್ ಕಚೇರಿ ಮೇಲೆ ಇದುವರೆಗೂ ತ್ರಿವರ್ಣ ಧ್ವಜ ಹಾರಿಸಿಲ್ಲ ಎಂದರು.

ಆರೆಸ್ಸೆಸ್‌ನವರು ಬಡವರೇ ಆಗಿದ್ದು, ಅಲ್ಲಿ ಅಧಿಕಾರ, ಸಂಪತ್ತು ಪಡೆಯುವವರು ಬೇರೆ, ಜೈಲಿಗೆ ಹೋಗುವವರು ಬೇರೆಯೇ ಇದ್ದಾರೆ. ಇನ್ನು ಸಂಘ ಪರಿವಾರದ ಸಹವಾಸದಿಂದ ಹೋರಾಟ ಮಾಡಿದವರು ಒಂದೋ ಜೈಲಿಗೆ ಹೋಗಬೇಕು, ಇಲ್ಲ ಸ್ಮಶಾನ ಸೇರಬೇಕು. ಬೊಮ್ಮಾಯಿ ಮಗ, ಯಡಿಯೂರಪ್ಪ ಮಗ ಏನಾದರೂ ಬೀದಿಯಲ್ಲಿ ಹೋರಾಟ ಮಾಡುತ್ತಾರೆಯೇ? ಹೋರಾಟ ಮಾಡುವುದೆಲ್ಲ ಪುನೀತ್ ಕೆರೆಹಳ್ಳಿ ತರದವರು ಎಂದು ಅವರು ತಿಳಿಸಿದರು.

ಆರೆಸ್ಸೆಸ್‌ನವರು ಹಿಂದೂ ರಾಷ್ಟ್ರ ಕಟ್ಟುವ ಬಗ್ಗೆ ಮಾತುಗಳನ್ನಾಡುತ್ತಾರೆ. ಈಗ ದೇಶದ ಪರಿಸ್ಥಿತಿ ತುಂಬಾ ಹದಗೆಟ್ಟಿದೆ. ನಾನು ಎಬಿವಿಪಿ, ಆರೆಸ್ಸೆಸ್ ವಿರುದ್ಧ ವಿದ್ಯಾರ್ಥಿ ದೆಸೆಯಿಂದಲೇ ಹೋರಾಟ ಮಾಡಿಕೊಂಡು ಬಂದಿದ್ದೇನೆ. ಕಾಂಗ್ರೆಸ್‌ನಲ್ಲಿ ದೇವರಾಜ ಅರಸು, ಗುಂಡೂರಾವ್ ಹಾಗೂ ಮತ್ತೊಂದು ಎಂಬಂತೆ ಒಟ್ಟು ಮೂರು ಗುಂಪುಗಳಿದ್ದವು. ಆದರೆ ಯಾರೂ ಕೂಡ ನಿಯಮ, ಸಿದ್ಧಾಂತ ಬಿಟ್ಟು ಹೋಗಲಿಲ್ಲ ಎಂದರು.

### 'ನಾವೂ ಹಿಂದೂಗಳೇ, ಆದರೆ ರಾಜಕೀಯಕ್ಕೆ ಹಿಂದುತ್ವ ಬಳಸಲ್ಲ'

ನಾವೂ ಹಿಂದೂಗಳೇ, ಆದರೆ ರಾಜಕೀಯಕ್ಕಾಗಿ ಹಿಂದುತ್ವವನ್ನು ಬಳಸುವುದಿಲ್ಲ. ಕೇಂದ್ರದಲ್ಲಿ 10 ವರ್ಷದಿಂದ ಆಡಳಿತ ನಡೆಸುತ್ತಿರುವವರು ವ್ಯವಸ್ಥೆಯನ್ನು ಹದಗೆಡಿಸಿದ್ದಾರೆ. ಸುಭಾಶ್ಚಂದ್ರ ಬೋಸ್ ಅವರ ಸಾವಿಗೆ ಕಾರಣ ಯಾರು? ಲಾಲ್ ಬಹದ್ದೂರು ಶಾಸ್ತ್ರಿ ಸಾವಿಗೆ ಕಾರಣ ಯಾರು? ದೀನ ದಯಾಳ್ ಉಪಾಧ್ಯಾಯರನ್ನು ಕೊಂದವರು ಯಾರು? ಹೀಗೆ ಪ್ರಶ್ನೆಗಳನ್ನು ಹರಡಿ, ಜನರ ತಲೆ ಕೆಡಿಸಿ ಆಮೇಲೆ ಕಾಂಗ್ರೆಸ್ ಕಡೆ ಕೈ ತೋರಿಸುವುದನ್ನು ಸಂಘಪರಿವಾರ ಹಿಂದಿನಿಂದಲೂ ಮಾಡಿಕೊಂಡು ಬಂದಿದೆ ಎಂದು ಬಿಕೆ ಹರಿಪ್ರಸಾದ್ ಹೇಳಿದ್ದಾರೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ ಮಾತನಾಡಿ, ಹಲವು ವಿಚಾರಗಳನ್ನು ಬಚ್ಚಿಟ್ಟು, ತಮ್ಮನ್ನು ವೈಭವೀಕರಿಸಲು ಬರೆಯುವ ಆತ್ಮಕಥೆಗಳು ಪ್ರಯೋಜನವಿಲ್ಲ. ನಮ್ಮ ನೆನಪಿನಲ್ಲಿ ಉಳಿಯುವ ವಿಚಾರಗಳನ್ನು ಯಾಕೆ ಉಳಿಯಿತು ಎಂಬ ನೋಟದೊಂದಿಗೆ ಕಟ್ಟಿಕೊಡಬೇಕು. ಅಂಥ ಆತ್ಮಚರಿತ್ರೆಗಳಲ್ಲಿ ಚಿಮಣಿ ಬೆಳಕು ಒಂದು. ಆರೆಸ್ಸೆಸ್ ನಾಯಕರಿಂದ ಕಾಲಾಳುವರೆಗೆ ಎಲ್ಲರೂ ಈ ಪುಸ್ತಕವನ್ನು ಓದಬೇಕು ಎಂದರು.

ಲೇಖಕ ಎಂ.ಜಿ.ಹೆಗಡೆ ಮಾತನಾಡಿ, ನಾನೊಬ್ಬ ಬ್ರಾಹ್ಮಣ. ಹಿಂದೂ ಆಗಿಯೇ ಇರುತ್ತೇನೆ. ಆದರೆ ಬಿಳಿಮಲೆ ಹಾಗೂ ಉಮರ್ ಅವರ ಜೊತೆಯಲ್ಲೂ ಇರುತ್ತೇನೆ. ನನಗೆ ದರ್ಗಾವೂ ಒಂದೇ, ದೇವಸ್ಥಾನವೂ ಒಂದೇ. ಧರ್ಮ ಮತ್ತು ದಾರಿ ಎರಡರ ಬಗ್ಗೆಯೂ ಸ್ಪಷ್ಟತೆ ಇದೆ ಎಂದು ಹೇಳಿದರು. ಸನಾತನ ಧರ್ಮ ಎಂದರೆ ವಿವೇಕಾನಂದರು ಕಾಣಬೇಕು. ಆದರೆ ಜ್ಯೋತಿಷಿಗಳೇ ರಾಯಭಾಗವೇ ಹೆಚ್ಚಾಗಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಸೇರಿದಂತೆ ಮತ್ತಿತರರು ಇದ್ದರು.

17/10/24


PRGI No: KARKAN/2023/88369 ₹ 3

# ಮುಸ್ಸಂಜೆ ಸಮಯ

MUSSANJE SAMAYA

ಕನ್ನಡ ಸಂಜೆ ದಿನಪತ್ರಿಕೆ

Evening Daily paper

EDITOR : R. RAGHAVENDRACHARI musanjesamaya21@gmail.com

Volume 1 | Issue : 337 | October 17, Thursday 2024 | page - 04 | Bangalore




# ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ "ಮುದ್ದಣ ಕಾವ್ಯ ಕರಜನ" ಲೋಕಾರ್ಪಣೆ ಹಳೆಗನ್ನಡ ಕಾವ್ಯವನ್ನು ಹೊಸ ತಲೆಮಾರಿನವರಿಗೆ ತಲುಪಿಸುವಲ್ಲಿ ಸೋತಿದ್ದೇವೆ : ಡಾ.ಹಂಪ ನಾಗರಾಜಯ್ಯ



ಮುಸ್ಸಂಜೆ ಸಮಯ, ಬೆಂಗಳೂರು; ಹೊಸತನದ ತಲೆಮಾರಿಗೆ ನಾವು ಹೊಸತನ್ನು ನೀಡಬೇಕಾದರೆ ಹಳೆಯ ಬೇರುಗಳನ್ನು ಬಿಡುಬಾರದು. ಹಳೆಗನ್ನಡ ಕಾವ್ಯವೆಂದರೆ ಅದು ಹಳೆಯ ಕಪಾಟುಗಳಲ್ಲಿ ಮಾತ್ರ ಇರುವಂತಹದ್ದು, ಅದನ್ನು ಹೊಸ ತಲೆಮಾರಿನ ಜನರಿಗೆ ತಲುಪಿಸುವಲ್ಲಿ ನಾವು ಸೋತಿದ್ದೇವೆ ಎಂದು ಹಿರಿಯ ವಿದ್ವಾಂಸ ನಾಡೋಜ ಡಾ. ಹಂಪ ನಾಗರಾಜಯ್ಯ ವಿಷಾದ ವ್ಯಕ್ತಪಡಿಸಿದ್ದಾರೆ. ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಶೇಷಾದ್ರಿಪುರಂ ಸಂಜೆ ಕಾಲೇಜು ಗೋಧೂಳಿ ಕನ್ನಡ ಸಂಘ ಮತ್ತು ಮಂಗಳೂರಿನ ಬೋಧನಾ ಪ್ರಕಾಶನ ಹೊರ ತಂದಿರುವ ಕೃತಿಯು ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ "ಮುದ್ದಣ ಕಾವ್ಯ ಕರಜನ (ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ)" ಕೃತಿಯನ್ನು ಬಿಡುಗಡೆ ಮಾಡಿ ಮೊದಲ ಪ್ರತಿಯನ್ನು ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಅವರಿಗೆ ನೀಡಿ ಮಾತ ನಾಡಿದ ಅವರು, ಕನ್ನಡ ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಕಾವ್ಯ ರಮಣೀ ಯವಾಗಿದ್ದು, ಸಾಹಿತ್ಯದ ಸಂಸ್ಕೃತಿ, ಸೊಬಗು, ಸೌಂದ'ರ್ಯವನ್ನು ಹೆಚ್ಚಿಸಿದೆ ಎಂದರು. ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಮಾತನಾಡಿ,ನಮ್ಮ ಹಿರಿಯರು ನಮಗೆ ಅಪಾರ ಸಾಹಿತ್ಯ ಸಂಪತ್ತು ಬಿಟ್ಟು ಹೋಗಿದ್ದಾರೆ.ಅಂತಹ ಅಮೂಲ್ಯ ಸಾಹಿತ್ಯ ಸಂಪತ್ತನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ನೀಡುವುದು ನಮ್ಮ ಜವಾಬ್ದಾರಿಯಾಗಿದೆ ಎಂದು ಹೇಳಿದರು. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಮನೋರಮೆ ಅಧ್ಯಾಯ ಸುವರ್ಣಾಕ್ಷರಗಳಲ್ಲಿ ಬರೆದಿರುವಂತಹದ್ದು ಎಂದು ಹೇಳಿದರು. ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರಾದ ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ 'ಮುದ್ದಣ ಕೃತಿ ಕರಜನ' ಕೃತಿ ಕುರಿತು ಮಾತನಾಡಿ ದರು. ಕೃತಿಯ ಸಂಪಾದಕರಾದ ಪ್ರೊ.ಎ.ವಿ ನಾವಡ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು.

ಬೋಧನಾ ಪ್ರಕಾಶನದ ಪ್ರಕಾಶಕರಾದ ಡಾ. ಗಾಯತ್ರೀ ನಾವಡ, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಡಾ.ಎನ್.ಎಸ್.ಸತೀಶ್, ಗೋಧೂಳಿ ಕನ್ನಡ ಸಂಘದ ಸಂಚಾಲಕ ಡಾ.ಸತ್ಯ ಮಂಗಲ ಮಹಾದೇವ ಮತ್ತಿತರರು ಉಪಸ್ಥಿತರಿದ್ದರು.

ಸಂಜೆ ಸಮಯ

# ಮುದ್ದಣ ಕಾವ್ಯ ಕರಜನ ಲೋಕಾರ್ಪಣೆ



ಬೆಂಗಳೂರು: ಹೊಸತನದ ಹಲಿಮಾರಿಗ ನಾವು ಹೊಸತನ್ನು ನೀಡಬೇಕಾದರೆ ಹಳೆಯ ಬೇರುಗಳನ್ನು ಬಿಡಬಾರದು ಎಂದು ಹಿರಿಯ ವಿದ್ವಾಂಸ ನಾಡೋಜ ಡಾ. ಹಂಪ ನಾಗರಾಜಯ್ಯ ವಿಷಾದ ವ್ಯಕ್ತಪಡಿಸಿದ್ದಾರೆ. ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಶೇಷಾದ್ರಿಪುರಂ ಸಂಜೆ ಕಾಲೇಜು ಗೋಧೂಳಿ ಕನ್ನಡ ಸಂಘ ಮತ್ತು ಮಂಗಳೂರಿನ ಬೋಧನಾ ಪ್ರಕಾಶನ ಹೊರ ತಂದಿರುವ ಕೃತಿಯ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ "ಮುದ್ದಣ ಕಾವ್ಯ ಕರಜನ (ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ)" ಕೃತಿಯನ್ನು ಬಿಡುಗಡೆ ಮಾಡಿ ಮೊದಲ ಪ್ರತಿಯನ್ನು ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಅವರಿಗೆ ನೀಡಿ ಮಾತನಾಡಿದ ಅವರು, ಕನ್ನಡ ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಕಾವ್ಯ ರಮಣೀಯವಾಗಿದ್ದು, ಸಾಹಿತ್ಯದ ಸಂಸ್ಕೃತಿ, ಸೊಬಗು, ಸೌಂದರ್ಯವನ್ನು ಹೆಚ್ಚಿಸಿದೆ ಎಂದರು. ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಮಾತನಾಡಿ, ನಮ್ಮ ಹಿರಿಯರು ನಮಗೆ ಅಪಾರ ಸಾಹಿತ್ಯ ಸಂಪತ್ತು ಬಿಟ್ಟು ಹೋಗಿದ್ದಾರೆ ಎಂದು ಹೇಳಿದರು. ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಮನೋರಮೆ ಅಧ್ಯಾಯ ಸುವರ್ಣಾಕ್ಷರಗಳಲ್ಲಿ ಬರೆದಿಯುವಂತಹದ್ದು ಎಂದು ಹೇಳಿದರು. ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರಾದ ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ 'ಮುದ್ದಣ ಕೃತಿ ಕರಜನ' ಕೃತಿ ಕುರಿತು ಮಾತನಾಡಿದರು. ಕೃತಿಯ ಸಂಪಾದಕರಾದ ಪ್ರೊ.ಎ.ವಿ ನಾವಡ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಬೋಧನಾ ಪ್ರಕಾಶನದ ಪ್ರಕಾಶಕರಾದ ಡಾ. ಗಾಯತ್ರಿ ನಾವಡ, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಡಾ.ಎನ್.ಎಸ್.ಸತೀಶ್, ಗೋಧೂಳಿ ಕನ್ನಡ ಸಂಘದ ಸಂಚಾಲಕ ಡಾ.ಸತ್ಯಮಂಗಲ ಮಹಾದೇವ ಇದ್ದರು.

ಸಂಜೆ ಎಕ್ಸ್‌ಪ್ರೆಸ್
ನವ ಮತ್ತು ಸಮಗ್ರ ಸುದ್ದಿ ಚಿತ್ರಣ

# ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ "ಮುದ್ದಣ ಕಾವ್ಯ ಕರಜನ" ಲೋಕಾರ್ಪಣೆ



ಸಂಜೆ ಎಕ್ಸ್‌ಪ್ರೆಸ್ ಸುದ್ದಿ, ಬೆಂಗಳೂರು, ಅ.17; ಹೊಸತನದ ತಲೆಮಾರಿಗೆ ನಾವು ಹೊಸತನ್ನು ನೀಡಬೇಕಾದರೆ ಹಳೆಯ ಬೇರುಗಳನ್ನು ಬಿಡಬಾರದು. ಹಳೆಗನ್ನಡ ಕಾವ್ಯವೆಂದರೆ ಅದು ಹಳೆಯ ಕಪಾಟುಗಳಲ್ಲಿ ಮಾತ್ರ ಇರುವಂತಹದ್ದು, ಅದನ್ನು ಹೊಸ ತಲೆಮಾರಿನ ಜನರಿಗೆ ತಲುಪಿಸುವಲ್ಲಿ ನಾವು ಸೋತಿದ್ದೇವೆ ಎಂದು ಹಿರಿಯ ವಿದ್ವಾಂಸ ನಾಡೋಜ ಡಾ. ಹಂಪ ನಾಗರಾಜಯ್ಯ ವಿಷಾದ ವ್ಯಕ್ತಪಡಿಸಿದ್ದಾರೆ.

ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಶೇಷಾದ್ರಿಪುರಂ ಸಂಜೆ ಕಾಲೇಜು ಗೋಧೂಳಿ ಕನ್ನಡ ಸಂಘ ಮತ್ತು ಮಂಗಳೂರಿನ ಶೋಧನಾ ಪ್ರಕಾಶನ ಹೊರ ತಂದಿರುವ ಕೃತಿಯ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ "ಮುದ್ದಣ ಕಾವ್ಯ ಕರಜನ (ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ)" ಕೃತಿಯನ್ನು ಬಿಡುಗಡೆ ಮಾಡಿ ಮೊದಲ ಪ್ರತಿಯನ್ನು ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಅವರಿಗೆ ನೀಡಿ ಮಾತನಾಡಿದ ಅವರು, ಕನ್ನಡ ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಕಾವ್ಯ ರಮಣೀಯವಾಗಿದ್ದು, ಸಾಹಿತ್ಯದ ಸಂಸ್ಕೃತಿ, ಸೊಬಗು, ಸೌಂದರ್ಯವನ್ನು ಹೆಚ್ಚಿಸಿದೆ ಎಂದರು.

ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಮಾತನಾಡಿ, ನಮ್ಮ ಹಿರಿಯರು ನಮಗೆ ಅಪಾರ ಸಾಹಿತ್ಯ ಸಂಪತ್ತು ಬಿಟ್ಟು ಹೋಗಿದ್ದಾರೆ. ಅಂತಹ ಅಮೂಲ್ಯ ಸಾಹಿತ್ಯ ಸಂಪತ್ತನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ನೀಡುವುದು ನಮ್ಮ ಜವಾಬ್ದಾರಿಯಾಗಿದೆ ಎಂದು ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಮನೋರಮೆ ಅಧ್ಯಾಯ ಸುವರ್ಣಾಕ್ಷರಗಳಲ್ಲಿ ಬರೆದಿರುವಂತಹದ್ದು ಎಂದು ಹೇಳಿದರು.ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರಾದ ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಸಮಸ್ತ ...ಡಿಗರ ಏಕೈಕ ಸಂಜೆ ದಿನಪತ್ರಿಕೆ

ಈ ಸಂಜೆ

Oct 17, 2024

# ಇತಿಹಾಸ ತಿರುಚಿ ಅಪಪ್ರಚಾರ: ಬಿ.ಕೆ.ಹರಿಪ್ರಸಾದ್



ಬೆಂಗಳೂರು,ಅ.17- ನಾವು ಹಿಂದೂಗಳೇ, ಆದರೆ ಹಿಂದುತ್ವವಾದಿಗಳಲ್ಲ. ಸುಭಾಷ್ ಚಂದ್ರಬೋಸ್ ತನಿಖೆಯಾಗಿಲ್ಲ, ನಾನು ಮಾತನಾಡುವುದು ಬಹಳಷ್ಟಿದೆ. ಈಗ ಮಾತನಾಡಿದರೆ ಚುನಾವಣೆ ಮೇಲೆ ಪರಿಣಾಮ ಬೀರುತ್ತದೆ. ಹಾಗಾಗಿ ಮೌನವಾಗಿರುತ್ತೇನೆ ಎಂದು ಕಾಂಗ್ರೆಸ್‌ನ ಹಿರಿಯ ನಾಯಕ ಬಿ.ಕೆ.ಹರಿಪ್ರಸಾದ್ ಹೇಳಿದ್ದಾರೆ.

ಗಾಂಧಿಭವನದಲ್ಲಿಂದು ಎಂ.ಜಿ.ಹೆಗಡೆಯವರ ಚಿಮಣಿ ಬೆಳಕಿನಿಂದ ಎಂಬ ಆತ್ಮಕಥೆಯನ್ನು ಬಿಡುಗಡೆ ಮಾಡಿ ಮಾತನಾಡಿದ ಅವರು, ಹಿಂದೂ ರಾಷ್ಟ್ರ ಕಟ್ಟುವ ಬಗ್ಗೆ ಮಾತುಗಳನ್ನಾಡುತ್ತಾರೆ. ಪರಿಸ್ಥಿತಿ ತುಂಬಾ ಹದಗೆಟ್ಟಿದೆ. ನಾನು ಎಬಿವಿಪಿ, ಆರ್‌ಎಸ್‌ಎಸ್ ವಿರುದ್ಧ ವಿದ್ಯಾರ್ಥಿ ದೆಸೆಯಿಂದಲೇ ಹೋರಾಟ ಮಾಡಿಕೊಂಡು ಬಂದಿದ್ದೇನೆ. ಕಾಂಗ್ರೆಸ್‌ನಲ್ಲಿ ದೇವರಾಜ ಅರಸು, ಗುಂಡೂರಾವ್ ಹಾಗೂ ಮತ್ತೊಂದು ಎಂಬಂತೆ ಒಟ್ಟು ಮೂರು ಗುಂಪುಗಳಿದ್ದವು. ಆದರೆ ಯಾರೂ ಕೂಡ ನಿಯಮ, ಸಿದ್ಧಾಂತ ಬಿಟ್ಟು ಹೋಗಲಿಲ್ಲ ಎಂದರು.

ಪ್ರಸ್ತುತ ದಿನಗಳಲ್ಲಿ ಸುಳ್ಳು ಇತಿಹಾಸವನ್ನು ಹೇಳಿಕೊಂಡು ತಿರುಗಾಡಲಾಗುತ್ತಿದೆ. ಎಬಿವಿಪಿ ಈಗಿನಷ್ಟು ಮೊದಲು ಕೆಟ್ಟಿರಲಿಲ್ಲ. ಇತ್ತೀಚಿನ ಸಂದರ್ಭಗಳಲ್ಲಿ ಹಿಂದೂ, ಮುಸ್ಲಿಂ ಎಂಬ ಬೇಧಭಾವ ಸೃಷ್ಟಿಸಲಾಗಿದೆ. ಸಂಘ ಪರಿವಾರದ ಗೋಲ್ವಾಲ್ಕರ್ ಬಂಚ್ ಆಫ್ ಥಾಟ್ಸ್ ಬರೆದಿದ್ದರು. ಚಿಂತನಾ ಗಂಗಾ ಎಂಬ ಭಾಷಾಂತರದ ಪುಸ್ತಕ 175 ನೇ ಪುಟದಲ್ಲಿ ಹಿಂದೂ ಮತ್ತು ಅಲ್ಪಸಂಖ್ಯಾತರ ನಡುವಿನ ದ್ವೇಷದ ಬಗ್ಗೆ ಹಾಗೂ ಜಾತಿ ವ್ಯವಸ್ಥೆಗಳ ಬಗ್ಗೆ ಉಲ್ಲೇಖಿಸಿದ್ದಾರೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುಸ್ಲಿಮರು, ಸಿಖ್ಖರು ಹೆಚ್ಚು ತ್ಯಾಗ ಮಾಡಿದ್ದಾರೆ. ಅದನ್ನು ಮರೆಮಾಚಲಾಗುತ್ತಿದೆ ಎಂದು ತಿಳಿಸಿದರು.

ನಾವು ಮೃದು ಹಿಂದುತ್ವವಾದಿಗಳಲ್ಲ. ಹಿಂದೂಗಳೇ ಆಗಿದ್ದರೂ ರಾಜಕೀಯಕ್ಕಾಗಿ ಹಿಂದುತ್ವವನ್ನು ಬಳಸುವುದಿಲ್ಲ. ಕೇಂದ್ರದಲ್ಲಿ 10 ವರ್ಷದಿಂದ ಆಡಳಿತ ನಡೆಸುತ್ತಿರುವವರು ವ್ಯವಸ್ಥೆಯನ್ನು ಹದಗೆಡಿಸಿದ್ದಾರೆ. ಸುಭಾಷ್‌ಚಂದ್ರಬೋಸ್, ಲಾಲ್ ಬಹದ್ದೂರ್ ಶಾಸ್ತ್ರಿಯಂತವರು ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದರು. ಸುಭಾಷ್‌ಚಂದ್ರಬೋಸ್‌ರವರ ಸಾವಿನ ತನಿಖೆ ಇನ್ನೂ ಪೂರ್ಣಗೊಂಡಿಲ್ಲ. ಸಂಘ ಪರಿವಾರದ ನಾಯಕ ಮೊಘಲ್ ಸರಾಯ್ ಅವರು ರೈಲಿನಲ್ಲಿ ಪ್ರಯಾಣಿಸುವಾಗ ಉತ್ತರಪ್ರದೇಶದಲ್ಲಿ ಕೊಲೆ ಮಾಡಲಾಗಿತ್ತು. ಯಾರು, ಏತಕ್ಕಾಗಿ ಕೊಲೆ ಮಾಡಿದರು ಎಂಬುದು ಈವರೆಗೂ ರಹಸ್ಯವಾಗಿಯೇ ಉಳಿದಿದೆ ಎಂದು ಹೇಳಿದರು.

ಲೇಖಕ ಎಂ.ಜಿ.ಹೆಗಡೆ ಮಾತನಾಡಿ, ನಾನೊಬ್ಬ ಬ್ರಾಹ್ಮಣ. ಹಿಂದೂ ಆಗಿಯೇ ಇರುತ್ತೇನೆ. ಆದರೆ ಬಿಳಿಮಲೆ ಹಾಗೂ ಉಮರ್ ಅವರ ಜೊತೆಯಲ್ಲೂ ಇರುತ್ತೇನೆ. ನಮಗೆ ದರ್ಗಾವೂ ಒಂದೇ, ದೇವಸ್ಥಾನವೂ ಒಂದೇ. ಧರ್ಮ ಮತ್ತು ದಾಂ ಎರಡರ ಬಗ್ಗೆಯೂ ಸ್ಪಷ್ಟತೆ ಇದೆ ಎಂದು ಹೇಳಿದರು.

ಸನಾತನ ಧರ್ಮ ಎಂದಾಗ ವಿವೇಕಾನಂದರು ಕಾಣಬೇಕು. ಅಸ್ಪೃಶ್ಯತೆ ನಿರ್ಮೂಲನೆ ಆಗಬೇಕು. ಆದರೆ ಜ್ಯೋತಿಷಿಗಳ ರಾಯಭಾರವೇ ಹೆಚ್ಚಾಗಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಸಂಜೆವಾಣಿ

ಗುರುವಾರ 17 ಅಕ್ಟೋಬರ್ 2024




ನಗರದ ಗಾಂಧಿ ಭವನದಲ್ಲಿ ಇಂದು ನಡೆದ ಕಾರ್ಯಕ್ರಮದಲ್ಲಿ ಎಂ.ಜಿ. ಹೆಗಡೆ ಮಂಗಳೂರು ಅವರ ಆತ್ಮಕತೆ 'ಚಿಮಣಿ ಬೆಳಕಿನಿಂದ' ಪುಸ್ತಕವನ್ನು ವಿಧಾನ ಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ರವರು ಬಿಡುಗಡೆ ಮಾಡಿದರು. ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪುರುಷೋತ್ತಮ ಬಿಳಿಮಲೆ, ಗಾಂಧಿವಾದಿ ಶ್ರೀಧರ ಭಿಡೆ, ಲೇಖಕ ಎಂ.ಜಿ. ಹೆಗಡೆ ಮತ್ತಿತರರು ಇದ್ದಾರೆ.

17-10-2024
ಕೋಲಾರ ವಾಣಿ
ಗುರುವಾರ, ಅಕ್ಟೋಬರ್-17, 2024

# 'ಮುದ್ದಣ ಕಾವ್ಯ ಕರಜನ' ಲೋಕಾರ್ಪಣೆ

ಬೆಂಗಳೂರು

ಹೊಸತನದ ತಲೆಮಾರಿಗೆ ನಾವು ಹೊಸತನ್ನು ನೀಡಬೇಕಾದರೆ ಹಳೆಯ ಬೇರುಗಳನ್ನು ಬಿಡುಬಾರದು. ಹಳೆಗನ್ನಡ ಕಾವ್ಯವೆಂದರೆ ಅದು ಹಳೆಯ ಕಪಾಟುಗಳಲ್ಲಿ ಮಾತ್ರ ಇರುವಂತಹದ್ದು, ಅದನ್ನು ಹೊಸ ತಲೆಮಾರಿನ ಜನರಿಗೆ ತಲುಪಿಸುವಲ್ಲಿ ನಾವು ಸೋತಿದ್ದೇವೆ ಎಂದು ಹಿರಿಯ ವಿದ್ವಾಂಸ ನಾಡೋಜ ಡಾ. ಹಂಪ ನಾಗರಾಜಯ್ಯ ವಿಷಾದ ವ್ಯಕ್ತಪಡಿಸಿದ್ದಾರೆ.

ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಶೇಷಾದ್ರಿಪುರಂ ಸಂಜೆ ಕಾಲೇಜು ಗೋಧೂಳಿ ಕನ್ನಡ ಸಂಘ ಮತ್ತು ಮಂಗಳೂರಿನ ಶೋಧನಾ ಪ್ರಕಾಶನ ಹೊರ ತಂದಿರುವ ಕೃತಿಯ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ "ಮುದ್ದಣ ಕಾವ್ಯ ಕರಜನ (ಮುದ್ದಣ ಕವಿಯ ಸಮಗ್ರ ಕಾವ್ಯ ಸಂಪುಟ)" ಕೃತಿಯನ್ನು ಬಿಡುಗಡೆ ಮಾಡಿ ಮೊದಲ ಪ್ರತಿಯನ್ನು ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಅವರಿಗೆ ನೀಡಿ ಮಾತನಾಡಿದ ಅವರು, ಕನ್ನಡ ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಕಾವ್ಯ ರಮಣೀಯವಾಗಿದ್ದು, ಸಾಹಿತ್ಯದ ಸಂಸ್ಕೃತಿ, ಸೊಬಗು, ಸೌಂದರ್ಯವನ್ನು ಹೆಚ್ಚಿಸಿದೆ ಎಂದರು.



ವಿಧಾನಸಭಾಧ್ಯಕ್ಷ ಯು.ಟಿ. ಖಾದರ್ ಮಾತನಾಡಿ, ನಮ್ಮ ಹಿರಿಯರು ನಮಗೆ ಅಪಾರ ಸಾಹಿತ್ಯ ಸಂಪತ್ತು ಬಿಟ್ಟು ಹೋಗಿದ್ದಾರೆ. ಅಂತಹ ಅಮೂಲ್ಯ ಸಾಹಿತ್ಯ ಸಂಪತ್ತನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ನೀಡುವುದು ನಮ್ಮ ಜವಾಬ್ದಾರಿಯಾಗಿದೆ ಎಂದು ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ಸಾಹಿತ್ಯ ವಲಯದಲ್ಲಿ ಮುದ್ದಣ್ಣ ಮನೋರಮೆ ಅಧ್ಯಾಯ ಸುವರ್ಣಾಕ್ಷರಗಳಲ್ಲಿ ಬರೆದಿರುವಂತಹದ್ದು ಎಂದು ಹೇಳಿದರು.

ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರಾದ ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ 'ಮುದ್ದಣ ಕೃತಿ ಕರಜನ' ಕೃತಿ ಕುರಿತು ಮಾತನಾಡಿದರು. ಕೃತಿಯ ಸಂಪಾದಕರಾದ ಪ್ರೊ.ಎ.ವಿ ನಾವಡ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು.

ಶೋಧನಾ ಪ್ರಕಾಶನದ ಪ್ರಕಾಶಕರಾದ ಡಾ. ಗಾಯತ್ರೀ ನಾವಡ, ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಡಾ.ಎನ್. ಎಸ್.ಸತೀಶ್, ಗೋಧೂಳಿ ಕನ್ನಡ ಸಂಘದ ಸಂಚಾಲಕ ಡಾ.ಸತ್ಯಮಂಗಲ ಮಹಾದೇವ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ
ಗುರುವಾರ • ಅಕ್ಟೋಬರ್ 10, 2024

# ‘ಗಾಂಧೀಜಿ ರಾಜಕೀಯ ನಿಲುವು ಪ್ರಸ್ತುತ, ಅಗತ್ಯ’

ಪ್ರಜಾವಾಣಿ ವಾರ್ತೆ

ಮೈಸೂರು: ‘ಮಹಾತ್ಮ ಗಾಂಧಿಯ ರಾಜಕೀಯ ನಿಲುವುಗಳು 21ನೇ ಶತಮಾನದಲ್ಲೂ ಪ್ರಸ್ತುತವಾಗಿದ್ದು, ಅಗತ್ಯವೂ ಆಗಿದೆ.’

ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಿಂದ ನಟರಾಜ ಸಭಾಭವನದಲ್ಲಿ ಬುಧವಾರ ಆಯೋಜಿಸಿದ್ದ ‘21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ’ ಕುರಿತ ಚಿಂತನ-ಮಂಥನ ದುಂಡು ಮೇಜಿನ ಸಭೆಯಲ್ಲಿ ವ್ಯಕ್ತವಾದ ಪ್ರಮುಖ ಆಶಯವಿದು.

ಗಾಂಧೀಜಿ ನೀಡಿದ ಕೊಡುಗೆಗಳನ್ನು ಸ್ಮರಿಸಿದ ಸಭೆಯು, ಸ್ವಾತಂತ್ರ್ಯ ಬಂದು ಏಳು ದಶಕಗಳೇ ಕಳೆದರೂ ಅವರ ಆಶಯಗಳು ಈಡೇರದಿರುವುದಕ್ಕೆ ವಿಷಾದವನ್ನೂ ವ್ಯಕ್ತಪಡಿಸಿತು.



ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ದುಂಡು ಮೇಜಿನ ಸಭೆಯನ್ನು ವೈ.ಸಿ.ರೇವಣ್ಣ, ವೂಡೇ ಪಿ.ಕೃಷ್ಣ, ಚಿದಾನಂದ ಸ್ವಾಮೀಜಿ, ಜಿ.ಟಿ.ದೇವೇಗೌಡ, ಟಿ.ಎಸ್‌. ಶ್ರೀವತ್ಸ ಉದ್ಘಾಟಿಸಿದರು –ಪ್ರಜಾವಾಣಿ ಚಿತ್ರ

ಶಾಸಕ ಜಿ.ಟಿ. ದೇವೇಗೌಡ ಮಾತನಾಡಿ, ‘ಗಾಂದಿ ವಿಚಾರಗಳು ಸದಾ ಕಾಲಕ್ಕೂ ಪ್ರಸ್ತುತ. ಯುವಜನರು ಗಾಂಧಿ, ಬುದ್ಧ, ಬಸವ, ಅಂಬೇಡ್ಕರ್ ಅವರ ತತ್ವಾದರ್ಶಗಳನ್ನು ಅಳವಡಿಸಿಕೊಳ್ಳಬೇಕು’ ಎಂದು ಸಲಹೆ ನೀಡಿದರು.

**ಆ ರೀತಿ ಆಗಿದೆಯೇ?:** ಶಾಸಕ ಟಿ.ಎಸ್. ಶ್ರೀವತ್ಸ ಮಾತನಾಡಿ, ‘ಅಹಿಂಸೆ, ಉಪವಾಸ ಹಾಗೂ ಅಸಹಕಾರ ಚಳವಳಿಯಿಂದ ಸ್ವಾತಂತ್ರ್ಯ ಗಳಿಸಿಕೊಳ್ಳಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟವರು ಗಾಂಧೀಜಿ. ದೇಶ ಸುಭಿಕ್ಷ ಹಾಗೂ ಸುರಕ್ಷಿತ ಎನ್ನುವುದಾದರೆ ಮಹಿಳೆಯು ಮಧ್ಯರಾತ್ರಿ ಸುರಕ್ಷಿತವಾಗಿ ಓಡಾಡುವಂತಾಗಬೇಕು ಎಂದು ಗಾಂಧೀಜಿ ಬಯಸಿದ್ದರು. ಆದರೆ, ಆ ರೀತಿ ಆಗಿದೆಯೇ? ನಾಲ್ಕು ಗೋಡೆಯೊಳಗಿನ ಮಹಿಳೆಯರಿಗೂ ಸುರಕ್ಷತೆ ಇಲ್ಲ’ ಎಂದರು.

ಸರ್ಕಾರಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಡಾ.ಜಿ.ಜಿ. ವಿಶ್ವನಾಥಯ್ಯ, ‘ಪ್ರಜಾವಾಣಿ’ ಮೈಸೂರು ಬ್ಯೂರೋ ಮುಖ್ಯಸ್ಥ ಕೆ.ನರಸಿಂಹಮೂರ್ತಿ, ಪತ್ರಕರ್ತರಾದ ಅಂಶಿ ಪ್ರಸನ್ನಕುಮಾರ್, ಎಂ.ಆರ್. ಸತ್ಯನಾರಾಯಣ ವಿದ್ಯಾರ್ಥಿನಿಯರೊಂದಿಗೆ ಸಂವಾದ ನಡೆಸಿದರು.

ನಟರಾಜ ಪ್ರತಿಷ್ಠಾನದ ಅಧ್ಯಕ್ಷ ಚಿದಾನಂದ ಸ್ವಾಮೀಜಿ ಸಾನ್ನಿಧ್ಯ, ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ ಅಧ್ಯಕ್ಷತೆ ಹಾಗೂ ಗಾಂಧಿ ಮಾರ್ಗಿ ವೈ.ಸಿ.ರೇವಣ್ಣ ನೇತೃತ್ವ ವಹಿಸಿದ್ದರು. ಶಾಸಕ ಎಚ್.ಎಂ. ಗಣೇಶ್ ಪ್ರಸಾದ್, ನಟರಾಜ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲೆ ಎಂ.ಶಾರದಾ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ. ಪೂರ್ಣಿಮಾ, ಉಪ ಪ್ರಾಂಶುಪಾಲ ಜಿ.ಪ್ರಸಾದ ಮೂರ್ತಿ, ಸಹಾಯಕ ಪ್ರಾಧ್ಯಾಪಕಿ ತಾರಾ ಸಿ.ಎಸ್. ಪಾಲ್ಗೊಂಡಿದ್ದರು.

ಇದಕ್ಕೂ ಮುನ್ನ, ನ್ಯಾಯಾಲಯದ ಎದುರಿನ ಗಾಂಧಿ ಪುತ್ಥಳಿ ಬಳಿಯಿಂದ ‘21ನೇ ಶತಮಾನದಲ್ಲಿ ಗಾಂಧೀಜಿ ಅರಿವು ಜಾಥಾ’ ನಡೆಯಿತು. 3ನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶೆ ಜೆ.ಸಿ. ಭಾಗ್ಯ ಉದ್ಘಾಟಿಸಿದರು.

## ‘ಅಸ್ಪೃಶ್ಯತೆ, ಅಂತರ ದೂರಾಗಲಿ’

‘ಬಡವರು- ಶ್ರೀಮಂತರ ನಡುವಿನ ಅಂತರ ಹೆಚ್ಚಾಗುತ್ತಲೇ ಇದೆ. ಇದನ್ನು ತಡೆಯುವ ನಿಟ್ಟಿನಲ್ಲಿ ಯುವಜನರು ಕೆಲಸ ಮಾಡಬೇಕು. ಸಮಾಜ ಜಾತಿಯ ಶಾಪದಿಂದ ಮುಕ್ತವಾಗಬೇಕು. ಅಸ್ಪೃಶ್ಯತೆ ದೂರಾಗಬೇಕು. ಭ್ರಷ್ಟಾಚಾರ ರಹಿತ ಭಾರತ ಕಟ್ಟಬೇಕು. ಇದಕ್ಕಾಗಿ ಗಾಂಧೀಜಿ ಆದರ್ಶ-ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು’ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಹೇಳಿದರು.

> ಸನಾತನ ಧರ್ಮದ ಬಗ್ಗೆ ಮಾತನಾಡಿದರೇ ಅಪಾಯ ಎಂಬ ಸ್ಥಿತಿ ಈಗ ಇದೆ
> **ಟಿ.ಎಸ್. ಶ್ರೀವತ್ಸ, ಶಾಸಕ**

ಉದಯವಾಣಿ ಬೆಂಗಳೂರು
ಗುರುವಾರ, ಅಕ್ಟೋಬರ್ 10, 2024

### ದೇಶ ಉದ್ಧಾರವಾಗಬೇಕಾದರೆ ಗ್ರಾಮ ಉದ್ಧಾರವಾಗಬೇಕೆಂದು ಗಾಂಧೀಜಿ ಕನಸು ಕಂಡಿದ್ದರು: ಶಾಸಕ

# ಗಾಂಧಿ ವಿಚಾರಧಾರೆ ಎಂದೆಂದಿಗೂ ಪ್ರಸ್ತುತ: ಜಿಟಿಡಿ

■ ಉದಯವಾಣಿ ಸಮಾಚಾರ

ಮೈಸೂರು: ರಾಷ್ಟ್ರಪಿತ ಮಹಾತ್ಮಗಾಂಧೀಜಿ ಅವರ ವಿಚಾರಧಾರೆ ಸದಾಕಾಲಕ್ಕೂ ಪ್ರಸ್ತುತ ಎಂದು ಶಾಸಕ ಜಿ.ಟಿ.ದೇವೇಗೌಡ ಹೇಳಿದರು.

ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜು ವತಿಯಿಂದ ನಟರಾಜ ಸಭಾಭವನದಲ್ಲಿ ಬುಧವಾರ ಏರ್ಪಡಿಸಿದ್ದ 21ನೇ ಶತಮಾನದಲ್ಲಿ ಗಾಂಧೀಜಿ ರಾಜನೀತಿಯ ನಿಲುವು ಪ್ರಸ್ತುತತೆ ಚಿಂತನ-ಮಂಥನ ದುಂಡುಮೇಜಿನ ಸಭೆ ಉದ್ಘಾಟಿಸಿ ಮಾತನಾಡಿದರು.

ಗಾಂಧೀಜಿಯವರ ಬದುಕು ಮತ್ತು ಬರಹ ಇಂದಿಗೂ ಪ್ರಸ್ತುತ. ಹೀಗಾಗಿ ಯುವಜನತೆಗೆ ಗಾಂಧೀಜಿ ನಡೆದು ಬಂದ ಹಾದಿಯ ಬಗ್ಗೆ ಅವರ ಆದರ್ಶ, ಚಿಂತನೆ ತಿಳಿಸಬೇಕು ಎಂದರು.

**ಉಳಿಯಬೇಕು:** ಪ್ರಾಂತೀಯ ಭಾಷೆ, ರಾಷ್ಟ್ರಭಾಷೆ, ಗ್ರಾಮೋದ್ಯೋಗ, ಗ್ರಾಮ ನೈರ್ಮಲ್ಯ, ಸ್ತ್ರೀ ಶಿಕ್ಷಣ, ಜಾತಿ ಪದ್ಧತಿ ನಿರ್ಮೂಲನೆ ಮೊದಲಾದವುಗಳ ಬಗ್ಗೆ ಜನ ಸಾಮಾನ್ಯನಿಗೆ ಜಾಗೃತಿ ಮೂಡಿಸುವುದು ಗಾಂಧೀಜಿ ನಿಲುವಾಗಿತ್ತು, ನಮ್ಮ ದೇಶ ಉದ್ಧಾರವಾಗಬೇಕಾದರೆ ಗ್ರಾಮಗಳು ಉದ್ಧಾರವಾಗಬೇಕು ಎಂದು ಗಾಂಧೀಜಿ ಕನಸು ಕಂಡಿದ್ದರು. ಗಾಂಧೀಜಿ ನೀಡಿರುವ ಸಂದೇಶ ಎಂದೆಂದಿಗೂ ಉಳಿಯಬೇಕು ಎಂದು ತಿಳಿಸಿದರು.



ಮೈಸೂರಿನ ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ದುಂಡು ಮೇಜಿನ ಸಭೆಯನ್ನು ಶಾಸಕ ಜಿ.ಟಿ. ದೇವೇಗೌಡ ಉದ್ಘಾಟಿಸಿದರು.

**ರಕ್ಷಣೆ ಇಲ್ಲದಾಗಿದೆ:** ಶಾಸಕ ಟಿ.ಎಸ್.ಶ್ರೀವತ್ಸ ಮಾತನಾಡಿ, ಗಾಂಧೀಜಿಯವರು ಸ್ವಾತಂತ್ರ್ಯ ತಂದು ಕೊಡಲು ಅಹಿಂಸಾ ಮಾರ್ಗ ಅನುಸರಿಸಿದರು. ಸ್ವದೇಶಿ ಚಿಂತನೆಗೆ ಹೆಚ್ಚು ಒತ್ತು ಕೊಟ್ಟವರು. ಮಹಿಳೆ ಮಧ್ಯರಾತ್ರಿ ಸ್ವತಂತ್ರವಾಗಿ ಓಡಾಡಬೇಕು ಎಂದು ಬಯಸಿದ್ದವರು. ಆದರೆ ಇವತ್ತು ನಾಲ್ಕು ಗೋಡೆಗಳ ನಡುವೆಯೇ ಇರುವ ಮಹಿಳೆಗೆ ಇಂದು ರಕ್ಷಣೆ ಇಲ್ಲದಾಗಿದೆ ಎಂದು ವಿಷಾದಿಸಿದರು. ಬೆಂಗಳೂರು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿಯವರು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ಕೊಟ್ಟಿದ್ದರು. ಗಾಂಧೀಜಿಯವರ ಸೇವೆ ಮತ್ತು ತ್ಯಾಗದ ಪ್ರತೀಕವಾಗಿದ್ದರು ಎಂದು ತಿಳಿಸಿದರು.

**ಮೌಲ್ಯಗಳಿಗಿಲ್ಲ:** ಪ್ರಸ್ತುತ ಜಾತೀಯತೆ, ಮತೀಯ ಗಲಭೆ ಎಲ್ಲೆಲ್ಲೂ ತಾಂಡವವಾಡುತ್ತಿದೆ. ಶಾಂತಿ ಕತೆ ಆದ್ಯತೆಯಿಂದ ಸಂಬಂಧ ಹಾಳಾಗುತ್ತಿವೆ. ಪ್ರಕೃತಿಯೊಂದಿಗಿನ ಸಂಬಂಧ ಕಳೆದು ಹೋಗುತ್ತಿದೆ. ಇಂದು ಶ್ರೀಮಂತಿಕೆ ಹಾಗೂ ಅಧಿಕಾರಕ್ಕೆ ಬೆಲೆಯೇ ಹೊರತು ಮೌಲ್ಯಗಳಿಗಲ್ಲ ಎಂದರು.

ಹಿರಿಯ ಸ್ವಾತಂತ್ರ್ಯಯೋಧ ವೈ.ಸಿ.ರೇವಣ್ಣ ಮಾತನಾಡಿ, ಗಾಂಧೀ ಹತ್ಯೆ ನಂತರ ನಮ್ಮ ದೇಶ ನಡೆಯುತ್ತಿಲ್ಲ. ಗಾಂಧೀಜಿಯವರು ಕಂಡುಕೊಟ್ಟ ಸ್ವರಾಜ್ಯ ನಾವು ಉಳಿಸಿ, ಬೆಳೆಸಿಕೊಂಡು ಹೋಗಬೇಕು ಎಂದು ತಿಳಿಸಿದರು. ನಟರಾಜ ಪ್ರತಿಷ್ಠಾನದ ಆಡಳಿತಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ, ಸರ್ಕಾರಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಡಾ.ಜಿ.ಜಿ. ವಿಶ್ವನಾಥಯ್ಯ, ಹಿರಿಯ ಪತ್ರಕರ್ತರಾದ ಅಂಶಿ ಪ್ರಸನ್ನಕುಮಾರ್, ಎಂ.ಆರ್. ಸತ್ಯನಾರಾಯಣ, ಕೆ. ನರಸಿಂಹಮೂರ್ತಿ ಅವರು ವಿದ್ಯಾರ್ಥಿನಿಯರೊಂದಿಗೆ ಸಂವಾದ ನಡೆಸಿದರು. ಶಾಸಕ ಎಚ್.ಎಂ.ಗಣೇಶಪ್ರಸಾದ್, ಕಾಲೇಜಿನ ಪ್ರಾಂಶುಪಾಲೆ ಡಾ.ಎಂ.ಶಾರದಾ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ.ಪೂರ್ಣಿಮಾ, ಸಹಾಯಕ ಪ್ರಾಧ್ಯಾಪಕಿ ಎಸ್.?, ನಟರಾಜ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲೆ ವಿ.ಡಿ.ಸಂಧ್ಯಾರಾಣಿ ಇದ್ದರು.

ವಿಜಯವಾಣಿ ನಂ 1 ಕನ್ನಡ ದಿನಪತ್ರಿಕೆ

Oct 10, 2024

## ಶಾಸಕ ಜಿ.ಟಿ.ದೇವೇಗೌಡ ಸಲಹೆ | ಚಿಂತನ-ಮಂಥನ ದುಂಡುಮೇಜಿನ ಸಭೆ

# ಯುವಜನತೆಗೆ ಗಾಂಧೀಜಿ ಚಿಂತನೆ ತಿಳಿಸಿ

■ ವಿಜಯವಾಣಿ ಸುದ್ದಿಜಾಲ ಮೈಸೂರು

ಗಾಂಧೀಜಿಯವರ ಬದುಕು ಮತ್ತು ಬರಹ ಇಂದಿಗೂ ಪ್ರಸ್ತುತ. ಹೀಗಾಗಿ ಯುವಜನತೆಗೆ ಗಾಂಧೀಜಿ ನಡೆದು ಬಂದ ಹಾದಿಯ ಬಗ್ಗೆ, ಅವರ ಆದರ್ಶ, ಚಿಂತನೆಗಳನ್ನು ತಿಳಿಸಬೇಕಿದೆ ಎಂದು ಶಾಸಕ ಜಿ.ಟಿ.ದೇವೇಗೌಡ ಹೇಳಿದರು.

ಶ್ರೀ ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಿಂದ ಬುಧವಾರ ನಟರಾಜ ಸಭಾದಲ್ಲಿ ಆಯೋಜಿಸಿದ್ದ 21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ ಚಿಂತನ-ಮಂಥನ ದುಂಡುಮೇಜಿನ ಸಭೆ ಉದ್ಘಾಟಿಸಿ ಮಾತನಾಡಿದರು. ನಮ್ಮ ದೇಶ ಉದ್ಧಾರವಾಗಬೇಕಾದರೆ ಗ್ರಾಮಗಳು ಉದ್ಧಾರವಾಗಬೇಕು ಎಂದು ಅವರು ಕನಸು ಕಂಡಿದ್ದರು. ಸಮಾನತೆ, ಶಿಕ್ಷಣ, ಸತ್ಯದ ಮಾರ್ಗದ ಸಂದೇಶ ನೀಡಿದ್ದ ಗಾಂಧೀಜಿ ಸಂದೇಶಗಳು ಎಂದೆಂದಿಗೂ ಉಳಿಯಬೇಕು. ಅವರ ವಿಚಾರಧಾರೆ, ಆದರ್ಶನ ಸದಾಕಾಲಕ್ಕೂ ಪ್ರಸ್ತುತವಾಗಿದ್ದು, ಇಂದಿನ ಯುವ ಜನತೆ ಅವುಗಳನ್ನು ಪಾಲಿಸಬೇಕು ಎಂದರು.

ಪ್ರಾಂತೀಯ ಭಾಷೆ, ರಾಷ್ಟ್ರಭಾಷೆ, ಗ್ರಾಮೋದ್ಯೋಗ, ಗ್ರಾಮ ನೈರ್ಮಲ್ಯ, ಸ್ತ್ರೀ ಶಿಕ್ಷಣ, ಜಾತಿ ಪದ್ಧತಿ ನಿರ್ಮೂಲನೆ ಮೊದಲಾದವುಗಳ ಬಗ್ಗೆ ಜನ ಸಾಮಾನ್ಯರಿಗೆ ಜಾಗೃತಿ ಮೂಡಿಸುವುದು ಗಾಂಧೀಜಿಯವರ ನಿಲುವಾಗಿತ್ತು. ಅದನ್ನು ಎಲ್ಲರೂ ರಾಜಕೀಯ,ಪಕ್ಷಬೇಧ ಮರೆತು ಸಾಕಾರಗೊಳಿಸಬೇಕಿದೆ ಎಂದು ಅಭಿಪ್ರಾಯಪಟ್ಟರು.

ಕೃಷ್ಣರಾಜ ಕ್ಷೇತ್ರದ ಶಾಸಕ ಟಿ.ಎಸ್.ಶ್ರೀವತ್ಸ ಮಾತನಾಡಿ, ಗಾಂಧೀಜಿ ಸ್ವಾತಂತ್ರ್ಯ ತಂದುಕೊಡಲು ಅಹಿಂಸಾ ಮಾರ್ಗ ಅನುಸರಿಸಿದರು. ಸ್ವದೇಶಿ ಚಿಂತನೆಗೆ ಹೆಚ್ಚು ಒತ್ತು ಕೊಟ್ಟವರು. ಮಹಿಳೆ ಮಧ್ಯರಾತ್ರಿ ಸ್ವತಂತ್ರವಾಗಿ ಓಡಾಡಬೇಕು ಎಂದು ಆಶಿಸಿದ್ದವರು. ಆದರೆ ಇವತ್ತು ನಾಲ್ಕು ಗೋಡೆಗಳ ನಡುವೆಯೇ ಇರುವ ಮಹಿಳೆಗೆ ರಕ್ಷಣೆ ಇಲ್ಲದಾಗಿದೆ ಎಂದು ವಿಷಾದಿಸಿದರು.

ಗುಂಡ್ಲುಪೇಟೆ ಶಾಸಕ ಎಚ್.ಎಂ. ಗಣೇಶಪ್ರಸಾದ್ ಮಾತನಾಡಿ, ಜಾತಿ ಪ್ರೇರಣೆಗೆ ಒಳಗಾಗಿ ಇಂದು ಮಹನೀಯರ ದಿನಾಚರಣೆಗಳೇ ಕಳೆಗುಂದಿದೆ. ಜನಸೇವೆಯೇ ಇಂದಿನ ರಾಜಕಾರಣಿಗಳ ಮುಖ್ಯ ಕರ್ತವ್ಯವಾಗಬೇಕು. ಕೇವಲ ಅಂತರ್ಜಾಲದ ಮಾಹಿತಿಗೆ ಒಳಗಾಗದೆ ಪುಸ್ತಕಗಳ ಅಧ್ಯಯನದಿಂದ ಮಾತ್ರ ಮಹನೀಯರ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಸಾಧ್ಯ ಎಂದು ತಿಳಿಸಿದರು.

ಬೆಂಗಳೂರು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅವರು ಗಾಂಧೀಜಿಯವರ ರಾಜಕೀಯ ನಿಲುವುಗಳು ಪ್ರಸ್ತುತತೆ ಕುರಿತು ಮಾತನಾಡಿ, ಪ್ರಪಂಚ ಕಂಡ ಅತ್ಯದ್ಭುತ ಮಾನವತಾವಾದಿ ಗಾಂಧೀಜಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ಕೊಟ್ಟಿದ್ದರು. ದೇಶದ ಸ್ವಾತಂತ್ರ್ಯದಿಂದ ಹಿಡಿದು ಸಾಮರಸ್ಯ, ಶಾಂತಿ ಸೇರಿದಂತೆ ಅಪಾರ ಕೊಡುಗೆಗಳನ್ನು ಕೊಟ್ಟರು. ಗಾಂಧೀಜಿ ಸೇವೆ ಮತ್ತು ತ್ಯಾಗದ ಪ್ರತೀಕವಾಗಿದ್ದರು ಎಂದು ತಿಳಿಸಿದರು.

ಪ್ರಸ್ತುತ ಜಾತೀಯತೆ, ಮತೀಯ ಗಲಭೆ ಎಲ್ಲೆಲ್ಲೂ ತಾಂಡವವಾಡುತ್ತಿದೆ. ತಾಂತ್ರಿಕತೆಯ ಆದ್ಯತೆಯಿಂದ ಸಂಬಂಧಗಳು ಹಾಳಾಗುತ್ತಿವೆ. ಪ್ರಕೃತಿಯೊಂದಿಗಿನ ಸಂಬಂಧ ಕಡಿದು ಹೋಗುತ್ತಿದೆ. ಇಂದು ಶ್ರೀಮಂತಿಕೆ ಹಾಗೂ ಅಧಿಕಾರಕ್ಕೆ ಬೆಲೆಯೇ ಹೊರತು ಮೌಲ್ಯಗಳಿಗಲ್ಲ ಎಂದು ವಿಷಾದ ವ್ಯಕ್ತಪಡಿಸಿದರು. ಸ್ವಾತಂತ್ರ್ಯ ಯೋಧ ವೈ.ಸಿ. ರೇವಣ್ಣ ಇದ್ದರು.



ಶ್ರೀನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಬುಧವಾರ ಆಯೋಜಿಸಿದ್ದ ದುಂಡುಮೇಜಿನ ಸಭೆಯನ್ನು ಜಿ.ಟಿ. ದೇವೇಗೌಡ ಉದ್ಘಾಟಿಸಿದರು. ಶ್ರೀ ಚಿದಾನಂದ ಸ್ವಾಮೀಜಿ, ಟಿ.ಎಸ್. ಶ್ರೀವತ್ಸ, ವೈ.ಸಿ. ರೇವಣ್ಣ, ವೂಡೇ ಪಿ. ಕೃಷ್ಣ, ಪ್ರೊ.ಎಸ್. ಶಿವರಾಜಪ್ಪ, ಅಂಶಿ ಪ್ರಸನ್ನಕುಮಾರ್, ಎಂ.ಆರ್.ಸತ್ಯನಾರಾಯಣ, ಡಾ.ಎಂ. ಶಾರದಾ, ಜಿ. ಪ್ರಸಾದ್ ಮೂರ್ತಿ, ಎಚ್.ಎ. ಪೂರ್ಣಿಮಾ ಇದ್ದರು.

### 182 ರಾಷ್ಟ್ರಗಳಲ್ಲಿ ಮಹಾತ್ಮನ ಚಿಂತನೆ

ದುಂಡು ಮೇಜಿನ ಸಭೆಯ ಮಹತ್ವವನ್ನು ಕುರಿತು ಮಾತನಾಡಿದ ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ, ಪ್ರಪಂಚದ 182 ರಾಷ್ಟ್ರಗಳಲ್ಲಿ ಗಾಂಧೀಜಿ ತತ್ವ ಸಿದ್ಧಾಂತಗಳನ್ನು ಅನುಸರಿಸುತ್ತಿದ್ದಾರೆ. ಆದಕಾರಣ ಗಾಂಧೀಜಿಯವರ ಚಿಂತನೆಗಳು ಎಲ್ಲ ಕಾಲಕಾಲಕ್ಕೂ ಮೌಲಿಕವಾಗಿದೆ ಎಂಬುದನ್ನು ನಾವು ಮನಗಾಣಬಹುದು ಎಂದು ತಿಳಿಸಿದರು. ಸರ್ಕಾರಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಡಾ. ಜೆ.ಜಿ.ವಿಶ್ವನಾಥಯ್ಯ, ಹಿರಿಯ ಪತ್ರಕರ್ತರಾದ ಅಂಶಿ ಪ್ರಸನ್ನ ಕುಮಾರ್, ಎಂ.ಆರ್. ಸತ್ಯನಾರಾಯಣ, ಕೆ. ನರ ಸಿಂಹ ಮೂರ್ತಿ ವಿದ್ಯಾರ್ಥಿನಿಯರೊಂದಿಗೆ ಸಂವಾದ ನಡೆಸಿದರು. ಹೊಸಮಠದ ಶ್ರೀ ಚಿದಾನಂದ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ಪದವಿ ಕಾಲೇಜಿನ ಪ್ರಾಂಶುಪಾಲೆ ಡಾ.ಎಂ. ಶಾರದಾ, ನಟರಾಜ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲೆ ವಿ.ಡಿ. ಸಂಧ್ಯಾರಾಣಿ, ಉಪ ಪ್ರಾಂಶುಪಾಲ ಜಿ. ಪ್ರಸಾದ್ ಮೂರ್ತಿ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ. ಪೂರ್ಣಿಮಾ, ಸಹಾಯಕ ಪ್ರಾಧ್ಯಾಪಕಿ ಸಿ.ಎಸ್. ತಾರಾ ಇತರರು ಇದ್ದರು.

ವಿಜಯವಾಣಿ ನಂ.1 ಕನ್ನಡ ದಿನಪತ್ರಿಕೆ
Oct 10, 2024

# ರಾಜಕೀಯಕ್ಕೆ ಬಂದು ಸತ್ಯ ಮಾರ್ಗ ಅನುಸರಿಸಿ

ವಿಜಯವಾಣಿ ಸುದ್ದಿಜಾಲ ಮೈಸೂರು
ವಿದ್ಯಾವಂತ ಯುವಕ, ಯುವತಿಯರು ರಾಜಕಾರಣಕ್ಕೆ ಬಂದು ಗಾಂಧಿ ಮಾರ್ಗದಲ್ಲಿ ನಡೆಯಬೇಕು ಎಂದು ನ್ಯಾಯಾಧೀಶೆ ಜೆ.ಸಿ.ಭಾಗ್ಯಾ ಸಲಹೆ ನೀಡಿದರು.

ಶ್ರೀ ನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನಿಂದ ಬುಧವಾರ ಆಯೋಜಿಸಿದ್ದ 21ನೇ ಶತಮಾನದಲ್ಲಿ ಗಾಂಧೀಜಿ ಅರಿವು ಜಾಥಾಕ್ಕೆ ನಗರದ ನ್ಯಾಯಾಲಯ ಎದುರಿನ ಗಾಂಧಿ ಪುತ್ಥಳಿ ಬಳಿ ಚಾಲನೆ ನೀಡಿ ಅವರು ಮಾತನಾಡಿದರು.

ಗಾಂಧೀಜಿ ಪ್ರಪಂಚ ಕಂಡ ಅತ್ಯಂತ ಮಹಾನ್ ವ್ಯಕ್ತಿ. ಪ್ರತಿಯೊಬ್ಬ ತಂದೆ-ತಾಯಿ ತಮ್ಮ ಮಕ್ಕಳು, ವೈದ್ಯರು, ಇಂಜಿನಿಯರ್, ಐಎಎಸ್ ಅಧಿಕಾರಿ ಆಗಬೇಕು ಎಂದು ಬಯಸುತ್ತಾರೆ. ಯಾರೊಬ್ಬರು ನಮ್ಮ ಮಕ್ಕಳು ರಾಜಕಾರಣಿಯಾಗಬೇಕು ಎಂದು ಬಯಸುವುದಿಲ್ಲ ಎಂದರು.

ಪ್ರಸ್ತುತ ದಿನಮಾನದಲ್ಲಿ ಉತ್ತಮ ವಿದ್ಯಾವಂತ ಯುವಕ, ಯುವತಿಯರು ರಾಜಕೀಯಕ್ಕೆ ಬಂದು ಗಾಂಧಿ ಮಾರ್ಗದಲ್ಲಿ ನಡೆದರೆ ದೇಶ ಅಹಿಂಸೆ ಮಾರ್ಗದಲ್ಲಿ ಮುಂದುವರಿಯಲು ಸಾಧ್ಯ ಎಂದು ಹೇಳಿದರು.

ಶ್ರೀನಟರಾಜ ಪ್ರತಿಷ್ಠಾನದ ಅಧ್ಯಕ್ಷ ಶ್ರೀಚಿದಾನಂದ ಸ್ವಾಮೀಜಿ ಗಾಂಧೀಜಿ ಪುತ್ಥಳಿಗೆ ಮಾಲಾರ್ಪಣೆ ಮಾಡಿದರು.

ವಿಜಯವಾಣಿ



**ಶ್ರೀನಟರಾಜ ಮಹಿಳಾ ವಸತಿ ಕಾಲೇಜಿನಿಂದ ಬುಧವಾರ ಆಯೋಜಿಸಿದ್ದ ಜಾಥಾಕ್ಕೆ ನಗರದ ನ್ಯಾಯಾಲಯ ಎದುರಿನ ಗಾಂಧಿ ಪುತ್ಥಳಿ ಬಳಿ ಚಾಲನೆ ನೀಡಲಾಯಿತು. ಜೆ.ಸಿ.ಭಾಗ್ಯಾ, ಶ್ರೀ ಚಿದಾನಂದ ಸ್ವಾಮೀಜಿ, ಪ್ರೊ. ಎಸ್.ಶಿವರಾಜಪ್ಪ, ಡಾ.ಎಂ. ಶಾರದಾ, ಡಾ.ಜಿ. ಪ್ರಸಾದಮೂರ್ತಿ, ಎಚ್.ಎ. ಪೂರ್ಣಿಮಾ ಇದ್ದರು.**

ಶ್ರೀನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಡಾ.ಎಸ್. ಶಿವರಾಜಪ್ಪ, ಬೆಂಗಳೂರು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಪ್ರಾಂಶುಪಾಲೆ ಡಾ.ಎಂ.ಶಾರದಾ, ಉಪ ಪ್ರಾಂಶುಪಾಲ ಡಾ.ಜಿ.ಪ್ರಸಾದಮೂರ್ತಿ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ.ಪೂರ್ಣಿಮಾ, ಸಹಾಯಕ ಪ್ರಾಧ್ಯಾಪಕಿ ಸಿ.ಎಸ್. ತಾರಾ, ಕಾಲೇಜಿನ ಅಧ್ಯಾಪಕರು, ನೂರಕ್ಕೂ ಹೆಚ್ಚು ವಿದ್ಯಾರ್ಥಿನಿಯರು ಜಾಥಾದಲ್ಲಿ ಭಾಗವಹಿಸಿದ್ದರು.

ಕನ್ನಡಪ್ರಭ

Oct 10, 2024

# ಗಾಂಧೀಜಿ ವಿಚಾರಧಾರೆ ಎಂದೆಂದಿಗೂ ಪ್ರಸ್ತುತ

## ಶಾಸಕ ಜಿ.ಟಿ. ದೇವೇಗೌಡ ಅಭಿಮತ । ಶ್ರೀ ನಟರಾಜ ಮಹಿಳಾ ಕಾಲೇಜಿನಿಂದ ಜಾಥಾ, ದುಂಡುಮೇಜಿನ ಸಭೆ

• ಕನ್ನಡಪ್ರಭ ವಾರ್ತೆ ಮೈಸೂರು

ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರ ವಿಚಾರ ಧಾರೆಗಳು ಸಾರ್ವಕಾಲಕ್ಕೂ ಪ್ರಸ್ತುತ ಎಂದು ಚಾಮುಂಡೇಶ್ವರಿ ಕ್ಷೇತ್ರದ ಶಾಸಕರೂ ಆದ ಮಾಜಿ ಸಚಿವ ಜಿ.ಟಿ. ದೇವೇಗೌಡ ಹೇಳಿದರು.

ಶ್ರೀ ನಟರಾಜ ಮಹಿಳಾ ಪದವಿ ಪ್ರಥಮ ದರ್ಜೆ ಕಾಲೇಜು ವತಿಯಿಂದ ನಟರಾಜ ಸಭಾಭವನದಲ್ಲಿ ಬುಧವಾರ ಏರ್ಪಡಿಸಿದ್ದ 21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ ಚಿಂತನ-ಮಂಥನ ದುಂಡುಮೇಜಿನ ಸಭೆ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀಜಿಯವರ ಬದುಕು ಮತ್ತು ಬರಹ ಇಂದಿಗೂ ಪ್ರಸ್ತುತ. ಹೀಗಾಗಿ ಯುವಜನತೆಗೆ ಗಾಂಧೀಜಿ ನಡೆದು ಬಂದ ಹಾದಿಯ ಬಗ್ಗೆ, ಅವರ ಆದರ್ಶ, ಚಿಂತನೆಗಳನ್ನು ತಿಳಿಸಬೇಕು ಎಂದರು.

ಪ್ರಾಂತೀಯ ಭಾಷೆ, ರಾಷ್ಟ್ರಭಾಷೆ, ಗ್ರಾಮೋದ್ಯೋಗ, ಗ್ರಾಮ ಸ್ವಚ್ಛತೆ, ಸ್ತ್ರೀ ಶಿಕ್ಷಣ, ಜಾತಿ ಪದ್ಧತಿ ನಿರ್ಮೂಲನೆ ಮೊದಲಾದವುಗಳ ಬಗ್ಗೆ ಜನ ಸಾಮಾನ್ಯರಿಗೆ ಜಾಗೃತಿ ಮೂಡಿಸುವುದು ಗಾಂಧೀಜಿಯವರ ನಿಲುವಾಗಿತ್ತು. ನಮ್ಮ ದೇಶ ಉದ್ಧಾರವಾಗಬೇಕಾದರೆ ಗ್ರಾಮಗಳು ಉದ್ಧಾರವಾಗಬೇಕು ಎಂದು ಗಾಂಧೀಜಿ ಕನಸು ಕಂಡಿದ್ದರು. ಗಾಂಧೀಜಿಯವರು ನೀಡಿರುವ ಸಂದೇಶಗಳು ಎಂದೆಂದಿಗೂ ಉಳಿಯಬೇಕು ಎಂದು ಅವರು ತಿಳಿಸಿದರು. ಮುಖ್ಯ ಅತಿಥಿಯಾಗಿದ್ದ ಗುಂಡ್ಲುಪೇಟೆ ಶಾಸಕ ಎಚ್.ಎಂ. ಗಣೇಶಪ್ರಸಾದ್ ಮಾತನಾಡಿ, ಜಾತಿ ಪ್ರೇರಣೆಗೆ ಒಳಗಾಗಿ ಇಂದು ಮಹನೀಯರ ದಿನಾಚರಣೆಗಳೇ ಕಳೆಗುಂದಿದೆ. ಜನಸೇವೆಯೇ ಇಂದಿನ ರಾಜಕಾರಣಿಗಳ ಮುಖ್ಯ

ಕರ್ತವ್ಯವಾಗಬೇಕು. ಕೇವಲ ಅಂತರ್ಜಾಲದ ಮಾಹಿತಿಗೆ ಒಳಗಾಗದೆ ಪುಸ್ತಕಗಳ ಅಧ್ಯಯನದಿಂದ ಮಾತ್ರ ಮಹನೀಯರ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಸಾಧ್ಯ ಎಂದು ತಿಳಿಸಿದರು.

ಮತ್ತೊರ್ವ ಮುಖ್ಯ ಅತಿಥಿ ಕೃಷ್ಣರಾಜ ಕ್ಷೇತ್ರದ ಶಾಸಕ ಟಿ.ಎಸ್. ಶ್ರೀವತ್ಸ ಮಾತನಾಡಿ, ಗಾಂಧೀಜಿಯವರು ಸ್ವಾತಂತ್ರ್ಯ ತಂದುಕೊಡಲು ಅಹಿಂಸಾ ಮಾರ್ಗವನ್ನು ಅನುಸರಿಸಿದರು. ಸ್ವದೇಶಿ ಚಿಂತನೆಗೆ ಹೆಚ್ಚು ಒತ್ತು ಕೊಟ್ಟವರು. ಮಹಿಳೆ ಮಧ್ಯರಾತ್ರಿ ಸ್ವತಂತ್ರವಾಗಿ ಓಡಾಡಬೇಕು ಎಂದು ಆಶಿಸಿದ್ದವರು. ಆದರೆ ಇವತ್ತು ನಾಲ್ಕು ಗೋಡೆಗಳ ನಡುವೆಯೇ ಇರುವ ಮಹಿಳೆಗೆ ಇಂದು ರಕ್ಷಣೆ ಇಲ್ಲದಾಗಿದೆ ಎಂದು ವಿಷಾದಿಸಿದರು.



ಮೈಸೂರಿನ ಶ್ರೀ ನಟರಾಜ ಮಹಿಳಾ ಪದವಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಬುಧವಾರ 21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ ಕುರಿತ ಚಿಂತನ-ಮಂಥನ ದುಂಡುಮೇಜಿನ ಸಭೆಯನ್ನು ಶಾಸಕ ಜಿ.ಟಿ. ದೇವೇಗೌಡ ಉದ್ಘಾಟಿಸಿದರು. ಶ್ರೀ ಚಿದಾನಂದ ಸ್ವಾಮೀಜಿ, ಶಾಸಕ ಟಿ.ಎಸ್. ಶ್ರೀವತ್ಸ, ಸ್ವಾತಂತ್ರ್ಯ ಯೋಧ ವೈ.ಸಿ. ರೇವಣ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಪಿ.ಎಸ್. ಶಿವರಾಜಪ್ಪ, ಡಾ.ಎಂ. ಶಾರದಾ, ಜಿ. ಪ್ರಸಾದ್ ಮೂರ್ತಿ, ಎಚ್.ಎ. ಪೂರ್ಣಿಮಾ, ಅಂಶಿ ಪ್ರಸನ್ನಕುಮಾರ್, ಎಂ.ಆರ್. ಸತ್ಯನಾರಾಯಣ ಇದ್ದರು.

ಗಾಂಧೀಜಿಯವರ ರಾಜಕೀಯ ನಿಲುವುಗಳು ಪ್ರಸ್ತುತತೆ ಕುರಿತು ಬೆಂಗಳೂರು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿಯವರು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ಕೊಟ್ಟಿದ್ದರು. ಪ್ರಪಂಚ ಕಂಡ ಅತ್ಯದ್ಭುತ ಮಾನವತಾವಾದಿ ಗಾಂಧೀಜಿ. ಗಾಂಧೀಜಿಯವರು ಈ ದೇಶಕ್ಕೆ ಕೊಟ್ಟ ಕೊಡುಗೆ ಅಪಾರವಾದುದು. ಗಾಂಧೀಜಿಯವರ ಸೇವೆ ಮತ್ತು ತ್ಯಾಗದ ಪ್ರತೀಕವಾಗಿದ್ದರು ಎಂದು ತಿಳಿಸಿದರು.

ಪ್ರಸ್ತುತ ಜಾತೀಯತೆ, ಮತೀಯ ಗಲಭೆ ಎಲ್ಲೆಡೆ ತಾಂಡವವಾಡುತ್ತಿದೆ. ತಾಂತ್ರಿಕತೆಯ ಆದ್ಯತೆಯಿಂದ ಸಂಬಂಧಗಳು ಹಾಳಾಗುತ್ತಿವೆ. ಪ್ರಕೃತಿಯೊಂದಿಗಿನ ಸಂಬಂಧ ಕಳೆದು ಹೋಗುತ್ತಿದೆ. ಇಂದು ಶ್ರೀಮಂತಿಕೆ ಹಾಗೂ ಅಧಿಕಾರಕ್ಕೆ ಬೆಲೆಯೇ ಹೊರತು ಮೌಲ್ಯಗಳಿಗಲ್ಲ ಎಂದರು.

ಗಾಂಧಿ ಪುತ್ಥಳಿಗೆ ಪುಷ್ಪಾರ್ಚನೆ ಮಾಡಿದ ಹಿರಿಯ ಸ್ವಾತಂತ್ರ್ಯ ಯೋಧ ವೈ.ಸಿ. ರೇವಣ್ಣ ಮಾತನಾಡಿ, ಗಾಂಧೀ ತತ್ವದಂತೆ ನಮ್ಮ ದೇಶ ನಡೆಯುತ್ತಿಲ್ಲ. ಗಾಂಧೀಜಿಯವರು ತಂದುಕೊಟ್ಟ ಸ್ವರಾಜ್ಯವನ್ನು ನಾವು ಉಳಿಸಿ, ಬೆಳೆಸಿಕೊಂಡು ಹೋಗಬೇಕು ಎಂದು ತಿಳಿಸಿದರು.

**ದುಂಡು ಮೇಜಿನ ಸಭೆ:** ದುಂಡು ಮೇಜಿನ ಸಭೆಯ ಮಹತ್ವವನ್ನು ಕುರಿತು ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ ಮಾತನಾಡಿ, ಪ್ರಪಂಚದ 182 ರಾಷ್ಟ್ರಗಳಲ್ಲಿ ಗಾಂಧೀಜಿಯವರ ತತ್ವ ಸಿದ್ಧಾಂತಗಳನ್ನು ಅನುಸರಿಸುತ್ತಿದ್ದಾರೆ. ಆದಕಾರಣ ಗಾಂಧೀಜಿಯವರ ಚಿಂತನೆಗಳು ಎಲ್ಲಾ ಕಾಲಕಾಲಕ್ಕೂ ಮೌಲಿಕವಾಗಿದೆ ಎಂಬುದನ್ನು ನಾವು ಮನಗಾಣಬಹುದು ಎಂದು ತಿಳಿಸಿದರು. ಸರ್ಕಾರಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಡಾ.ಜೆ.ಜಿ. ವಿಶ್ವನಾಥಯ್ಯ, ಹಿರಿಯ ಪತ್ರಕರ್ತರಾದ ಅಂಶಿ ಪ್ರಸನ್ನಕುಮಾರ್, ಎಂ.ಆರ್. ಸತ್ಯನಾರಾಯಣ, ಕೆ. ನರಸಿಂಹಮೂರ್ತಿ ಅವರು ವಿದ್ಯಾರ್ಥಿನಿಯರೊಂದಿಗೆ ಸಂವಾದ ನಡೆಸಿದರು.

ಕಾಲೇಜಿನ ಪ್ರಾಂಶುಪಾಲ ಡಾ.ಎಂ. ಶಾರದಾ ಪ್ರಾಸ್ತಾವಿಕ ಭಾಷಣ ಮಾಡಿದರು. ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ. ಪೂರ್ಣಿಮಾ ಸ್ವಾಗತಿಸಿದರು. ವಿದ್ಯಾರ್ಥಿನಿ ಎಸ್. ದಿವ್ಯಾ ಕಾರ್ಯಕ್ರಮ ನಿರೂಪಿಸಿದರು. ಸಹಾಯಕ ಪ್ರಾಧ್ಯಾಪಕಿ ಸಿ.ಎಸ್. ತಾರಾ ವಂದಿಸಿದರು. ಚೂಡಾಮಣಿ ಗಾಂಧಿ ಸ್ಮೃತಿ ಪ್ರಸ್ತುತಪಡಿಸಿದರು. ನಟರಾಜ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲೆ ವಿ.ಡಿ. ಸಂಧ್ಯಾರಾಣಿ ದೇಶಭಕ್ತಿಗೀತೆ ಹಾಡಿದರು.

## ವಿದ್ಯಾರ್ಥಿನಿಯರ ಪ್ರಶ್ನೆಗಳು

- ಇಂದಿನ ರಾಜಕಾರಣಿಗಳು ಮುಖವಾಡ ಧರಿಸಿ ಆಡಳಿತ ನಡೆಸುತ್ತಾರೆಯೇ?
- ಪ್ರಸ್ತುತ 21ನೇ ಶತಮಾನದಲ್ಲಿ ರಾಮರಾಜ್ಯ ಪರಿಕಲ್ಪನೆ ಸಾರ್ಥಕತೆಯನ್ನು ಪಡೆದಿದೆಯೇ?
- ಭಾರತದಲ್ಲಿ ನಿಜವಾದ ಸ್ಥಾನಮಾನ ಮಹಿಳೆಯರಿಗೆ ದೊರಕಿದೆಯೇ?
- ಇಂದಿನ ಪತ್ರಿಕೆಗಳು ಮಹಿಳೆಯರ ಮೇಲಿನ ದೌರ್ಜನ್ಯ ಕೇಸುಗಳನ್ನು ವೈಭವೀಕರಿಸುತ್ತಿವೆಯೇ?
- ಇಂದು ನಮ್ಮ ಭಾರತ ಸರ್ವೋದಯ ಭಾರತವಾಗಿದೆಯೇ?
- ಗಾಂಧೀಜಿಯನ್ನು ಎಡ ಪಂಥೀಯ ಮತ್ತು ಬಲಪಂಥೀಯ ಎಂದು ಹೇಳುವುದು ಎಷ್ಟು ಸಮರ್ಪಕ?

## ಗಾಂಧೀಜಿ ಅರಿವು ಜಾಥಾ ಉದ್ಘಾಟನೆ



ಮೈಸೂರು ನ್ಯಾಯಾಲಯ ಎದುರಿನ ಗಾಂಧಿ ಪುತ್ಥಳಿ ಬಳಿ ಗಾಂಧೀಜಿ ಅರಿವು ಜಾಥಾಗೆ ಪ್ರಧಾನ ಜಿಲ್ಲಾ ನ್ಯಾಯಾಧೀಶೆ ಜೆ.ಸಿ. ಭಾಗ್ಯ ಚಾಲನೆ ನೀಡಿದರು. ಶ್ರೀ ಚಿದಾನಂದ ಸ್ವಾಮೀಜಿ, ಪ್ರೊ. ಎಸ್. ಶಿವರಾಜಪ್ಪ, ಡಾ.ಎಂ. ಶಾರದಾ, ಡಾ.ಜಿ. ಪ್ರಸಾದಮೂರ್ತಿ, ಎಚ್.ಎ. ಪೂರ್ಣಿಮಾ ಇದ್ದಾರೆ.

21ನೇ ಶತಮಾನದಲ್ಲಿ ಗಾಂಧೀಜಿ ಅರಿವು ಜಾಥಾವನ್ನು ನ್ಯಾಯಾಲಯ ಎದುರಿನ ಗಾಂಧಿ ಪುತ್ಥಳಿ ಬಳಿ ಮೂರನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶೆ ಜೆ.ಸಿ. ಭಾಗ್ಯ ಉದ್ಘಾಟಿಸಿದರು.

ನಂತರ ಅವರು ಮಾತನಾಡಿ, ಗಾಂಧೀಜಿ ಪ್ರಪಂಚ ಕಂಡ ಅತ್ಯಂತ ಮಹಾನ್ ವ್ಯಕ್ತಿ. ಪ್ರತಿಯೊಬ್ಬ ತಂದೆ-ತಾಯಿ ತಮ್ಮ ಮಕ್ಕಳು, ವೈದ್ಯರು, ಎಂಜಿನಿಯರ್, ಐಎಎಸ್ ಅಧಿಕಾರಿಯಾಗಬೇಕೆಂದು ಬಯಸುತ್ತಾರೆ. ಯಾರೊಬ್ಬರು ನಮ್ಮ ಮಕ್ಕಳು ರಾಜಕಾರಣಿಯಾಗಬೇಕು ಎಂದು ಬಯಸುವುದಿಲ್ಲ.

ಪ್ರಸ್ತುತ ದಿನಮಾನದಲ್ಲಿ ಉತ್ತಮ ವಿದ್ಯಾವಂತ ಯುವಕ, ಯುವತಿಯರು ರಾಜಕೀಯಕ್ಕೆ ಬಂದು ಗಾಂಧಿ ಮಾರ್ಗದಲ್ಲಿ ನಡೆದರೆ ದೇಶ ಅಹಿಂಸೆ ಮಾರ್ಗವಾಗಿ ಮುಂದುವರಿಯಲು ಸಾಧ್ಯ ಎಂದು ಹೇಳಿದರು.

ಶ್ರೀ ನಟರಾಜ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಚಿದಾನಂದ ಸ್ವಾಮಿಗಳು ಗಾಂಧೀಜಿ ಪುತ್ಥಳಿಗೆ ಮಾಲಾರ್ಪಣೆ ಮಾಡಿದರು.

ಶ್ರೀ ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ. ಎಸ್. ಶಿವರಾಜಪ್ಪ, ಬೆಂಗಳೂರು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಪ್ರಾಂಶುಪಾಲ ಡಾ.ಎಂ. ಶಾರದ ಎಂ. ಶಾರದಾ, ಉಪ ಪ್ರಾಂಶುಪಾಲ ಡಾ. ಜಿ. ಪ್ರಸಾದಮೂರ್ತಿ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ. ಪೂರ್ಣಿಮಾ, ಸಹಾಯಕ ಪ್ರಾಧ್ಯಾಪಕಿ ಸಿ.ಎಸ್. ತಾರಾ, ಕಾಲೇಜಿನ ಅಧ್ಯಾಪಕರು, ನೂರಕ್ಕೂ ಹೆಚ್ಚು ವಿದ್ಯಾರ್ಥಿನಿಯರು ಜಾಥಾದಲ್ಲಿ ಭಾಗವಹಿಸಿದ್ದರು.

ಆಂದೋಲನ

Oct 10 2024

# 'ಮಹನೀಯರ ತತ್ವಾದರ್ಶಗಳನ್ನು ಮೈಗೂಡಿಸಿಕೊಳ್ಳಿ'

## ದುಂಡುಮೇಜಿನ ಸಭೆ ಉದ್ಘಾಟಿಸಿದ ಶಾಸಕ ಜಿ.ಟಿ.ದೇವೇಗೌಡ ಸಲಹೆ



ಮೈಸೂರು: ಮಹಾತ್ಮ ಗಾಂಧೀಜಿ ಬುದ್ಧ, ಬಸವ, ಅಂಬೇಡ್ಕರ್ ಅವರ ಚಿಂತನೆ ಹಾಗೂ ತತ್ವಾದರ್ಶಗಳನ್ನು ಅರಿತುಕೊಂಡು ನಿಮ್ಮ ಗುರಿಯನ್ನು ಸಾಧಿಸಬೇಕು ಎಂದು ಶಾಸಕ ಜಿ.ಟಿ.ದೇವೇಗೌಡ ತಿಳಿಸಿದರು.

ನಗರದ ನಟರಾಜ ಸಭಾ ಭವನದಲ್ಲಿ ನಟರಾಜ ಪ್ರತಿಷ್ಠಾನ, ಶ್ರೀ ನಟರಾಜ ಮಹಿಳಾ ಮತಿ ಪ್ರಥಮ ದರ್ಜೆ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ವತಿಯಿಂದ '21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ' ಕುರಿತ ದುಂಡು ಮೇಜಿನ ಸಭೆ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಈ ಕಾರ್ಯಕ್ರಮವನ್ನು ಇನ್ನಷ್ಟು ಪ್ರಚುರಗೊಳಿಸಬೇಕು. ಯುವಸಮೂಹಕ್ಕೆ ಅರಿವು ನೀಡುವಂತಹ ಕೆಲಸವಾಗಬೇಕು. ಗಾಂಧೀಜಿ ಸತ್ಯದೊಂದಿಗೆ ಹೋರಾಟ ನಡೆಸಿದಂತಹ ಮಹಾನ್ ವ್ಯಕ್ತಿಯಾಗಿದ್ದು, ಅವರ ಮಾರ್ಗವನ್ನು ಅನುಸರಿಸುವುದರೊಂದಿಗೆ ಎಲ್ಲರೊಡನೆ ಪ್ರೀತಿಯಿಂದ ಇರಬೇಕು ಎಂದು ಸಲಹೆ ನೀಡಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಜಾತಿ ನಮ್ಮನ್ನು ಕಿತ್ತು ತಿನ್ನುತ್ತಿದೆ. ನಾವು ಇನ್ನೂ ಸಾಮಾಜಿಕವಾಗಿ ಸ್ವಾತಂತ್ರ್ಯ ಪಡೆದಿಲ್ಲ. ಮತೀಯ ತಾರತಮ್ಯ ನಮ್ಮನ್ನು ಆವರಿಸಿದೆ. ತಾಂತ್ರಿಕತೆಯ ಆರ್ಭಟದಿಂದ ಮನುಷ್ಯ ಸಂಬಂಧಗಳು ಹಾಳಾಗುತ್ತಿವೆ. ತಂತ್ರಜ್ಞಾನವನ್ನು ಎಷ್ಟು ಬೇಕೋ ಅಷ್ಟನ್ನು ಮಾತ್ರವೇ ಬಳಸಿಕೊಳ್ಳಬೇಕು ಎಂದು ಸಲಹೆ ನೀಡಿದರು.

ಬಡವರು-ಶ್ರೀಮಂತರ ನಡುವಿನ ಅಂತರ ಹೆಚ್ಚಾಗುತ್ತಲೇ ಇದೆ. ಇದನ್ನು ತಡೆಯುವ ನಿಟ್ಟಿನಲ್ಲಿ ಯುವಜನರು ಕೆಲಸ ಮಾಡಬೇಕು. ಜಾತಿಯ ಶಾಪದಿಂದ ಮುಕ್ತರಾಗಬೇಕು. ಅಸ್ಪೃಶ್ಯತೆ ದೂರವಾಗಬೇಕು.

ಭ್ರಷ್ಟಾಚಾರ ರಹಿತ ಭಾರತ ಕಟ್ಟಬೇಕು. ಮಾನಸಿಕ ಅಸ್ಪೃಶ್ಯತೆ ಎಂಬುದು ಈಗಲೂ ಇದ್ದು ಅದನ್ನು ಹೋಗಲಾಡಿಸುವ ಕೆಲಸವಾಗಬೇಕು ಎಂದು ಹೇಳಿದರು.

ಶಾಸಕರಾದ ಟಿ.ಎಸ್.ಶ್ರೀವತ್ಸ, ಎಚ್.ಎಸ್.ಗಣೇಶ್ ಪ್ರಸಾದ್, ನಟರಾಜ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಚಿದಾನಂದ ಸ್ವಾಮೀಜಿ, ಹಿರಿಯ ಗಾಂಧಿ ಮಾರ್ಗಿ ವೈ.ಸಿ. ರೇವಣ್ಣ, ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ, ಪತ್ರಕರ್ತರಾದ ಅಂಶಿ ಪ್ರಸನ್ನ ಕುಮಾರ್, ಎಂ.ಆರ್. ಸತ್ಯನಾರಾಯಣ, ನಟರಾಜ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಎಚ್.ಎ. ಪೂರ್ಣಿಮಾ, ಕನ್ನಡ ಪ್ರಾಧ್ಯಾಪಕ ಜಿ.ಪ್ರಸಾದ್ ಮೂರ್ತಿ, ಚೂಡಾಮಣಿ, ಎಂ.ಎಸ್.ಸಂಧ್ಯಾರಾಣಿ, ಎಚ್.ಪಿ. [illegible] ಷಮೀರ್, ಹಾಗೂ ವಿದ್ಯಾರ್ಥಿಗಳು ಹಾಜರಿದ್ದರು.

> ಶ್ರೀಮಂತಿಕೆ ಹಾಗೂ ಅಧಿಕಾರವನ್ನು ಆರಾಧನೆ ಮಾಡುತ್ತಿ ವ್ಯವಸ್ಥೆಯೇ ಹೊರತು ಮೌಲ್ಯಗಳಿಗೆ ಬೆಲೆ ಕೊಡುತ್ತಿಲ್ಲ. ಸಾರ್ವಜನಿಕ ಜೀವನ ಹಾಗೂ ಸಾರ್ವಜನಿಕ ಹಣದ ವಿಚಾರದಲ್ಲಿ ಪರಿಶುದ್ಧತೆ ಇಲ್ಲದಿದ್ದರೆ ಸಾಧನೆ ಮಾಡಲು ಸಾಧ್ಯವಾಗದು. ಅಲ್ಲದೇ, ಸಾರ್ವಜನಿಕ ಜೀವನವನ್ನು ಆಧ್ಯಾತ್ಮೀಕರಿಸಿದ ರಾಜಕೀಯ ಸಂತ ಮಹಾತ್ಮ ಗಾಂಧೀಜಿ.
>
> -ವೂಡೇ ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

ಈ ಸಂಜೆ

Oct 09, 2024

# ಗಾಂಧೀಜಿ ತತ್ವ ಸಿದ್ಧಾಂತ ಇಂದಿಗೂ ಜೀವಂತ



ವಿಜಯಪುರ, ಅ. 9 - 'ಸತ್ಯವೇ ದೇವರು ಎಂದು ಸಾರಿದ ಮಹಾತ್ಮ ಗಾಂಧೀಜಿಯವರ ಮುಖ್ಯ ತತ್ವಗಳಲ್ಲಿ ಸತ್ಯವು ಒಂದು ಎಂದು' ಬೆಂಗಳೂರಿನ ಗಾಂಧಿ ಭವನದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ತಿಳಿಸಿದರು.

ಪಟ್ಟಣದ ಬಿಜ್ಜವಾರ ಗ್ರಾಮದಲ್ಲಿ ವಿಶ್ವದಲ್ಲೇ ಪ್ರಥಮ ಬಾರಿಗೆ ಸಾರ್ವಜನಿಕವಾಗಿ ಮಹಾತ್ಮ ಗಾಂಧೀಜಿರವರ ಮೌಲ್ಯಗಳು, ಪರಂಪರೆ ಮತ್ತು ಅವರ ಪ್ರಭಾವ ಹಾಗೂ ತತ್ವ ಸಿದ್ಧಾಂತಗಳ ಬಗ್ಗೆ ಸೆರೆಯಿಡಿದ ವಿಡಿಯೋಗಳ ಅಂತರಾಷ್ಟ್ರೀಯ ವಿಡಿಯೋ ಭಾಷಣ ಸ್ಪರ್ಧೆಯ ಮಾಹಿತಿ ಪತ್ರಗಳನ್ನು ಬಿಡುಗಡೆಗೊಳಿಸಿ ಅವರು ಮಾತನಾಡಿದರು.

'ಸರ್ವಕಾಲಕ್ಕೂ ಮಹಾತ್ಮ ಗಾಂಧೀಜಿ ಅವರ ಆದರ್ಶ ಮತ್ತು ತತ್ವ ಸಿದ್ಧಾಂತಗಳು ನಮಗೆಲ್ಲರಿಗೂ ಸದಾ ದಾರಿದೀಪವಾಗಿದೆ. ಹಾಗೂ ರಾಷ್ಟ್ರಪಿತನ ಸತ್ಯ ಅಹಿಂಸೆಯ ಸಂದೇಶ ಸಿದ್ಧಾಂತಗಳ ಬೋಧನೆಗಳನ್ನು ಇಂದಿಗೂ ಸಹ ಇಡೀ ವಿಶ್ವವೇ ಕೊಂಡಾಡುತ್ತಿದೆ ಮತ್ತು ಗಾಂಧೀಜಿ ಯವರ ಸ್ವದೇಶಿ ಚಳುವಳಿಯ ಮೂಲಕ ಖಾದಿಗೆ ಹೆಚ್ಚಿನ ಮಹತ್ವ ಕೊಟ್ಟವರು. ಸಮಾನತೆಗಾಗಿ ಹೋರಾಟ ಮಾಡಿದವರು ಅವರ ಆಲೋಚನೆಗಳು ಇಂದಿಗೂ ಸಹ ಸದಾ ಜನರ ಹೃದಯದಲ್ಲಿ ನೆಲೆಸಿದೆ ಹಾಗೂ ಸಾರ್ವಕಾಲಕ್ಕೂ ಸತ್ಯವಾಗಿರುವ ಅವರ ಬದುಕು ತತ್ವಾದರ್ಶಗಳ ಬಗ್ಗೆ ತಿಳಿದು ನಮ್ಮ ಜೀವನದಲ್ಲೂ ಅವರ ಆದರ್ಶಗಳನ್ನು ಅಳವಡಿಸಿಕೊಳ್ಳೋಣ' ಎಂದು ತಿಳಿಸಿದರು.

ಬೆಂಗಳೂರಿನ ಕರ್ನಾಟಕ ರಾಜ್ಯ ಮಡಿವಾಳ ಸಂಘದ ರಾಜ್ಯ ನಿರ್ದೇಶಕ ಬಿ.ಕೆ. ಮಧು ಮಾತನಾಡಿ, 'ಮಹಾತ್ಮ ಗಾಂಧೀಜಿ ಅವರು ಸತ್ಯ ಅಹಿಂಸೆಯನ್ನು ಪರಮ ಧರ್ಮವೆಂದು ಪ್ರತಿಪಾದಿಸಿ ಅವುಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿದ ಶ್ರೇಷ್ಠ ವ್ಯಕ್ತಿ. ಅಹಿಂಸೆ ಮಾರ್ಗದ ಮೂಲಕವೇ ಬ್ರಿಟೀಷರ ದಾಸ್ಯದಿಂದ ಭಾರತವನ್ನು ಬಿಡುಗಡೆ ಮಾಡುವಲ್ಲಿ ಶ್ರಮಿಸಿದರು' ಎಂದು ತಿಳಿಸಿದರು.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಸರ್ವೋದಯ ಮಂಡಳಿಯ ಅಧ್ಯಕ್ಷ ಡಾ.ವಿ.ಪ್ರಶಾಂತ ಈ ಕಾರ್ಯಕ್ರಮದ ಸವಿಸ್ತಾರ ವಿವರವನ್ನು ತಿಳಿಸಿಕೊಟ್ಟು ಮಾತನಾಡಿ 'ಈ ಅಂತರಾಷ್ಟ್ರೀಯ ವಿಡಿಯೋ ಭಾಷಣ ಸ್ಪರ್ಧೆಯು ಆಂಗ್ಲ ಮಾಧ್ಯಮ ಹಾಗೂ ಹಿಂದಿ ಮಾಧ್ಯಮದ ಭಾಷೆಯಲ್ಲಿ ಆಯೋಜಿಸಲಾಗಿದ್ದು ಇದರಲ್ಲಿ ಯಾವುದೇ ವಯಸ್ಸಿನ ನಿರ್ಬಂಧ ಇರುವುದಿಲ್ಲ ಎಲ್ಲರೂ ಸಹ ಈ ಸ್ಪರ್ಧೆಯಲ್ಲಿ ಭಾಗವಹಿಸಬಹುದಾಗಿದೆ. ಸ್ಪರ್ಧೆಯ ಕೊನೆಯ ದಿನಾಂಕ:31 ಜನವರಿ 2025 ಆಗಿರುತ್ತದೆ' ಎಂದು ಹೇಳಿದರು.

ಹೆಚ್ಚಿನ ವಿವರಗಳಿಗಾಗಿ ನವದೆಹಲಿಯ ರಾಷ್ಟ್ರೀಯ ಯುವ ಯೋಜನೆಯ ಮ್ಯಾನೇಜಿಂಗ್ ಟ್ರಸ್ಟಿ ಕುಮಾರಿ ರಂಜಿನಿ ಈ. ಜೋಯಿಸ್, ಕಾರ್ಯದರ್ಶಿ ರಣಸಿಂಗ್ ಪರ್ಮರ್, ಸಹಕಾರ್ಯದರ್ಶಿ ಡಾ.ಸುಕುಮಾರನ್ ಹಾಗೂ ಮಧುಸೂದನ್ ದಾಸ್ ಅವರುಗಳನ್ನು ಸಂಪರ್ಕಿಸುವುದಾಗಿ ತಿಳಿಸಿದರು.

ದೊಡ್ಡಬಳ್ಳಾಪುರದ ಧಾರ್ಮಿಕ ಸಲಹೆಗಾರ ಎಸ್. ವೀರಭದ್ರಯ್ಯ ಹಾಜರಿದ್ದರು.

ಕಲಾಪ್ರಿಯ 09-10-2024

# ಕನ್ನಡ ನಾಡಿಗೆ ಪರಭಾಷಿಕರ ಹಾವಳಿ ಹೆಚ್ಚಾಗುತ್ತಿದೆ: ಡಾ.ವೂಡೇ ಪಿ.ಕೃಷ್ಣ



ಬೆಂಗಳೂರು: ನಮ್ಮ ಮನೆ ಮಠ ಸಾಹಿತ್ಯ ಸಂಸ್ಕೃತಿ ಕನ್ನಡದಲ್ಲೇ ಬರೆದು ಓದಿ ಸಂಸ್ಕಾರ ಕಲಿತು ಈ ಬೆಂಗಳೂರಿನಲ್ಲಿ ಬೆಳೆದವರು. ಆದರೆ ಇಂದು ಆಧುನಿಕತೆಯ ಭರಾಟೆಯಲ್ಲಿ ಕನ್ನಡ ಕನ್ನಡಿಗ ಕರ್ನಾಟಕ ಸ್ಥಿತಿ ಗತಿ ಮುಂದಿನ ದಿನಗಳಲ್ಲಿ ಹೋರಾಟದ ಹೆಜ್ಜೆಗಳು ಕಣ್ಮರೆಯಾಗುವ ಲಕ್ಷಣಗಳು ಕಾಣಿಸುತ್ತಿವೆ. ಕಾರಣ ಪರಭಾಷಿಕರ ಹಾವಳಿ ಹೆಚ್ಚಾಗಿದ್ದು ಎಲ್ಲಾ ಕಡೆ, ಎಲ್ಲಾ ಊರು, ಬಡಾವಣೆ, ನಗರಗಳಲ್ಲಿ ಪರದೇಶಿಗರು, ಹೊರರಾಜ್ಯದ ಜನರು ದಿನೇ ದಿನೇ ಹೆಚ್ಚಾಗಿ ಆಗಮಿಸುತ್ತಿದ್ದು ನಮ್ಮವರೇ ಹಿಂದಿ ಇಂಗ್ಲಿಷ್ ಭಾಷೆಯ ಕಡೆಗೆ ವ್ಯಾಮೋಹಕ್ಕೆ ಒಳಗಾಗುತ್ತಿರುವುದು ಶೋಚನೀಯ, ವಿಷಾದನೀಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ ಕೃಷ್ಣ ಅವರು ಅಭಿಪ್ರಾಯಪಟ್ಟರು. ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ರಾಜ್ಯ ಮಟ್ಟದ 15 ನೇ ಕನ್ನಡ ಸಾಹಿತ್ಯ ಸಂಸ್ಕೃತಿ ಜಾಗೃತಿ ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದರು. ಯುವಕರಿಗೆ, ವಿದ್ಯಾರ್ಥಿಗಳಿಗೆ ಕನ್ನಡ ನಾಡಿನ ಹೆಮ್ಮೆಯ ವಿಷಯ ವಿಚಾರಗಳನ್ನು ಮುಕ್ತವಾಗಿ ಪರಿಚಯಿಸುವ ಕಾರ್ಯವನ್ನು ನಾವೆಲ್ಲ ಮಾಡಬೇಕಿದೆ ಎಂದರು. ಪ್ರಸಿದ್ಧ ವಿದ್ವಾಂಸರಾದ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರು ಅಧ್ಯಕ್ಷತೆ ವಹಿಸಿ ನಮ್ಮ ಪರಂಪರೆ, ಸಂಸ್ಕೃತಿ ಜಾಗೃತಿ ಮೂಡಿಸುವ ಕೆಲಸವನ್ನು ಸಿಸಿರಾ ಮತ್ತು ಅವರ ಕುಟುಂಬ, ಇಂತಹ ಶ್ಲಾಘನೀಯ ಎಂದರು. ಸಮಾವೇಶದ ಅಧ್ಯಕ್ಷರಾದ ಪ್ರೊ.ಲೀಲಾ ವಾಸುದೇವ್ ಅವರು ಮಾತನಾಡಿ ವೇದಗಳ ಕಾಲದಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನ ಮಾನ ಇತ್ತು, ಆದರೆ ಆಧುನಿಕ ತಂತ್ರಜ್ಞಾನ ಕಾಲದಲ್ಲಿ ಪುರುಷ ದೌರ್ಜನ್ಯ ಪ್ರಕರಣಗಳು ಹೆಚ್ಚುತ್ತಿವೆ, ಮಹಿಳೆಯರು ಸ್ವಾವಲಂಬನೆಯಾಗಿ ಇರಲು ಕುಟುಂಬ, ಸಮಾಜ ಒಪ್ಪುತ್ತಿಲ್ಲ, ಗಾಂಧಿ ಸಾಹಿತ್ಯ, ನಮ್ಮ ಪರಂಪರೆಯ ಮೌಲ್ಯಗಳನ್ನು, ಪುಸ್ತಕ ಮತ್ತು ವರ್ತಮಾನ ಪತ್ರಿಕೆಗಳ ಓದುವ, ನಮ್ಮ ಮಾನಸಿಕ ತುಮುಲಗಳನ್ನು ಬರೆಯುವ, ಕೌಟುಂಬಿಕ ಸುಂದರಿ ವಾತಾವರಣವನ್ನು ನಿರ್ಮಿಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದರು.. ಟ್ರಸ್ಟ್‌ನ ಅಧ್ಯಕ್ಷರಾದ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರು ಸಂಸ್ಥೆಯ ಇಪ್ಪತ್ತಾರು ವರ್ಷಗಳ ಕಾರ್ಯಚಟುವಟಿಕೆಗಳು ಬಗ್ಗೆ ಪ್ರಾಸ್ತಾವಿಕ ಮಾತನಾಡಿ ಎಲ್ಲರನ್ನು ಸ್ವಾಗತಿಸಿದರು. ಸಾಹಿತಿಗಳಾದ ಡಾ.ಆರ್.ವಾದಿರಾಜ್, ಡಾ.ಕೃಷ್ಣ ಮಾಸ್ ಬಾಳ್, ಕಾರ್ಯದರ್ಶಿ ಸಿ.ಹೇಮಾವತಿ ಮುಂತಾದವರಿದ್ದರು. ಬೆಳಗ್ಗೆ ಧ್ವಜಾರೋಹಣವನ್ನು, ನಿಕಟಪೂರ್ವ ಜಿಲ್ಲಾ ಕಸಾಪ ಅಧ್ಯಕ್ಷ ಮಾಯಣ್ಣ, ಸಾಹಿತಿ ಡಾ.ಅಂಬುಜಾ ಪ್ರಕಾಶ್ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು, ಹೋರಾಟಗಾರ್ತಿ ಶಾಂತಲಾ ಸುರೇಶ್ ಪುಸ್ತಕ ಮಾರಾಟ ಪ್ರದರ್ಶನ ಮಳಿಗೆಗೆ ಚಾಲನೆ ನೀಡಿದರು. ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಮಹನೀಯರಾದ ಪ್ರೊ.ಲೀಲವಾಸುದೇವ್ (ಸಾಹಿತ್ಯ), ಉದಯರವಿ(ಪತ್ರಿಕೆ), ಅರ್ಚನಾ ರವಿ (ಕಂಪ್ಯೂಟರ್), ಸುನಿತನವೀನ್ ಗೌಡ (ಸಂಗೀತ ನೃತ್ಯ), ಬಿ.ಎಸ್.ಶಂಕರ್ (ಶಿಕ್ಷಣ. ಸಹಕಾರ) ಅವರಿಗೆ ಅನಿಕೇತನ ದತ್ತಿ ಪ್ರಶಸ್ತಿ ಪ್ರದಾನ ಮಾಡಲಾಯಿತು.

# ಕನ್ನಡ ನಾಡಿಗೆ ಪರಭಾಷಿಗರ ಹಾವಳಿ ಹೆಚ್ಚಾಗುತ್ತಿದೆ: ಡಾ.ವೂಡೇ ಪಿ. ಕೃಷ್ಣ



ಬೆಂಗಳೂರು, ಅ.7- ಇಂದು ಆಧುನಿಕತೆಯ ಭರಾಟೆಯಲ್ಲಿ ಕನ್ನಡ- ಕನ್ನಡಿಗ- ಕರ್ನಾಟಕ ಸ್ಥಿತಿ ಗತಿ ಮುಂದಿನ ದಿನಗಳಲ್ಲಿ ಹೋರಾಟದ ಹೆಜ್ಜೆಗಳು ಕಣ್ಮರೆಯಾಗುವ ಲಕ್ಷಣಗಳು ಕಾಣಿಸುತ್ತಿವೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ ಕೃಷ್ಣ ಆತಂಕ ವ್ಯಕ್ತಪಡಿಸಿದ್ದಾರೆ.

ಪರಭಾಷಿಕರ ಹಾವಳಿ ಹೆಚ್ಚಾಗಿದ್ದು ಎಲ್ಲಾ ಕಡೆ, ಎಲ್ಲಾ ಊರು, ಬಡಾವಣೆ, ನಗರಗಳಲ್ಲಿ ಪರದೇಶಿಗರು, ಹೊರರಾಜ್ಯದ ಜನರು ದಿನೇ ದಿನೇ ಹೆಚ್ಚಾಗಿ ಆಗಮಿಸುತ್ತಿದ್ದು ನಮ್ಮವರೇ ಹಿಂದಿ- ಇಂಗ್ಲಿಷ್ ಭಾಷೆಯ ವ್ಯಾಮೋಹಕ್ಕೆ ಒಳಗಾಗುತ್ತಿರುವುದು ಶೋಚನೀಯ ಎಂದರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನಗರದ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ರಾಜ್ಯ ಮಟ್ಟದ 15 ನೇ ಕನ್ನಡ ಸಾಹಿತ್ಯ ಸಂಸ್ಕೃತಿ ಜಾಗೃತಿ ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದರು.

ಯುವಕರಿಗೆ, ವಿದ್ಯಾರ್ಥಿಗಳಿಗೆ ಕನ್ನಡ ನಾಡಿನ ಹೆಮ್ಮೆಯ ವಿಷಯ ವಿಚಾರಗಳನ್ನು ಮುಕ್ತವಾಗಿ ಪರಿಚಯಿಸುವ ಕಾರ್ಯವನ್ನು ನಾವೆಲ್ಲ ಮಾಡಬೇಕಿದೆ ಎಂದರು.

ಪ್ರಸಿದ್ಧ ವಿದ್ವಾಂಸರಾದ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರು ಮಾತನಾಡಿ, ನಮ್ಮ ಪರಂಪರೆ, ಸಂಸ್ಕೃತಿ ಜಾಗೃತಿ ಮೂಡಿಸುವ ಕೆಲಸವನ್ನು ಸಿಸಿರಾ ಮತ್ತು ಅವರ ಕುಟುಂಬ ಮಾಡುತ್ತಿದೆ. ಇಂತಹ ಕಾರ್ಯಕ್ರಮ ಶ್ಲಾಘನೀಯ ಎಂದರು.

ಸಮಾವೇಶದ ಅಧ್ಯಕ್ಷರಾದ ಪ್ರೊ.ಲೀಲಾ ವಾಸುದೇವ್ ಅವರು ಮಾತನಾಡಿ, ವೇದಗಳ ಕಾಲದಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನ ಮಾನ ಇತ್ತು, ಆದರೆ ಆಧುನಿಕ ತಂತ್ರಜ್ಞಾನ ಕಾಲದಲ್ಲಿ ಪುರುಷ ದೌರ್ಜನ್ಯ ಪ್ರಕರಣಗಳು ಹೆಚ್ಚುತ್ತಿವೆ, ಮಹಿಳೆಯರು ಸ್ವಾವಲಂಬನೆಯಾಗಿ ಇರಲು ಕುಟುಂಬ, ಸಮಾಜ ಒಪ್ಪುತ್ತಿಲ್ಲ, ಗಾಂಧಿ ಸಾಹಿತ್ಯ, ನಮ್ಮ ಪರಂಪರೆಯ ಮೌಲ್ಯಗಳನ್ನು, ಪುಸ್ತಕ ಮತ್ತು ವರ್ತಮಾನ ಪತ್ರಿಕೆಗಳ ಓದುವ, ನಮ್ಮ ಮಾನಸಿಕ ತುಮುಲಗಳನ್ನು ಬರೆಯುವ, ಕೌಟುಂಬಿಕ ಸುಂದರಿ ವಾತಾವರಣವನ್ನು ನಿರ್ಮಿಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದರು. ಟ್ರಸ್ಟ್ ನ ಅಧ್ಯಕ್ಷರಾದ ಡಾ.ಎಸ್. ರಾಮಲಿಂಗೇಶ್ವರ (ಸಿಸಿರಾ) ಅವರು ಸಂಸ್ಥೆಯ ಇಪ್ಪತ್ತಾರು ವರ್ಷಗಳ ಕಾರ್ಯಚಟುವಟಿಕೆಗಳು ಬಗ್ಗೆ ಪ್ರಾಸ್ತಾವಿಕ ಮಾತನಾಡಿದರು.

ಸಾಹಿತಿಗಳಾದ ಡಾ.ಆರ್.ವಾದಿರಾಜ್, ಡಾ.ಕೃಷ್ಣ ಹಾನ್ ಬಾಳ್, ಕಾರ್ಯದರ್ಶಿ ಸಿ.ಹೇಮಾವತಿ ಮುಂತಾದವರಿದ್ದರು.

ನಿಕಟಪೂರ್ವ ಜಿಲ್ಲಾ ಕಸಾಪ ಅಧ್ಯಕ್ಷ ಮಾಯಣ್ಣ, ಸಾಹಿತಿ ಡಾ.ಅಂಬುಜಾ ಪ್ರಕಾಶ್, ಹೋರಾಟಗಾರ್ತಿ ಶಾಂತಲಾ ಸುರೇಶ್ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಪ್ರೊ.ಲೀಲವಾಸುದೇವ್ (ಸಾಹಿತ್ಯ), ಉದಯರವಿ(ಪತ್ರಿಕೆ), ಅರ್ಚನಾ ರವಿ (ಕಂಪ್ಯೂಟ)ರ್, ಸುನಿತನವೀನ್ ಗೌಡ (ಸಂಗೀತ ನೃತ್ಯ ), ಬಿ.ಎಸ್.ಶಂಕರ್ (ಶಿಕ್ಷಣ. ಸಹಕಾರ) ಅವರಿಗೆ ಅನಿಕೇತನ ದತ್ತಿ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಸಂಜೆವಾಣಿ

ಸೋಮವಾರ 7 ಅಕ್ಟೋಬರ್ 2024



ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಇಂದು ಏರ್ಪಡಿಸಿದ್ದ ರಾಜ್ಯ ಮಟ್ಟದ 15ನೇ ಕನ್ನಡ ಸಾಹಿತ್ಯ ಸಂಸ್ಕೃತಿ ಜಾಗೃತಿ ಸಮಾವೇಶವನ್ನು ಗಾಂಧಿ ಭವನ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ವಿಶ್ರಾಂತ ಕುಲಪತಿ ಡಾ. ಮಲ್ಲೇಪುರಂ ಜಿ.ವೆಂಕಟೇಶ್, ಸಮಾವೇಶದ ಅಧ್ಯಕ್ಷೆ ಪ್ರೊ. ಲೀಲಾ ವಾಸುದೇವ್, ಮಾಯಣ್ಣ ಶಶಿಕಾಂತ್ ರಾವ್, ಡಾ. ಅಂಬುಜಾ ಪ್ರಕಾಶ್, ಡಾ. [illegible] ಕೃಷ್ಣ ಜಾನ್‌ಬಾಕ್, ವೆಂಕಟೇಶ್ ಮತ್ತಿತರರು ಇದ್ದಾರೆ.

ಸಂಯುಕ್ತ ಕರ್ನಾಟಕ

ಸೋಮವಾರ 7 ಅಕ್ಟೋಬರ್ 2024
ಬೆಂಗಳೂರು | BENGALURU

# ಮೀಸಲಾತಿ ಕುರಿತು ಜನರಿಗೆ ಅರಿವು ಅಗತ್ಯ

ಬೆಂಗಳೂರು: ಮೀಸಲಾತಿ ವಿಚಾರದಲ್ಲಿ ಜನತೆಗೆ ಅರಿವು ಅವಶ್ಯ ಎಂದು ವಿಧಾನಪರಿಷತ್ ಸದಸ್ಯ ಬಿ.ಕೆ. ಹರಿಪ್ರಸಾದ್ ಹೇಳಿದರು.

ಕೆ.ಎನ್. ಲಿಂಗಪ್ಪ ಅವರು ಬರೆದಿರುವ ಮೀಸಲಾತಿಯ ಒಳಮುಖ ಎಂಬ ಪುಸ್ತಕವನ್ನು ಲೋಕಾರ್ಪಣೆಗೊಳಿಸಿ ಮಾತನಾಡಿದ ಅವರು, ಹಿಂದುಳಿದ ವರ್ಗಗಳ ಮೀಸಲಾತಿಯ ಪರ ವಿರೋಧವಿರುವ ಕಾಲ ಘಟ್ಟದಲ್ಲಿ ಇರುವ ನಮಗೆ ಎನ್ ಲಿಂಗಪ್ಪ ಅವರು ರಚಿಸಿರುವ ಮೀಸಲಾತಿಯ ಒಳಮುಖ ಪುಸ್ತಕವು ಮರುಭೂಮಿಯಲ್ಲಿ ಓಯಸಿಸ್ ಸಿಕ್ಕ ಹಾಗೆ ಆಗಿದೆ ಎಂದರು.

ಸಂವಿಧಾನವು ನೀಡುವ ಮೀಸಲಾತಿಯ ಬಗ್ಗೆ ಮಾತನಾಡುವ ಜನರು ಆ ಮೀಸಲಾತಿಯ ಕುರಿತು ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು. ಮೀಸಲಾತಿ ಎಂಬುದು ಕೇವಲ ಬಡವರಿಗಾಗಿ ಅಥವಾ ಬಡತನ ನಿರ್ಮೂಲನೆ ಕಾರ್ಯಕ್ರಮವಲ್ಲ ಅಥವಾ ಉದ್ಯೋಗ ಹಿಡಿಯಲು ಮಾಡಿರುವುದಲ್ಲ ಸಮಾಜದಲ್ಲಿ ಶೋಷಣೆಗೆ ಒಳಗಾದ ಸಮುದಾಯವನ್ನು ಮೇಲೆತ್ತುವಂತಹ ಕಾರ್ಯ ಮಾಡಲು ಅನುವು ಮಾಡಿಕೊಡುತ್ತದೆ ಎಂದು ಸಮರ್ಥಿಸಿಕೊಂಡರು.

ಮೀಸಲಾತಿಗಾಗಿ ಎಲ್ಲ ಹಿಂದುಳಿದ ಸಮಾಜದವರು ಸಂಘಟಿತರಾಗುವುದು ಅವಶ್ಯಕವಾಗಿದ್ದು, ಈ ನಿಟ್ಟಿನಲ್ಲಿ ಮೀಸಲಾತಿಯ ಒಳಮುಖ ಪುಸ್ತಕ ದಾರಿದೀಪವಾಗಿದೆ ಎಂದು ತಿಳಿಸಿದರು. ನಿವೃತ್ತ ನ್ಯಾಯಮೂರ್ತಿ ಎಚ್ ಬಿಲ್ಲಪ್ಪ ಮಾತನಾಡಿ ಜಾತಿ ಆಧಾರಿತ, ಲಿಂಗ ತಾರತಮ್ಯ, ಹುಟ್ಟಿದ ಸ್ಥಳ ಆಧಾರದ ಮೇಲೆ ಜಾತಿ ವ್ಯವಸ್ಥೆಯನ್ನು ರೂಪಿಸಲಾಗಿದ್ದು, ಹಿಂದುಳಿದ ವರ್ಗಗಳಿಗೆ ಯಾವುದೇ ರೀತಿಯ ಸಾಮಾಜಿಕ ನ್ಯಾಯ ಸಿಕ್ಕಿಲ್ಲ ಎಂದು ಕಳವಳ ವ್ಯಕ್ತಪಡಿಸಿದರು.



ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇಪಿ ಕೃಷ್ಣ ಮಾತನಾಡಿ ಇಂದಿನ ಯುವ ಪೀಳಿಗೆಗೆ ಸಂವಿಧಾನದ ವಿಚಾರ ಮೌಲ್ಯಗಳನ್ನು ತಿಳಿಸುವುದು ಅಗತ್ಯವಾಗಿದ್ದು, ಇದರೊಂದಿಗೆ ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುವ ಶಕ್ತಿ ಸಿಗುವುದು ಎಂದು ಕಿವಿಮಾತು ಹೇಳಿದರು.

ಪುಸ್ತಕದ ಕುರಿತು ಅಜೀಮ್ ಪ್ರೇಮ್ ಜಿ ಪ್ರಾಧ್ಯಾಪಕ ಡಾ. ಎಂ ನಾರಾಯಣ ಮಾತನಾಡಿ ಹಿಂದುಳಿದ ವರ್ಗಗಳ ಮೀಸಲಾತಿ ಯಾವ ಆಧಾರದ ಮೇಲೆ ನೀಡಬೇಕು, ಮೀಸಲಾತಿಯ ಉಗಮ ಮತ್ತು ಇತಿಹಾಸ, ಜಾತಿ ಮೀಸಲಾತಿಯಲ್ಲಿ ಒಡೆಯರ್ ಪಾತ್ರ, ಗಾಂಧಿ ಮತ್ತು ಅಂಬೇಡ್ಕರ್ ಅವರ ನಿಲುವನ್ನು ವಿಮರ್ಶಾತ್ಮಕವಾಗಿ ವಿವರಿಸಿದರು.

ವಿಧಾನಪರಿಷತ್ ಸದಸ್ಯ ಸಾಯಿಬಣ್ಣಾ ತಳವಾರ ಪುಸ್ತಕದ ಕುರಿತು ತಮ್ಮ ಅನಿಸಿಕೆಗಳನ್ನು ತಿಳಿಸಿದರು. ಈ ಸಂದರ್ಭದಲ್ಲಿ ವಿಧಾನಪರಿಷತ್ ಸದಸ್ಯ ಡಿ.ಟಿ ಶ್ರೀನಿವಾಸ, ಹಿಂದುಳಿದ ವರ್ಗದ ಮಾಜಿ ಅಧ್ಯಕ್ಷ ಸಿ.ಎಸ್ ದ್ವಾರಕಾನಾಥ್, ಶ್ರೀನಿವಾಸ ಆಚಾರ್ಯ, ಅಭಿರುಚಿ ಗಣೇಶ ಸೇರಿದಂತೆ ಸಾಹಿತ್ಯಾಸಕ್ತರು ಉಪಸ್ಥಿತರಿದ್ದರು.

ಕನ್ನಡಪ್ರಭ ಸೋಮವಾರ 7.10.2024

# ಜಾತಿಗಣತಿಗೆ ಲಿಂಗಾಯತ, ಒಕ್ಕಲಿಗರ ವಿರೋಧ ವಿಪರ್ಯಾಸ: ಹರಿಪ್ರಸಾದ್

## ಮೈಸೂರು ರಾಜರಿಂದ ಮೀಸಲು ಅವಕಾಶ ಪಡೆದವರಿಂದಲೇ ಈಗ ವಿರೋಧ

## ಕೆ.ಎನ್.ಲಿಂಗಪ್ಪ ವಿರಚಿತ 'ಮೀಸಲಾತಿಯ ಒಳಮುಖ' ಪುಸ್ತಕ ಲೋಕಾರ್ಪಣೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮೈಸೂರು ಸಂಸ್ಥಾನದ ಆಳ್ವಿಕೆಯಲ್ಲಿ ಮೀಸಲಾತಿ ಜಾರಿಗೊಳಿಸಿದ್ದರಿಂದ ಸಂಸ್ಥಾನದ ವಿವಿಧ ಹುದ್ದೆಗಳಲ್ಲಿ ಅವಕಾಶ ಪಡೆದ ಒಕ್ಕಲಿಗರು ಮತ್ತು ಲಿಂಗಾಯತ ಸಮುದಾಯದವರು ಇವತ್ತು ಜಾತಿಗಣತಿ ವರದಿ ಜಾರಿಗೆ ವಿರೋಧ ವ್ಯಕ್ತಪಡಿಸುತ್ತಿರುವುದು ವಿಪರ್ಯಾಸ ಎಂದು ವಿಧಾನ ಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಬೇಸರ ವ್ಯಕ್ತಪಡಿಸಿದರು.

ಭಾನುವಾರ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಕೆ.ಎನ್. ಲಿಂಗಪ್ಪ ಅವರ ರಚನೆಯ 'ಮೀಸಲಾತಿಯ ಒಳಮುಖ' ಪುಸ್ತಕವನ್ನು ಬಿಡುಗಡೆಗೊಳಿಸಿ ಅವರು ಮಾತನಾಡಿದರು.

ದೇಶದಲ್ಲೇ ಮೊದಲ ಬಾರಿಗೆ ಮೀಸಲಾತಿ ನೀಡಿದ ರಾಜ್ಯ ಕರ್ನಾಟಕ. ಒಡೆಯರ್ ಅವರು ನೀಡಿದ ಮೀಸಲಾತಿಯ ಪರಿಣಾಮ ಇಂದಿಗೂ ಶೂದ್ರರೆಂದೇ ಪರಿಗಣಿಸಿರುವ ಒಕ್ಕಲಿಗರು ಮತ್ತು ಲಿಂಗಾಯತರು ಪ್ರಜಾಪ್ರತಿನಿಧಿ ಸಭೆ ಸೇರಿದಂತೆ ಸಂಸ್ಥಾನದ ವಿವಿಧ ಹುದ್ದೆಗಳಲ್ಲಿ ಅವಕಾಶ ಪಡೆದರು. ಇತರೆ ಸಮುದಾಯಗಳಿಗೆ ಅವಕಾಶ ಸಿಗಲಿಲ್ಲ. ಆದರೆ, ಅವಕಾಶ ಪಡೆದ ಲಿಂಗಾಯತ ಮತ್ತು ಒಕ್ಕಲಿಗರೇ ಇವತ್ತು ಜಾತಿಗಣತಿ ವರದಿ ಜಾರಿಗೆ ವಿರೋಧ ವ್ಯಕ್ತಪಡಿಸುವುದು ವಿಪರ್ಯಾಸ ಎಂದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಕೆ.ಎನ್. ಲಿಂಗಪ್ಪ ರಚಿಸಿರುವ 'ಮೀಸಲಾತಿಯ ಒಳಮುಖ' ಪುಸ್ತಕವನ್ನು ವಿಧಾನ ಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಬಿಡುಗಡೆ ಮಾಡಿದರು. ನಿವೃತ್ತ ನ್ಯಾಯಮೂರ್ತಿ ಎಚ್.ಬಿಲ್ಲಪ್ಪ, ಡಾ। ಎ.ನಾರಾಯಣ, ಡಿ.ಟಿ.ಶ್ರೀನಿವಾಸ್, ಮತ್ತಿತರರಿದ್ದರು.

**ಕತ್ತಿ ತಲವಾರ್ ಹಿಡಿದು ನಿಂತಿದ್ದಾರೆ:** ಸಂವಿಧಾನ ಪವಿತ್ರ ಗ್ರಂಥವಲ್ಲ ಎನ್ನುವವರು ಅದನ್ನು ಬಳಸಿಕೊಂಡಿಯೇ ಉನ್ನತ ಹುದ್ದೆಗಳಿಗೆ ಏರಿದ್ದಾರೆ. ಯಾರಿಗಾಗಿ ಸಂವಿಧಾನ ರಚಿಸಲಾಗಿದೆಯೋ ಅವರೇ ಕತ್ತಿ-ತಲವಾರ್ ಹಿಡಿದು ನಿಂತಿದ್ದಾರೆ. ಸಂವಿಧಾನದ ಆಶಯಗಳನ್ನು ಅನುಷ್ಠಾನಕ್ಕೆ ತರದಿದ್ದರೆ ಸಮಾಜದ ಸ್ಥಿತಿ ಶೋಚನೀಯವಾಗುತ್ತದೆ. ಹಿಂದುಳಿದ ವರ್ಗದ 197 ಜಾತಿಗಳ ಪೈಕಿ 127 ಜಾತಿಗಳಿಗೆ ಸರ್ಕಾರಿ ನೌಕರಿಯೇ ಸಿಕ್ಕಿಲ್ಲ. ಹೀಗಿರುವಾಗ ಒಳ ಮೀಸಲಾತಿ ಜಾರಿಗೆ ಬರದಿದ್ದರೆ ಇಂತಹ ದುರಂತಗಳು ಮುಂದುವರೆಯುತ್ತವೆ. ಸಂವಿಧಾನದ ಆಶಯ ಎತ್ತಿ ಹಿಡಿಯುವುದು ಅಸಾಧ್ಯ ಎಂದು ಅಭಿಪ್ರಾಯಪಟ್ಟರು.

ಅಜೀಮ್ ಪ್ರೇಮಜಿ ವಿವಿಯ ಪ್ರಾಧ್ಯಾಪಕ ಡಾ। ಎ.ನಾರಾಯಣ, ಮಾತನಾಡಿ, ಜಾತಿ ಗಣತಿ ವರದಿ ವಿಳಂಬ ಆಗಬಾರದು. ಅಲ್ಲದೆ, ಸಮಗ್ರ ಜಾತಿ, ಜನಗಣತಿಯಾಗುವ ಅತ್ಯಗತ್ಯವಿದೆ. ಹಿಂದುಳಿದ ವರ್ಗಗಳ ಜಾತಿ ಪಟ್ಟಿ ಮರು ಪರಿಶೀಲನೆಯಾಗಬೇಕು. ಪ್ರತಿ 10 ವರ್ಷಗಳಿಗೊಮ್ಮೆ ಮರು ಪರಿಶೀಲನೆಯಾಗಬೇಕು ಎಂದು ಒತ್ತಾಯಿಸಿದರು.

ವಿಧಾನ ಪರಿಷತ್ ಸದಸ್ಯ ಡಿ.ಟಿ. ಶ್ರೀನಿವಾಸ್, ನಿವೃತ್ತ ನ್ಯಾಯಮೂರ್ತಿ ಎಚ್.ಬಿಲ್ಲಪ್ಪ, ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಮಾಜಿ ಅಧ್ಯಕ್ಷ ಸಿ.ಎಸ್.ದ್ವಾರಕನಾಥ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಲೇಖಕ ಕೆ.ಎನ್.ಲಿಂಗಪ್ಪ ಇದ್ದರು.

ವಿಜಯ ಕರ್ನಾಟಕ VK

ಸೋಮವಾರ, 7 ಅಕ್ಟೋಬರ್ 2024, ಬೆಂಗಳೂರು

# ಶೂದ್ರರೇ ಜಾತಿಗಣತಿ ವಿರೋಧಿಸುವುದು ವಿಪರ್ಯಾಸ

## 'ಮೀಸಲಾತಿಯ ಒಳಮುಖ' ಕೃತಿ ಬಿಡುಗಡೆಗೊಳಿಸಿದ ಬಿ.ಕೆ.ಹರಿಪ್ರಸಾದ್

**ವಿಕ ಸುದ್ದಿಲೋಕ** ಬೆಂಗಳೂರು

''ಸಂವಿಧಾನ ಪವಿತ್ರ ಗ್ರಂಥವಲ್ಲ ಎನ್ನುವವರು ಅದನ್ನು ಬಳಸಿಕೊಂಡೇ ಉನ್ನತ ಹುದ್ದೆಗಳಿಗೆ ಏರಿದ್ದಾರೆ. ಯಾರಿಗಾಗಿ ಸಂವಿಧಾನ ರಚಿಸಲಾಗಿದೆಯೋ ಅವರು ಕತ್ತಿ-ತಲವಾರ್ ಹಿಡಿದು ನಿಂತಿದ್ದಾರೆ,'' ಎಂದು ವಿಧಾನ ಪರಿಷತ್ ಬಿ.ಕೆ.ಹರಿಪ್ರಸಾದ್ ಅಸಮಾಧಾನ ವ್ಯಕ್ತಪಡಿಸಿದರು.

ಭಾನುವಾರ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಕೆ.ಎನ್.ಲಿಂಗಪ್ಪ ಅವರ ರಚನೆಯ 'ಮೀಸಲಾತಿಯ ಒಳಮುಖ' ಪುಸ್ತಕವನ್ನು ಬಿಡುಗಡೆಗೊಳಿಸಿ ಅವರು ಮಾತನಾಡಿದರು.



''ದೇಶದಲ್ಲೇ ಮೊದಲ ಬಾರಿಗೆ ಮೀಸಲು ನೀಡಿದ ರಾಜ್ಯ ಕರ್ನಾಟಕ. ಸ್ವಾತಂತ್ರ್ಯ ಪೂರ್ವದಲ್ಲಿಯೇ ನಾಲ್ವಡಿ ಕೃಷ್ಣರಾಜ ಒಡೆಯರ್ ಬ್ರಾಹ್ಮಣೇತರರಿಗೂ ತಮ್ಮ ಸಂಸ್ಥಾನದ ಆಡಳಿತದಲ್ಲಿ ಅವಕಾಶ ಕಲ್ಪಿಸಲು ಮೀಸಲು ತರಬೇಕೆಂದು 1918ರಲ್ಲಿ ಮಿಲ್ಲರ್ ಕಮಿಷನ್ ರಚಿಸಿದರು. ಕಮಿಷನ್ ಬ್ರಾಹ್ಮಣೇತರರಿಗೆ ಶೇ.75ರಷ್ಟು ಮೀಸಲು ನೀಡಲು ಶಿಫಾರಸುಗೊಳಿಸಿ ವರದಿ ನೀಡಿತು. ಇದನ್ನು ವಿರೋಧಿಸಿದ ಸರ್ ಎಂ. ವಿಶ್ವೇಶ್ವರಯ್ಯ ಅವರಿಂದ ರಾಜೀನಾಮೆ ಪಡೆದು, ಗೌರವದಿಂದ ಕಳುಹಿಸಿಕೊಡಲಾಯಿತು,'' ಎಂದು ತಿಳಿಸಿದರು.

''ಅಂದು ನಾಲ್ವಡಿ ಅವರು ನೀಡಿದ ಮೀಸಲಿನ ಪರಿಣಾಮ ಇಂದಿಗೂ ಶೂದ್ರರೆಂದೇ ಪರಿಗಣಿಸಿರುವ ಒಕ್ಕಲಿಗರು ಮತ್ತು ಬಸವಾದಿ ಶರಣರು ಎಂದುಕೊಳ್ಳುವ ಲಿಂಗಾಯತರು ಪ್ರಜಾಪ್ರತಿನಿಧಿ ಸಭೆ ಸೇರಿದಂತೆ ಸಂಸ್ಥಾನದ ವಿವಿಧ ಹುದ್ದೆಗಳಲ್ಲಿ ಅವಕಾಶ ಪಡೆದರು. ಇತರೆ ಸಮುದಾಯಗಳಿಗೆ ಅವಕಾಶ ಸಿಗಲಿಲ್ಲ, ಆದರೆ, ಇಂದಿಗೂ ಜಾತಿಗಣತಿ ವರದಿ ಜಾರಿಗೆ ಒಕ್ಕಲಿಗ ಮತ್ತು ಲಿಂಗಾಯತರೇ ವಿರೋಧ ವ್ಯಕ್ತಪಡಿಸುವುದು ವಿಪರ್ಯಾಸ'' ಎಂದು ಬೇಸರ ವ್ಯಕ್ತಪಡಿಸಿದರು.

ಅಜೀಮ್ ಪ್ರೇಮ್‌ಜಿ ವಿವಿಯ ಪ್ರಾಧ್ಯಾಪಕ ಡಾ.ಎ.ನಾರಾಯಣ ಮಾತನಾಡಿ, ''ಜಾತಿಗಣತಿ ವರದಿ ವಿಳಂಬ ಆಗಬಾರದು. ಅಲ್ಲದೆ, ಸಮಗ್ರ ಜಾತಿ, ಜನಗಣತಿಯಾಗುವ ಅತ್ಯಗತ್ಯವಿದೆ. ಹಿಂದುಳಿದ ವರ್ಗಗಳ ಜಾತಿ ಪಟ್ಟಿ ಪ್ರತಿ 10 ವರ್ಷಗಳಿಗೊಮ್ಮೆ ಮರು ಪರಿಶೀಲನೆಯಾಗಬೇಕು,'' ಎಂದು ಒತ್ತಾಯಿಸಿದರು.

''ಹಿಂದುಳಿದ ಜಾತಿಗಳು ಕೌಶಲದ ನಿಧಿಗಳು. ಅವು ಸಮಾನವಾಗಿ ನೋವುಂಡಿರುವ ಮತ್ತು ನೋವು ಉಣ್ಣುತ್ತಿರುವ ಜಾತಿಗಳು. ಆದರೆ, ಈ ಪ್ರಜ್ಞೆ ಅವರಿಗೆ ಬಂದಿಲ್ಲ, ಪರಿಣಾಮ, ಹಿಂದುಳಿದ ಜಾತಿಗಳು ಒಟ್ಟಾಗುತ್ತಿಲ್ಲ, ಯಾವ ಜಾತಿಗೆ ಬೌದ್ಧಿಕ ನಾಯಕತ್ವ ಇರುವುದಿಲ್ಲವೋ ಅದು ಸಮಾಜದಲ್ಲಿ ಅನಾಥವಾಗುತ್ತದೆ. ಹಾಗಾಗಿ, ಹಿಂದುಳಿದವರು ಎಂದರೆ ಯಾರು ಎಂಬುದನ್ನು ಹಿಂದುಳಿದ ಜಾತಿಗಳು ಮೊದಲು ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕು,'' ಎಂದರು.

ವೇದಿಕೆಯಲ್ಲಿ ವಿಧಾನ ಪರಿಷತ್ ಸದಸ್ಯ ಡಿ.ಟಿ.ಶ್ರೀನಿವಾಸ್, ನಿವೃತ್ತ ನ್ಯಾಯಮೂರ್ತಿ ಎಚ್.ಬಿಲ್ಲಪ್ಪ, ಡಾ.ಸಿ.ಎಸ್.ದ್ವಾರಕನಾಥ್, ವೂಡೇ ಪಿ.ಕೃಷ್ಣ, ಲೇಖಕ ಕೆ.ಎನ್.ಲಿಂಗಪ್ಪ ಇದ್ದರು.

ಪ್ರಜಾವಾಣಿ ಸೋಮವಾರ ● ಅಕ್ಟೋಬರ್ 7, 2024

# 'ಮಹಿಳೆಯರಿಗೆ ಸುರಕ್ಷತೆ ಅಗತ್ಯ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಇತ್ತೀಚಿನ ದಿನಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ಹೆಚ್ಚುತ್ತಿವೆ. ಸರ್ಕಾರ ಮಹಿಳೆಯರ ಸುರಕ್ಷತೆಗೆ ಆದ್ಯತೆ ನೀಡಬೇಕು' ಎಂದು ಲೇಖಕಿ ಲೀಲಾ ವಾಸುದೇವ್ ಅಭಿಪ್ರಾಯಪಟ್ಟರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನಗರದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ರಾಜ್ಯಮಟ್ಟದ 15ನೇ ಕನ್ನಡ ಸಾಹಿತ್ಯ ಸಂಸ್ಕೃತಿ ಜಾಗೃತಿ ಸಮಾವೇಶದ ಸಮ್ಮೇಳನಾಧ್ಯಕ್ಷತೆ ವಹಿಸಿ ಮಾತನಾಡಿದರು.

'ವೇದಗಳ ಕಾಲದಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನಮಾನಗಳಿದ್ದವು. ಮಹಿಳೆಯರನ್ನು ತಮಗೆ ಸಮಾನವಾಗಿ ಪುರುಷರು ನೋಡುತ್ತಿದ್ದರು. ನಂತರದ ದಿನಗಳಲ್ಲಿ ಪುರುಷ ಪ್ರಧಾನ ಸಮಾಜ ತಲೆಯೆತ್ತಿತು. ಮಹಿಳೆಯರು ಕುಟುಂಬದೊಳಗೆ ಕಟ್ಟು-ಪಾಡುಗಳನ್ನು ಅನುಭವಿಸುತ್ತಾ ಇರಬೇಕಾಯಿತು. ಯಾವುದೇ ರೀತಿಯ ಸ್ವಾತಂತ್ರ್ಯ ಇರಲಿಲ್ಲ. ಈಗ ಮಹಿಳೆಯರು ಪುರುಷರಿಗೆ ಸಮಾನವಾಗಿ ಎಲ್ಲ ಕ್ಷೇತ್ರದಲ್ಲಿಯೂ ಶಕ್ತಿ ಸಂಪನ್ನರಾಗಿ ಬೆಳೆದಿದ್ದಾರೆ. ಇಂತಹ ಸಂದರ್ಭದಲ್ಲಿ ಮಹಿಳೆಯರು ಧೈರ್ಯವಾಗಿ ತಲೆಯೆತ್ತಿ ಓಡಾಡುವಂತಹ ವಾತಾವರಣವನ್ನು ಸರ್ಕಾರ ನಿರ್ಮಿಸಿಕೊಡಬೇಕು' ಎಂದು ಹೇಳಿದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, 'ನಾಡಿನಲ್ಲಿ ಪರಭಾಷಿಕರ ಹಾವಳಿ ಹೆಚ್ಚುತ್ತಿದೆ. ಈ ಅವಧಿಯಲ್ಲಿ ನಮ್ಮವರೇ ಹಿಂದಿ, ಇಂಗ್ಲಿಷ್ ಭಾಷೆಯ ವ್ಯಾಮೋಹಕ್ಕೆ ಒಳಗಾಗುತ್ತಿರುವುದು ಶೋಚನೀಯ. ಯುವಜನರು, ವಿದ್ಯಾರ್ಥಿಗಳಿಗೆ ಕನ್ನಡ ನಾಡು-ನುಡಿಯ ಮಹತ್ವದ ಬಗ್ಗೆ ಮನವರಿಕೆ ಮಾಡಿಸಿ, ಗೌರವ ಹೆಚ್ಚಿಸುವ ಕೆಲಸ ಮಾಡಬೇಕು' ಎಂದರು.

ಇದೇ ವೇಳೆ ಲೀಲಾ ವಾಸುದೇವ್, ಉದಯರವಿ, ಅರ್ಚನಾ ರವಿ, ಸುನಿತಾ ನವೀನ್ ಗೌಡ ಅವರಿಗೆ 'ಅನಿಕೇತನ ದತ್ತಿ ಪ್ರಶಸ್ತಿ' ಪ್ರದಾನ ಮಾಡಲಾಯಿತು.



ಸಮಾವೇಶದಲ್ಲಿ ಲೀಲಾ ವಾಸುದೇವ್ ಅವರಿಗೆ 'ಅನಿಕೇತನ ದತ್ತಿ ಪ್ರಶಸ್ತಿ'ಯನ್ನು ವೂಡೇ ಪಿ. ಕೃಷ್ಣ ಪ್ರದಾನ ಮಾಡಿದರು. (ಎಡದಿಂದ) ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನ ಅಧ್ಯಕ್ಷ ಎಸ್. ರಾಮಲಿಂಗೇಶ್ವರ (ಸಿಸಿರಾ), ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ನಿಕಟಪೂರ್ವ ಅಧ್ಯಕ್ಷ ಮಾಯಣ್ಣ, ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ್, ಸ್ನೇಹಜೀವಿ ಗೆಳೆಯರ ಸಾಹಿತ್ಯ ಬಳಗದ ಅಧ್ಯಕ್ಷ ಶಶಿಕಾಂತ ರಾವ್ ಉಪಸ್ಥಿತರಿದ್ದರು —ಪ್ರಜಾವಾಣಿ ಚಿತ್ರ

ಉದಯವಾಣಿ

ಸೋಮವಾರ, ಅಕ್ಟೋಬರ್ 7, 2024

# ‘ಮೀಸಲಾತಿ ಬಡತನ ನಿರ್ಮೂಲನೆ ಕಾರ್ಯಕ್ರಮವಲ್ಲ’

## ಕೆ.ಎನ್.ಲಿಂಗಪ್ಪ ಅವರ ‘ಮೀಸಲಾತಿಯ ಒಳಮುಖ’ ಕೃತಿ ಬಿಡುಗಡೆ ಮಾಡಿದ ಎಂಎಲ್‌ಸಿ ಬಿ.ಕೆ.ಹರಿಪ್ರಸಾದ್

**ಉದಯವಾಣಿ ಸಮಾಚಾರ**

**ಬೆಂಗಳೂರು:** ಮೀಸಲಾತಿ ಎಂಬುದು ಬಡತನ ನಿರ್ಮೂಲನೆ ಕಾರ್ಯಕ್ರಮ ಅಲ್ಲ. ಬದಲಾಗಿ ಸಮಾಜದಲ್ಲಿ ನೂರಾರು ವರ್ಷಗಳಿಂದ ತುಳಿತಕ್ಕೆ ಒಳಗಾದ ಶೋಷಿತ ಸಮುದಾಯಗಳಿಗೆ ಸಾಮಾಜಿಕ ನ್ಯಾಯ ಕಲ್ಪಿಸುವುದಾಗಿದೆ ಎಂದು ಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ) ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ನಿವೃತ್ತ ಕೆಎಎಸ್ ಅಧಿಕಾರಿ ಕೆ.ಎನ್.ಲಿಂಗಪ್ಪ ಅವರು ಬರೆದಿರುವ ‘ಮೀಸಲಾತಿಯ ಒಳಮುಖ’ ಎಂಬ ಪುಸ್ತಕ ಬಿಡುಗಡೆಗೊಳಿಸಿ ಮಾತನಾಡಿ, ಹಿಂದುಳಿದ ವರ್ಗಗಳ ಮೀಸಲಾತಿಯ ಪರ-ವಿರೋಧ ಎನ್ನುವ ಕಾಲ ಘಟ್ಟದಲ್ಲಿ ಲಿಂಗಪ್ಪ ಅವರು ರಚಿಸಿರುವ ಮೀಸಲಾತಿ ಒಳಮುಖ ಪುಸ್ತಕವು ಮರುಭೂಮಿಯಲ್ಲಿ ನೀರು ಸಿಕ್ಕಂತಿದೆ. ಸಂವಿಧಾನ, ಮೀಸಲಾತಿ ಬಗ್ಗೆ ಮಾತನಾಡುವ ಕೆಲವರು ಇದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು. ನಾವುಗಳು ಹಿಂದುಳಿದವರು, ದುರ್ಬಲರು ಎಂಬ ಮನೋಭಾವನೆ ಬೇಡ ಆದರೆ ಸಂವಿಧಾನ ಆಶಯದಂತೆ ಹಕ್ಕುಗಳನ್ನು ಪಡೆಯಲು ಎಲ್ಲ ಹಿಂದುಳಿದ ಸಮುದಾಯ ಗಳು ಸಂಘಟಿತರಾಗಬೇಕಿದೆ ಎಂದರು.



ನಿವೃತ್ತ ಕೆಎಎಸ್ ಅಧಿಕಾರಿ ಕೆ.ಎನ್.ಲಿಂಗಪ್ಪ ಅವರ ‘ಮೀಸಲಾತಿಯ ಒಳಮುಖ’ ಪುಸ್ತಕವನ್ನು ವಿಧಾನ ಪರಿಷತ್ ಸದಸ್ಯ ಬಿ.ಕೆ.ಹರಿಪ್ರಸಾದ್ ಬಿಡುಗಡೆ ಮಾಡಿದರು.

**ಸಂವಿಧಾನ ಜಾಗೃತವಾಗಲಿ:** ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಎಚ್.ಬಿಲ್ಲಪ್ಪ ಮಾತನಾಡಿ, ಜಾತಿ, ಲಿಂಗ ಬೇಧ, ಅಸಮಾನತೆ ತಾರತಮ್ಯ ನಿವಾರಣೆಗೆ ಸಂವಿಧಾನದ ಮೂಲಕ ಮೀಸಲಾತಿ ವ್ಯವಸ್ಥೆ ಜಾರಿಗೆ ತರಲಾಗಿದೆ. ಸಂವಿಧಾನವು ಎಲ್ಲ ವರ್ಗದವರು ಜೀವನ ಕಟ್ಟಿಕೊಳ್ಳಲು ಇರುವ ಕಲ್ಪವೃಕ್ಷವಿದ್ದಂತೆ. ಕೆಲವು ಹಿಂದುಳಿದ ವರ್ಗಗಳಿಗೆ ಸಾಮಾಜಿಕ ನ್ಯಾಯ ಸಿಗಬೇಕಿದೆ. ಈ ನಿಟ್ಟಿನಲ್ಲಿ ಸಮುದಾಯ ಜಾಗೃತವಾಗಬೇಕಿದೆ ಎಂದು ಸಲಹೆ ನೀಡಿದರು.

ಅಜೀಮ್ ಪ್ರೇಮ್‌ಜಿ ವಿವಿ ಪ್ರಾಧ್ಯಾಪಕ ಡಾ.ಎಂ.ನಾರಾಯಣ ಮಾತನಾಡಿದರು. ಮೀಸಲಾತಿಯ ಒಳಮುಖ ಪುಸ್ತಕದ ಮುಖಪುಟ ವಿನ್ಯಾಸ ಮಾಡಿದ ಯತೀಶ್ ಶೆಟ್ಟಿಗಾರ್ ಅವರನ್ನು ಸನ್ಮಾನಿಸಲಾಯಿತು. ಎಂಎಲ್ಸಿಗಳಾದ ಡಿ.ಟಿ.ಶ್ರೀನಿವಾಸ್, ಸಾಯಿಬಣ್ಣಾ ತಳವಾರ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೆ ಪಿ.ಕೃಷ್ಣ ಹಿಂದುಳಿದ ವರ್ಗದ ಮಾಜಿ ಅಧ್ಯಕ್ಷ ಸಿ.ಎಸ್.ದ್ವಾರಕಾನಾಥ್, ಶ್ರೀನಿವಾಸ ಆಚಾರ್ಯ, ಅಭಿರುಚಿ ಪ್ರಕಾಶನದ ಗಣೇಶ್, ಭಾನುಮತಿ ಶೆಟ್ಟಿಗಾರ್ ಉಪಸ್ಥಿತರಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ
Oct 07, 2024

# ಬುದ್ಧ, ಬಸವ, ಅಂಬೇಡ್ಕರ್ ಆಶಯಗಳನ್ನು ಪಾಲಿಸೋಣ: ಲೀಲಾ ವಾಸುದೇವ್



ಬೆಂಗಳೂರು, ಅ.6: ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಕುವೆಂಪು ಆಶಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಪ್ರಾಮಾಣಿಕವಾಗಿ ಪಾಲಿಸೋಣ ಎಂದು ನಿವೃತ್ತ ಪ್ರಾಂಶುಪಾಲೆ ಲೀಲಾ ವಾಸುದೇವ್ ಕರೆ ನೀಡಿದ್ದಾರೆ.

ರವಿವಾರ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಬುದ್ಧ-ಬಸವ-ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಹಮ್ಮಿಕೊಂಡಿದ್ದ 'ರಾಜ್ಯಮಟ್ಟದ 15ನೇ ಕನ್ನಡ ಸಾಹಿತ್ಯ, ಸಾಂಸ್ಕೃತಿಕ ಸಮಾವೇಶ-2024' ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಪ್ರಸಕ್ತ ಬುದ್ಧ, ಬಸವ, ಗಾಂಧಿ ಆಶಯಗಳನ್ನು ಸಮಾಜಕ್ಕೆ ಸಾರುವ ಸಾಂಸ್ಕೃತಿಕ ಟ್ರಸ್ಟ್‌ಗಳು ಹೆಚ್ಚಾಗಬೇಕು ಮತ್ತು ಯುವಮನಸ್ಸುಗಳು ಅವರ ಆಶಯಗಳತ್ತ ಗಮನ ಹರಿಸಬೇಕು ಎಂದು ತಿಳಿಸಿದರು.

ಗಾಂಧೀಜಿಯವರ ಆಶಯದಂತೆ ಮಹಿಳೆಯರು ಸ್ವಾವಲಂಬಿಯಾಗಿ ಧೈರ್ಯವಾಗಿ ತಲೆ ಎತ್ತಿ ಓಡಾಡುವಂತೆ ಆಗಬೇಕು. ಹೆಣ್ಣುಮಕ್ಕಳನ್ನು ಮನೆಯಿಂದ ಹೊರಗೆ ಕಳಿಸದೇ ಇದ್ದಂತಹ ಕಾಲ ಇತ್ತು. ಆದರೆ ಇದೀಗ ಸಂವಿಧಾನದಿಂದ ಮಹಿಳೆಯರಿಗೂ ಸಮಾನ ಅವಕಾಶಗಳು ಸಿಗುತ್ತಿರುವುದರಿಂದ ಹೆಣ್ಣುಮಕ್ಕಳು ಎಲ್ಲ ಕ್ಷೇತ್ರಗಳಲ್ಲಿಯೂ ಉತ್ತಮ ಸಾಧನೆ ಮಾಡುವ ಹಂತಕ್ಕೆ ತಲುಪಿದ್ದಾರೆ. ಆದ್ದರಿಂದ ಪೋಷಕರು ಯಾವುದೇ ಭೇದಭಾವ ಮಾಡದಂತೆ ಹೆಣ್ಣುಮಕ್ಕಳಿಗೆ ಉತ್ತಮ ಶಿಕ್ಷಣ ಕೊಡುವ ಪ್ರಯತ್ನ ಮಾಡಬೇಕು ಎಂದು ನುಡಿದರು.

ಕಾರ್ಯಕ್ರಮದಲ್ಲಿ ನಿವೃತ್ತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಸಮಾಜ ಸೇವಕ ಶಶಿಕಾಂತರಾವ್, ಟ್ರಸ್ಟ್‌ನ ಅಧ್ಯಕ್ಷ ಡಾ.ಎಸ್.ರಾಮಲಿಂಗೇಶ್ವರ ಸೇರಿದಂತೆ ಹಲವರು ಭಾಗವಹಿಸಿದ್ದರು.

## ‘ಮತ್ತೆ ಮತ್ತೆ ಗಾಂಧಿ’ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ

# ‘ದೇವರ ನೆನೆವಂತೆ ಗಾಂಧಿ ನೆನಪಿರಲಿ’

ಪ್ರಜಾವಾಣಿ ವಾರ್ತೆ

ಮಂಡ್ಯ: ‘ಸತ್ಯ ಮತ್ತು ಅಹಿಂಸೆ ಪಾಲಿಸಿದ ಮಹಾತ್ಮ ಗಾಂಧೀಜಿ ಅವರನ್ನ ದೇವರ ನೆನೆಸಿಕೊಳ್ಳುವ ಹಾಗೆ ಪ್ರತಿಯೊಬ್ಬ ಭಾರತೀಯನು ನೆನೆಯಬೇಕು’ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಅಭಿಪ್ರಾಯ ಪಟ್ಟರು.

ನಗರದ ಗಾಂಧಿ ಭವನದಲ್ಲಿ ಚಿತ್ರಕೂಟದಿಂದ ಭಾನುವಾರ ಆಯೋಜಿಸಿದ್ದ ‘ಮತ್ತೆ ಮತ್ತೆ ಗಾಂಧಿ’ ಮಹಾತ್ಮನ ನೆನಪಲ್ಲಿ ಹಾಡು, ಹಸೆ, ಕವಿತೆಗಳ ಜತೆ ಮಾತುಕತೆ ಎಂಬ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

‘ಪಿತಾಮಹರಾಗಿ ಸತ್ಯವಂತರಾಗಿ ಮಹಾತ್ಮ ಗಾಂಧಿ ಬದುಕಿದ್ದರು. ಗಾಂಧಿ ಒಬ್ಬ ಮಹಾನ್ ಚೇತನವಾಗಿದ್ದು ಅವರನ್ನು ಪ್ರತಿಯೊಬ್ಬರನ್ನೂ ಪ್ರೀತಿಸುತ್ತಿದ್ದರು, ಬ್ರಿಟಿಷರ ವಿರುದ್ಧ 35 ವರ್ಷಗಳ ಕಾಲ ಹೋರಾಟ ಮಾಡಿದ ಮಹಾನ್ ವ್ಯಕ್ತಿಯಾಗಿದ್ದರು, ಎಂದಿಗೂ ಅವರು ಬೇರೊಬ್ಬರನ್ನು ಟೀಕೆ ಮಾಡಿದವರಲ್ಲ ಅವರ ಆದರ್ಶವೇ ನಮಗೆ ಮಾದರಿ. ಇಡೀ ದೇಶವನ್ನೇ ಒಂದು ಕುಟುಂಬವಾಗಿ ನೋಡಿದ್ದರು’ ಎಂದು ಸ್ಮರಿಸಿದರು.

‘ಯಾರಿಂದಲೂ ಏನೂ ಬಯಸದ ಗಾಂಧಿ ನೆಲದ ಒಡಲನ್ನು ಅಪಾರ ಪ್ರೀತಿಸುತ್ತಿದ್ದರು. ಗಾಂಧಿ ಭಾಷಣಕಾರರಲ್ಲ ಆದರೂ ಲಕ್ಷಾಂತರ ಜನರು ಅವರ ಸತ್ಯ ಹಾಗೂ ಸರಳತೆಗೆ ಮಾರು ಹೋಗಿದ್ದರು. ಅವರ ದರ್ಶನ ಪಡೆಯಲು ಸಾಲುಗಟ್ಟಿ ನಿಲ್ಲುತ್ತಿದ್ದರು. ಇದಕ್ಕೆ ಕಾರಣವಿಷ್ಟೇ ಅವರು ಪಾಲಿಸಿದ ಸತ್ಯ ಮತ್ತು ಅಹಿಂಸೆ, ಇದನ್ನು ದೊಡ್ಡ ಅಸ್ತ್ರವನ್ನಾಗಿ ಬಳಸಿಕೊಂಡು ಹೋರಾಟ ನಡೆಸಿದರು’ ಎಂದು ತಿಳಿಸಿದರು.

**ಮುಖ್ಯಾಂಶಗಳು**

- ಗಾಂಧಿ ಭವನದಲ್ಲಿ ಚಿತ್ರಕೂಟ ಆಯೋಜನೆ
- ಮಹಾತ್ಮನ ನೆನಪಲ್ಲಿ ಹಾಡು, ಹಸೆ, ಕವಿತೆ
- ಕೊಪ್ಪ ಸೌಹಾರ್ದ ಸಂಘಕ್ಕೆ ಚಿತ್ರಕೂಟ ಪುರಸ್ಕಾರ

‘ಲಕ್ಷ ಲಕ್ಷ ಗಾಂಧಿಗಳು ಬೇಕು. ಅವರ ತತ್ವದ ಸಂವೇದನೆ ಬೇಕು. ಗಾಂಧೀಜಿ ಅವರ ವಿಚಾರ ದರ್ಶನದ ಮೂಲಕ ಇಂದು ಎಂದೆಂದಿಗೂ ಬದುಕಿರುತ್ತಾರೆ, ಎಲ್ಲಿವರೆಗೂ ಸತ್ಯ ಮತ್ತು ಅಹಿಂಸೆ ಭೂಮಿಯಲ್ಲಿ ಉಳಿದಿರುತ್ತದೋ ಅಲ್ಲಿಯವರೆಗೂ ಗಾಂಧಿ ಬದುಕಿರುತ್ತಾರೆ. ಜಿ.ಮಾದೇಗೌಡ ಅವರು ಭವನ ನಿರ್ಮಾಣ ಮಾಡಿ ಹೇಳಿದ್ದರು ಗಾಂಧಿ ತತ್ವವನ್ನು ಬದುಕಿನಲ್ಲಿ ರೂಢಿಸಿಕೊಳ್ಳುವ ಜನರು ಸಮಾಜದಲ್ಲಿ ಬೇಕಿದೆ ಎನ್ನುವುದನ್ನು ಹೇಳುತ್ತಿದ್ದರು’ ಎಂದು ವಿವರಿಸಿದರು.

‘ಸಾಮಾಜಿಕ ಜಾಲತಾಣದಲ್ಲಿ ಹಗುರವಾಗಿ ಗಾಂಧೀಜಿ ಅವರ ಬಗ್ಗೆ ಮಾತನಾಡುತ್ತಾ ಅಗೌರವವಾಗಿ ಕಾಣುತ್ತಿದ್ದಾರೆ, ಯುವಕರಲ್ಲಿ ತಪ್ಪು ಕಲ್ಪನೆ ಬಿತ್ತುವ ಉದ್ದೇಶದಿಂದಲೇ ಈ ಕ್ರೌರ್ಯ ಗಾಂಧೀಜಿ ಮೇಲೆ ನಡೆಸಲಾಗುತ್ತಿದೆ. ಮಾಧ್ಯಮ ಉತ್ತಮ ಮಟ್ಟಕ್ಕೆ ಸಾಗುತ್ತಿದ್ದರೆ, ಸಾಮಾಜಿಕ ಜಾಲತಾಣಗಳು ಹಳಿ ತಪ್ಪುತ್ತಿರುವಂತ ಕಾಣುತ್ತಿದೆ. ಇದಕ್ಕೆ ಕಡಿವಾಣ ಹಾಕುವುದು ಮುಖ್ಯವಾಗಬೇಕು. ಮಹಾನ್ ವ್ಯಕ್ತಿಗಳಿಗೆ ಗೌರವ ಸಿಗುವಂತೆ ನೋಡಿಕೊಳ್ಳಬೇಕು. ಗಾಂಧಿಯನ್ನು ಓದಿ ತಿಳಿದುಕೊಳ್ಳಬೇಕು’ ಎಂದು ಸಲಹೆ ನೀಡಿದರು.

ಸಾಮಾಜಿಕ ಚಿಂತಕ ಎಚ್.ಕೆ.ವಿವೇಕಾನಂದ ಉಪನ್ಯಾಸ ನೀಡಿದರು. ಇದೇ ಸಂದರ್ಭದಲ್ಲಿ ಮಹಾತ್ಮಗಾಂಧಿ ಅವರ ಕುರಿತಂತೆ ಕವಿ ಕೆ.ಪಿ.ಮೃತ್ಯುಂಜಯ ಅವರು ಬಾಪು ಮತ್ತು ಗಾಂಧಿ ಈಗ ಎಂಬ ಶೀರ್ಷಿಕೆ ಓದುವ ಮೂಲಕ ಹಾಗೂ ನಂತರ ಮಲ್ಲಿಕಾರ್ಜುನ ಮಹಾಮನೆ ಇತರ ಕವಿಗಳು ಕವಿತೆ ವಾಚನ ಮಾಡಿದರು. ಕೊಪ್ಪ ಸೌಹಾರ್ದ ಸಂಘಕ್ಕೆ ಚಿತ್ರಕೂಟ ಪುರಸ್ಕಾರ ನೀಡಲಾಯಿತು.

ಕಾರ್ಯಕ್ರಮದಲ್ಲಿ ರಂಗಾಯಣ ಮಾಜಿ ನಿರ್ದೇಶಕ ಬಿ.ಸಿ. ಬಸವಲಿಂಗಯ್ಯ, ಅಂಕಣಕಾರ ಬಿ.ಚಂದ್ರೇಗೌಡ, ನಾಟಕ ಅಕಾಡೆಮಿ ಮಾಜಿ ಸದಸ್ಯ ಮಲ್ಲಿಕಾರ್ಜುನ ಮಹಾಮನೆ, ಈ ದಿ ನ . ಕಾ ಮ್ ವಿಭಾಗ ಮುಖ್ಯಸ್ಥ ಬಿ.ಸಿ.ಬಸವರಾಜು, ಸಹ ಪ್ರಾಧ್ಯಾಪಕಿ ಶಿಲ್ಪಶ್ರೀ ಹರವು ಭಾಗವಹಿಸಿದ್ದರು.




ಮಂಡ್ಯ ನಗರದ ಗಾಂಧಿ ಭವನದಲ್ಲಿ ಆಯೋಜಿಸಿದ್ದ ‘ಮತ್ತೆ ಮತ್ತೆ ಗಾಂಧಿ’ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ರಂಗಾಯಣ ಮಾಜಿ ನಿರ್ದೇಶಕ ಬಿ.ಸಿ.ಬಸವಲಿಂಗಯ್ಯ, ಅಂಕಣಕಾರ ಬಿ.ಚಂದ್ರೇಗೌಡ, ನಾಟಕ ಅಕಾಡೆಮಿ ಮಾಜಿ ಸದಸ್ಯ ಮಲ್ಲಿಕಾರ್ಜುನ ಮಹಾಮನೆ ಇತರರಿದ್ದಾರೆ

ಕನ್ನಡಪ್ರಭ

Oct 07, 2024

# ಎಲ್ಲ ವರ್ಗ ಒಪ್ಪುವ ರಾಷ್ಟ್ರನಾಯಕ ಅಗತ್ಯ

## ಜಾತ್ಯತೀತತೆ, ಸಮಾಜವಾದ ನಮ್ಮ ಆದರ್ಶವಾಗಬೇಕು: ವೂಡೇ ಪಿ.ಕೃಷ್ಣ | ಮತ್ತೆ ಮತ್ತೆ ಗಾಂಧಿ ಕಾರ್ಯಕ್ರಮ ಉದ್ಘಾಟನೆ

• ಕನ್ನಡಪ್ರಭ ವಾರ್ತೆ ಮಂಡ್ಯ

ಜಾತ್ಯತೀತತೆ ಮತ್ತು ಸಮಾಜವಾದ ನಮ್ಮ ಆದರ್ಶಗಳಾದಾಗ ಗಾಂಧೀಜಿಗೆ ನಿಜವಾದ ಗೌರವ ನೀಡಿದಂತಾಗುತ್ತದೆ. ಇಂದು ಬೇಕಾದಷ್ಟು ನಾಯಕರು, ರಾಜಕೀಯ ನಾಯಕರಿದ್ದಾರೆ. ಆದರೆ, ಎಲ್ಲ ವರ್ಗಗಳಿಗೆ ಒಪ್ಪುವಂತಹ ಒಬ್ಬ ರಾಷ್ಟ್ರನಾಯಕ ಬೇಕಾಗಿದೆ. ಇದು ಪ್ರಸ್ತುತ ಹೆಚ್ಚು ಅಗತ್ಯವಾಗಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ, ನಾಡೋಜ ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ನಗರದ ಗಾಂಧಿ ಭವನದಲ್ಲಿ ಚಿತ್ರಕೂಟ ವತಿಯಿಂದ ಮತ್ತೆ ಮತ್ತೆ ಗಾಂಧಿ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ಗಾಂಧೀಜಿ ಅವರು ಸಮುದಾಯಿಕ ಸಮಾಜ ಮತ್ತು ಅಹಿಂಸಾತ್ಮಕ ಸಮಾಜ ನಿರ್ಮಾಣದ ಪರಿಕಲ್ಪನೆಯನ್ನು ಗಾಂಧಿ ಹೊಂದಿದ್ದರು. ಆದರೆ, ಇಂದು ಆ ಎರಡೂ ತತ್ವಗಳಿಗೆ ಧಕ್ಕೆಯಾಗುವ ರೀತಿಯಲ್ಲಿ ಬಿತ್ತರಿಸಲಾಗುತ್ತಿದೆ. ಪ್ರಸುತ ದಿನಗಳಲ್ಲಿ ಸಮಾಜ, ಧರ್ಮ, ಮತಗಳ ನಡುವೆ ಕೆಟ್ಟ ಭಾವನೆ ಬರುವಂತಹ ಬೆಳವಣಿಗೆಗಳು ನಡೆಯುತ್ತಿದೆ. ಇದು ದೇಶಕ್ಕೆ ಅಪಾಯಕಾರಿ ಎಂದು ಆತಂಕ ವ್ಯಕ್ತಪಡಿಸಿದರು.

ಗಾಂಧಿಯವರು ಪರಿಕಲ್ಪನೆಯನ್ನು ರಾಷ್ಟ್ರಕವಿ ಕುವೆಂಪು ಅವರು ನಾಡಗೀತೆಯಲ್ಲಿ ಸರ್ವಜನಾಂಗದ ಶಾಂತಿಯ ತೋಟ ಎಂದು ಬಣ್ಣಿಸಿದ್ದಾರೆ. ಗಾಂಧಿ ಬದುಕಿನ ಸಂದೇಶವೇ ಸರ್ವಜನಾಂಗದ ಶಾಂತಿಯ ತೋಟವಾಗಿತ್ತು ಎಂದರು.



ಗಾಂಧಿ ಭವನದಲ್ಲಿ ಚಿತ್ರಕೂಟ ವತಿಯಿಂದ ಮತ್ತೆ ಮತ್ತೆ ಗಾಂಧಿ ಕಾರ್ಯಕ್ರಮ ಉದ್ಘಾಟಿಸಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ, ನಾಡೋಜ ವೂಡೇ ಪಿ.ಕೃಷ್ಣ ಮಾತನಾಡಿದರು.

ಜಾತ್ಯತೀತತೆ ಮತ್ತು ಸಮಾಜವಾದ ನಮ್ಮ ಆದರ್ಶಗಳಾದಾಗ ಗಾಂಧೀಜಿಗೆ ನಿಜವಾದ ಗೌರವ ನೀಡಿದಂತಾಗುತ್ತದೆ. ಇಂದು ಬೇಕಾದಷ್ಟು ನಾಯಕರು, ರಾಜಕೀಯ ನಾಯಕರಿದ್ದಾರೆ. ಆದರೆ, ಎಲ್ಲ ವರ್ಗಗಳಿಗೆ ಒಪ್ಪುವಂತಹ ಒಬ್ಬ ರಾಷ್ಟ್ರನಾಯಕ ಬೇಕಾಗಿದೆ. ಇದು ಪ್ರಸ್ತುತ ಹೆಚ್ಚು ಅಗತ್ಯವಾಗಿದೆ.

ಇಂದಿನ ಯುವಕರಿಗೆ ಗಾಂಧಿ ಹೇಗೆ ಸತ್ತರು ಎಂಬ ವಿಚಾರ ಬೇಡ. ಹೇಗೆ ಬದುಕಿದರು ಎಂಬುದನ್ನು ತಿಳಿದುಕೊಳ್ಳಬೇಕಿದೆ. ಅದರಲ್ಲೇ ದೊಡ್ಡ ಶಕ್ತಿ ಇದೆ. ಸಕಾರಾತ್ಮಕ ಚಿಂತನೆಗಳಿವೆ. ಗಾಂಧೀಜಿ ಅವರಿಗೆ ಯಾರೂ ಸಹ ಸಾಟಿಯೇ ಇಲ್ಲ, ಅಂತಹ ಅದ್ಭುತ ವ್ಯಕ್ತಿ. ಗಾಂಧಿ ಹುಟ್ಟುವುದಕ್ಕೆ ಮುಂಚೆ ಇನ್ನೊಬ್ಬ ಗಾಂಧಿ ಇರಲಿಲ್ಲ. ಎಷ್ಟೋ ರಾಷ್ಟ್ರನಾಯಕರು ಆಗಿಹೋದರೂ ಗಾಂಧಿ ಮುಂಚೆಯೂ ಆಗಿಹೋದರು. ಆದರೆ, ನನ್ನ ಜೀವನವೇ ನನ್ನ ಸಂದೇಶ ಎಂದು ಹೇಳುವ ನೈತಿಕ ಸ್ಥೈರ್ಯ ಯಾರಿಗೂ ಇರಲಿಲ್ಲ ಎಂದರು.

ಗಾಂಧಿ ಅವರನ್ನು ನಾವು ಸಮುದಾಯಿಕ ಸಮಾಜ, ಅಹಿಂಸಾತ್ಮಕ ಸಮಾಜ ನಿರ್ಮಾಣಕ್ಕೆ ಹೋರಾಟ ನೀಡಿದರು. ಹಾಗಾಗಿ ಇಂತಹ ತತ್ವಗಳಲ್ಲಿ ಗಾಂಧೀಜಿಯನ್ನು ನೋಡಬೇಕಿದೆ. ಗಾಂಧಿ ಕೆಲಸ ಮಾಡಿದ ಕ್ಷೇತ್ರಗಳನ್ನು ಜೀವಂತವಾಗಿಡಬೇಕಿದೆ. ಶ್ರೀಸಾಮಾನ್ಯನಿಗೆ ಶಕ್ತಿ ತುಂಬಿದ್ದರೆ ಅದು ಗಾಂಧೀಜಿ ಮಾತ್ರ. ಯಾವುದೇ ಯೋಜನೆ, ಕೆಲಸವನ್ನು ಕೈಗೊಂಡರೂ ಸಮಾಜದ ಕಟ್ಟಕಡೆಯ ವ್ಯಕ್ತಿ, ರೈತ, ಬಡವನಿಗೆ ತಲುಪುವಂತಿದ್ದರೆ ಮಾತ್ರ ಮೊದಲು ಮಾಡುವಂತೆ ಹೇಳಿದವರು ಎಂದರು.

ರಂಗಾಯಣ ಮಾಜಿ ನಿರ್ದೇಶಕ ಸಿ. ಬಸವಲಿಂಗಯ್ಯ, ಅಂಕಣಕಾರ ಬಿ.ಚಂದ್ರೇಗೌಡ, ನಾಟಕ ಅಕಾಡೆಮಿ ಮಾಜಿ ಸದಸ್ಯ ಮಲ್ಲಿಕಾರ್ಜುನ ಮಹಾಮನೆ ಪಾಲ್ಗೊಂಡಿದ್ದರು. ಸಾಮಾಜಿಕ ಚಿಂತಕ

> ಗಾಂಧಿ ಅವರ ಬಗ್ಗೆ ತುಂಬಾ ಜನ ಕೆಟ್ಟ ಕೆಟ್ಟ ಅಭಿಪ್ರಾಯ ಬಿಂಬಿಸುತ್ತಿದ್ದಾರೆ. ಗಾಂಧೀಜಿ ಅವರು ಸ್ವಾತಂತ್ರ್ಯ ನನ್ನ ಕಿರೀಟ, ವಿಭಜನೆ ಎನ್ನುವುದು ಶಿಲುಬೆಗೆ ಸಮಾನ ಎಂದು ಹೇಳಿದ್ದರು. ಗಾಂಧೀಜಿಯವರೇ ದೇಶದ ವಿಭಜನೆಗೆ ಕಾರಣ ಎಂಬ ತಪ್ಪು ಮಾಹಿತಿ ಪ್ರಚುರಪಡಿಸಲಾಗುತ್ತಿದೆ. ಗಾಂಧಿ ಸಾಹಿತ್ಯವನ್ನು ಶಿಕ್ಷಕರೂ ಕೂಡ ವಿಪುಲವಾಗಿ ಓದಿಕೊಳ್ಳಬೇಕು. ಯುವಕರು ಎತ್ತುವ ಪ್ರಶ್ನೆಗಳಿಗೆ ತಕ್ಷಣವೇ ಉತ್ತರ ನೀಡುವಂತಹ ಶಕ್ತಿಯನ್ನು ಸಂಪಾದಿಸಬೇಕು. ಆಗ ಮಾತ್ರ ಮನಸ್ಸುಗಳನ್ನು ಕಟ್ಟಲು ಸಾಧ್ಯ.
>
> • ವೂಡೇ ಪಿ.ಕೃಷ್ಣ ನಾಡೋಜ

ಎಚ್.ಕೆ.ವಿವೇಕಾನಂದ, ಡಾ.ಬಿ.ಸಿ. ಬಸವರಾಜು, ಸಹ ಪ್ರಾಧ್ಯಾಪಕಿ ಡಾ.ಶಿಲ್ಪಶ್ರೀ ವಿಶೇಷ ಉಪನ್ಯಾಸ ನೀಡಿದರು. ಸ್ಥಳೀಯ ಗಾಯಕರಿಂದ ಗೀತಗಾಯನ, ನಾರಾಯಣ ತಿರುಮಲಾ ಪುರ, ಕೆ.ಪಿ. ಮೃತ್ಯುಂಜಯ, ಎಂ.ಜಿ.ವಿನಯ್‌ಕುಮಾರ್, ಸದ್ದಾಂ, ರಂಜಿತಾ ದರ್ಶಿನಿ ಅವರಿಂದ ಕವಿತಾವಾಚನ ನಡೆಯಿತು. ಕೊಪ್ಪ ಗ್ರಾಮದ ಸೌಹಾರ್ದ ಸಂಘಕ್ಕೆ ಚಿತ್ರಕೂಟ ಪುರಸ್ಕಾರ ನೀಡಿ ಗೌರವಿಸಲಾಯಿತು.

ಕನ್ನಡಪ್ರಭ

Oct 06, 2024

# 21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ ಕುರಿತ ದುಂಡುಮೇಜಿನ ಸಭೆ

## 9 ರಂದು ಶ್ರೀ ನಟರಾಜ ಮಹಿಳಾ ಕಾಲೇಜಿನಿಂದ ಕಾರ್ಯಕ್ರಮ, ಅರಿವಿನ ಜಾಥಾ

• **ಕನ್ನಡಪ್ರಭ ವಾರ್ತೆ** ಮೈಸೂರು

ಶ್ರೀನಟರಾಜ ಪ್ರತಿಷ್ಠಾನ, ಶ್ರೀನಟರಾಜ ಮಹಿಳಾ ವಸತಿ ಪ್ರಥಮ ದರ್ಜೆ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗವು ಅ.9 ರಂದು ಬೆಳಗ್ಗೆ 9ಕ್ಕೆ ನ್ಯಾಯಾಲಯದ ಎದುರಿನ ಗಾಂಧಿ ಪುತ್ಥಳಿ ಬಳಿಯಿಂದ 21ನೇ ಶತಮಾನದಲ್ಲಿ ಗಾಂಧೀಜಿ ಅರಿವು ಜಾಥಾ ಏರ್ಪಡಿಸಿದೆ .ಗಾಂಧಿ ಪುತ್ಥಳಿಗೆ ಹೊಸಮಠಾಧ್ಯಕ್ಷ ಶ್ರೀ ಚಿದಾನಂದ ಸ್ವಾಮೀಜಿ ಮಾಲಾರ್ಪಣೆ ಮಾಡುವರು. 3ನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶೆ ಜೆ..ಸಿ. ಭಾಗ್ಯ ಜಾಥಾ ಉದ್ಘಾಟಿಸುವರು. ಕೃಷ್ಣರಾಜ ಉಪ ವಿಭಾಗದ ಎಸಿಪಿ ಎಚ್.ಬಿ. ರಮೇಶ್ಕುಮಾರ್‌ಮುಖ್ಯ ಅತಿಥಿಯಾಗಿರುವರು. ಬೆಳಗ್ಗೆ 10.30ಕ್ಕೆ ನಟರಾಜ ಸಭಾಭವನದಲ್ಲಿ ಶ್ರೀ ಚಿದಾನಂದ ಸ್ವಾಮೀಜಿ ಸಾನ್ನಿಧ್ಯದಲ್ಲಿ 21ನೇ ಶತಮಾನದಲ್ಲಿ ಗಾಂಧೀಜಿ ರಾಜಕೀಯ ನಿಲುವುಗಳ ಪ್ರಸ್ತುತತೆ ಕುರಿತ ಚಿಂತನ-ಮಂಥನ ದುಂಡು ಮೇಜಿನ ಸಭೆ ನಡೆಯಲಿದ್ದು, ವಿಧಾನ ಪರಿಷತ್ ಸಭಾಪತಿ ಬಸವರಾಜ ಎಸ್. ಹೊರಟ್ಟಿ ಉದ್ಘಾಟಿಸುವರು. ಹಿರಿಯ ಗಾಂಧಿ ಮಾರ್ಗಿ ವೈ.ಸಿ. ರೇವಣ್ಣ ಗಾಂಧಿ ಭಾವಚಿತ್ರಕ್ಕೆ ಪುಷ್ಪಾರ್ಚನೆ ಮಾಡುವರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಪ್ರೊಡೇ ಪಿ. ಕೃಷ್ಣ ವಿಚಾರ ಮಂಡಿಸುವರು. ಶಾಸಕರಾದ ಜಿ.ಟಿ. ದೇವೇಗೌಡ, ಟಿ.ಎಸ್. ಶ್ರೀವತ್ಸ, ಎಚ್.ಎಂ. ಗಣೇಶಪ್ರಸಾದ್ ಮುಖ್ಯ ಅತಿಥಿಗಳಾಗಿರುವರು .ಶ್ರೀ ನಟರಾಜ ಪ್ರತಿಷ್ಠಾನದ ವಿಶೇಷಾಧಿಕಾರಿ ಪ್ರೊ.ಎಸ್. ಶಿವರಾಜಪ್ಪ ಅಧ್ಯಕ್ಷತೆ ವಹಿಸುವರು.



ಹಿರಿಯಪತ್ರಕರ್ತರಾದಅಂಶಿಪ್ರಸನ್ನಕುಮಾರ್, ಎಂ.ಆರ್. ಸತ್ಯನಾರಾಯಣ, ಕೆ. ನರಸಿಂಹಮೂರ್ತಿ, ಮೈಸೂರು ವಕೀಲರ ಸಂಘದ ಅಧ್ಯಕ್ಷ ಎಸ್. ಲೋಕೇಶ್, ಕಾಲೇಜಿನ ಪ್ರಾಂಶುಪಾಲೆ ಡಾ.ಎಂ. ಶಾರದಾ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥೆ ಎಚ್.ಎ. ಪೂರ್ಣಿಮಾ, ಸಹಾಯಕ ಪ್ರಾಧ್ಯಾಪಕಿ ಸಿ.ಎಸ್. ಸರ್ಕಾರಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಡಾ.ಜೆ.ಬಿ. ವಿಶ್ವನಾಥಯ್ಯ ಉಪಸ್ಥಿತರಿರುವರು.

ಪ್ರಜಾವಾಣಿ

ಗುರುವಾರ • ಅಕ್ಟೋಬರ್ 3, 2024

## ವಿಶ್ವ ಅಹಿಂಸಾ ದಿನಾಚರಣೆಯಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ

# ಗಾಂಧಿಭವನ ನಿರ್ವಹಣೆಗೆ ಅನುದಾನ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಜಿಲ್ಲೆಗಳ ಗಾಂಧಿಭವನಗಳ ನಿರ್ವಹಣೆಗೆ ಅನುದಾನ ಬಿಡುಗಡೆ ಮಾಡಲಾಗುವುದು' ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಗಾಂಧಿ ಜಯಂತಿ ಪ್ರಯುಕ್ತ ಬುಧವಾರ ಹಮ್ಮಿಕೊಂಡಿದ್ದ ವಿಶ್ವ ಅಹಿಂಸಾ ದಿನ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಹಿಂದಿನ ಬಾರಿ ಮುಖ್ಯಮಂತ್ರಿಯಾಗಿದ್ದಾಗ ಆಗ ಇದ್ದ 30 ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಿಸಲು ₹ 90 ಕೋಟಿ ಅನುದಾನ ಬಿಡುಗಡೆ ಮಾಡಿದ್ದೆ. ಹಲವು ಜಿಲ್ಲೆಗಳಲ್ಲಿ ಭವನ ನಿರ್ಮಾಣವಾಗಿದೆ. ಜಾಗದ ಸಮಸ್ಯೆ ಇರುವಲ್ಲಿ ಇನ್ನು ನಿರ್ಮಾಣಗೊಳ್ಳಲಿದೆ. ಅಲ್ಲದೇ ಈಗ ಜಿಲ್ಲೆಗಳ ಸಂಖ್ಯೆ ಹೆಚ್ಚಿದ್ದು ಅಲ್ಲಿಯೂ ಗಾಂಧಿಭವನ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು. ಜೊತೆಗೆ ಅವೆಲ್ಲ ನಿರ್ವಹಣೆ ಇಲ್ಲದೇ ನಿಷ್ಕ್ರಿಯವಾಗದಂತೆ ನೋಡಿಕೊಳ್ಳಲಾಗುವುದು' ಎಂದರು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್‌.ಕೆ. ಪಾಟೀಲ ಮಾತನಾಡಿ, 'ರಾಜ್ಯದಲ್ಲಿ ಗಾಂಧೀಜಿ ಸಂಚರಿಸಿದ ಪ್ರದೇಶಗಳಲ್ಲಿ ಸ್ಮಾರಕ ನಿರ್ಮಿಸಲಾಗುವುದು. ಮಹಾತ್ಮ ಗಾಂಧೀಜಿ ಅವರು 1924ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಈ ಅಧಿವೇಶನಕ್ಕೆ ನೂರು ವರ್ಷ ತುಂಬಿರುವ ನೆನಪಿಗಾಗಿ ಒಂದು ವರ್ಷ ಶತಾಬ್ದಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುವುದು. ಅದಕ್ಕಾಗಿ ₹ 25 ಕೋಟಿ ಬಿಡುಗಡೆ ಮಾಡಲಾಗಿದೆ' ಎಂದರು.

'ಗಾಂಧೀಜಿಯನ್ನು ಜಗತ್ತಿನ ನಾಯಕ ಎಂದು ಗುರುತಿಸುವವರು ವಿಶ್ವದಾದ್ಯಂತ ಇದ್ದಾರೆ. ಗಾಂಧೀಜಿಯ ಫೋಟೊಗೆ ಗುಂಡಿಕ್ಕುವ ಕೀಳು ಮನಸ್ಸಿನ ಜನರು ನಮ್ಮ ದೇಶದಲ್ಲಿದ್ದಾರೆ' ಎಂದು ವಿಷಾದಿಸಿದರು. ನಟರಾಜ್ ಹುಳಿಯಾರ್ ಅವರ 'ಎಲ್ಲರ ಗಾಂಧೀ' ಕೃತಿಗೆ ಜಯಶ್ರೀ ದತ್ತಿ ಪ್ರಶಸ್ತಿ ಪ್ರದಾನ ಮಾಡಲಾಯಿತು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ರಾಷ್ಟ್ರೀಯ ಸೇವಾ ಯೋಜನೆ (ಎನ್‌ಎಸ್‌ಎಸ್) ರಾಜ್ಯ ಅಧಿಕಾರಿ ಪ್ರತಾಪ್ ಲಿಂಗಯ್ಯ, ಎನ್‌ಎಸ್‌ಎಸ್ ಪ್ರಾದೇಶಿಕ ಕಚೇರಿ ನಿರ್ದೇಶಕ ಕಾರ್ತಿಕೇಯನ್, ಗಾಂಧಿ ಸ್ಮಾರಕ ಭವನದ ಎಂ.ಸಿ. ನರೇಂದ್ರ, ಎನ್‌.ಆರ್. ವಿಶುಕುಮಾರ್, ಜಿ.ಬಿ. ಶಿವರಾಜ್ ಭಾಗವಹಿಸಿದ್ದರು.

### ಅಂತರ್ಜಾತಿ ವಿವಾಹ

ಗಾಂಧಿಭವನದ ಸಂಯೋಜಕರಾಗಿರುವ ತನುಜ್ ಆರಾಧ್ಯ ಮತ್ತು ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಯಶೋದಾ ಅವರು ಗಾಂಧಿಜಯಂತಿ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಸಮ್ಮುಖದಲ್ಲಿ ಖಾದಿ ಹಾರ ಬದಲಾಯಿಸಿಕೊಂಡು ಸರಳ ವಿವಾಹವಾದರು. ಈ ಅಂತರ್ಜಾತಿ ವಿವಾಹಕ್ಕೆ ಗಣ್ಯರು ಮೆಚ್ಚುಗೆ ವ್ಯಕ್ತಪಡಿಸಿ ಹರಸಿದರು.

ಕನ್ನಡಪ್ರಭ ಗುರುವಾರ 3.10.2024

# ಗಾಂಧೀಜಿ ವಿಚಾರಧಾರೆ ಕೊಲ್ಲಲು ಸಾಧ್ಯವಿಲ್ಲ: ಸಿಎಂ

## ಕೇವಲ ಭಾಷಣದಿಂದ ಮಹಾತ್ಮಗಾಂಧಿ ಮತ್ತು ಅಂಬೇಡ್ಕರ್ ಅವರ ಆಶಯಗಳು ಎಂದೂ ಈಡೇರಲ್ಲ: ಸಿದ್ದರಾಮಯ್ಯ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರನ್ನು ಕೊಂದಿರಬಹುದು. ಆದರೆ ಅವರ ವಿಚಾರಧಾರೆ, ಸತ್ಯ, ಅಹಿಂಸೆಯನ್ನು ಕೊಲ್ಲಲು ಸಾಧ್ಯವಿಲ್ಲ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಪ್ರತಿಪಾದಿಸಿದರು.

ಗಾಂಧಿ ಭವನದಲ್ಲಿ ಗಾಂಧೀ ಜಯಂತಿ ಅಂಗವಾಗಿ ಆಯೋಜಿಸಿದ್ದ ವಿಶ್ವ ಅಹಿಂಸಾ ದಿನಾಚರಣೆ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀಜಿಯವರನ್ನು ಕೊಂದಿರಬಹುದು. ಆದರೆ ಅವರ ವಿಚಾರಧಾರೆ, ಸತ್ಯ, ಅಹಿಂಸೆಯನ್ನು ಕೊಲ್ಲಲು ಸಾಧ್ಯವಿಲ್ಲ. ಗಾಂಧೀಜಿಯವರು ದೇಶಕ್ಕೆ ಅಹಿಂಸಾ ಮಾರ್ಗದಲ್ಲಿ ಸ್ವಾತಂತ್ರ್ಯ ತಂದುಕೊಟ್ಟರು. ಇಂದು ನಾವು ಸ್ವಾತಂತ್ರ್ಯದ ಗಾಳಿ ಸೇವಿಸುತ್ತಿದ್ದೇವೆ ಎಂದರೆ ಇದಕ್ಕೆ ಗಾಂಧೀಜಿ ಸೇರಿದಂತೆ ಹಲವರ ಶ್ರಮ ಕಾರಣವಾಗಿದೆ ಎಂದು ಅಭಿಪ್ರಾಯಪಟ್ಟರು.

ಕೇವಲ ಭಾಷಣದಿಂದ ಮಹಾತ್ಮಗಾಂಧಿ ಮತ್ತು ಅಂಬೇಡ್ಕರ್‌ಅವರ ಆಶಯಗಳು ಈಡೇರಲ್ಲ, ಇವರ ಬದುಕಿನ ಮೌಲ್ಯ ಮತ್ತು ಸಂದೇಶಗಳನ್ನು ಅಳವಡಿಸಿಕೊಳ್ಳಬೇಕು. ಲಾಲ್ ಬಹದ್ದೂರ್‌ಶಾಸ್ತ್ರಿ ಅವರು ಅತ್ಯಂತ ಪ್ರಾಮಾಣಿಕ ನಾಯಕರಾಗಿದ್ದರು. ನಾನು ಪ್ರಾಮಾಣಿಕತೆ ಬಗ್ಗೆ ಉದ್ದುದ್ದ ಭಾಷಣ ಮಾಡಲು ಹೋಗುವುದಿಲ್ಲ. ಇವರು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯುವುದೇ ನಾವು ಈ ಮಹಾತ್ಮರಿಗೆ ಸಲ್ಲಿಸುವ ಗೌರವಾಗಿದೆ ಎಂದು ತಿಳಿಸಿದರು.

ಗಾಂಧೀಜಿಯವರು ಭಾರತಕ್ಕೆ ಮಾತ್ರ ನಾಯಕರಲ್ಲ, ಪ್ರಪಂಚಕ್ಕೇ ನಾಯಕರು ಎಂದು ಅಮೆರಿಕದ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಹೇಳಿಕೆ ನೀಡಿದ್ದಾರೆ. ಅಸ್ಪೃಶ್ಯತೆ ನಿವಾರಣೆಯಾಗಿ ಸಮ ಸಮಾಜ ನಿರ್ಮಾಣವಾಗಬೇಕು. ನಮ್ಮ ಸರ್ಕಾರ ಈ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ: ಪ್ರತಿ ಜಿಲ್ಲೆಯಲ್ಲಿ ಗಾಂಧಿ ಭವನ ನಿರ್ಮಿಸಲು ₹90 ಕೋಟಿ ಅನುದಾನ ಬಿಡುಗಡೆ ಮಾಡಲಾಗಿತ್ತು. ಸೂಕ್ತ ಜಾಗ ಸಿಗದಿರುವ ಜಿಲ್ಲೆಗಳಲ್ಲಿ ಭವನ ನಿರ್ಮಾಣವಾಗಿಲ್ಲ. ನಿರ್ಮಾಣ ಕಾರ್ಯಕ್ಕೆ ಶೀಘ್ರ, ಚಾಲನೆ ನೀಡಲಾಗುವುದು ಎಂದು ಭರವಸೆ ನೀಡಿದರು.

'ಎಲ್ಲರ ಗಾಂಧೀ' ಕೃತಿಯ ಲೇಖಕ ಡಾ। ನಟರಾಜ್ ಹುಳಿಯಾರ್ ಅವರಿಗೆ ಇದೇ ಸಂದರ್ಭದಲ್ಲಿ ಜಯಶ್ರೀ ದತ್ತಿ ಪುರಸ್ಕಾರ ಪ್ರದಾನ ಮಾಡಲಾಯಿತು. ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಗಾಂಧಿ ಭವನದ ಕಾರ್ಯದರ್ಶಿ ವಿಶುಕುಮಾರ್ ಉಪಸ್ಥಿತರಿದ್ದರು.



ಲೇಖಕ ನಟರಾಜ್ ಹುಳಿಯಾರ್‌ಗೆ ಜಯಶ್ರೀ ದತ್ತಿ ಪ್ರಶಸ್ತಿ ಪ್ರದಾನ

### 50 ಕಡೆ ಗಾಂಧಿ ಸ್ಮಾರಕ ನಿರ್ಮಾಣ

ಮಹಾತ್ಮ ಗಾಂಧೀಜಿಯವರು ರಾಜ್ಯದ 50 ಸ್ಥಳಗಳಲ್ಲಿ ಸಂಚರಿಸಿದ್ದು, ಈ ಸ್ಥಳಗಳಲ್ಲಿ ಸ್ಮಾರಕ ನಿರ್ಮಾಣ ಮಾಡಲಾಗುವುದು ಎಂದು ಪ್ರವಾಸೋದ್ಯಮ ಸಚಿವ ಎಚ್.ಕೆ.ಪಾಟೀಲ್ ತಿಳಿಸಿದರು. 'ಗಾಂಧೀಜಿಯವರನ್ನು ಪಡೆದಿರುವ ಭಾರತೀಯರೇ ಪುಣ್ಯವಂತರು' ಎಂದು ದಕ್ಷಿಣ ಆಫ್ರಿಕಾದ ಚಿಂತಕರು ಹೇಳಿದ್ದಾರೆ. ಗಾಂಧೀಜಿಯವರು ರಾಜ್ಯದಲ್ಲಿ ಎಲ್ಲೆಲ್ಲಿ ಸಭೆ ನಡೆಸಿದ್ದರು, ವಾಸ್ತವ್ಯ ಹೂಡಿದ್ದರು ಅಲ್ಲಿ ಸ್ಮಾರಕ ನಿರ್ಮಾಣ ಮಾಡಿ ಯುವ ಪೀಳಿಗೆ ಗಾಂಧೀಜಿಯವರ ತತ್ವ ಸಿದ್ಧಾಂತಗಳನ್ನು ತಲುಪಿಸುವ ಕಾರ್ಯ ಮಾಡಲಾಗುವುದು ಎಂದು ಸ್ಪಷ್ಟಪಡಿಸಿದರು.



ಅಂತರ್ಜಾತಿ ವಿವಾಹವಾದ ತನುಜ್, ಯಶೋಧಾಗೆ ಶುಭ ಕೋರಿದ ಸಿಎಂ.

### ಅಂತರ್ಜಾತಿ ವಿವಾಹಕ್ಕೆ ವೇದಿಕೆ

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮವು ಅಂತರ್ಜಾತಿ ವಿವಾಹಕ್ಕೆ ವೇದಿಕೆಯಾಯಿತು. ಮುಖ್ಯಮಂತ್ರಿ ಸಿದ್ದರಾಮಯ್ಯ ಅವರ ಸಮ್ಮುಖದಲ್ಲಿ ಜೋಡಿಯೊಂದು ಸರಳವಾಗಿ ವಿವಾಹವಾಗಿ ದಾಂಪತ್ಯ ಜೀವನಕ್ಕೆ ಕಾಲಿರಿಸಿತು. ಗಾಂಧಿ ಭವನದಲ್ಲಿ ಸಂಯೋಜನಾಧಿಕಾರಿ ಆಗಿರುವ ಲಿಂಗಾಯತ ಸಮುದಾಯದ ಟಿ.ಎಸ್.ತನುಜ್ ಅವರು ಕುರುಬ ಸಮುದಾಯಕ್ಕೆ ಸೇರಿದ ಎ.ಎಂ.ಯಶೋಧಾ ಅವರನ್ನು ಸರಳವಾಗಿ ವಿವಾಹವಾದರು. ನೂತನ ಜೋಡಿಗೆ ಸಿದ್ದರಾಮಯ್ಯ ಅವರು ಶುಭ ಕೋರಿದರು.

ವಿಜಯ ಕರ್ನಾಟಕ VK

ಗುರುವಾರ,3 ಅಕ್ಟೋಬರ್ 2024,
ಬೆಂಗಳೂರು

# ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ

## ವಿಶ್ವ ಅಹಿಂಸಾ ದಿನ ಕಾರ್ಯಕ್ರಮ ಉದ್ಘಾಟಿಸಿ ಮುಖ್ಯಮಂತ್ರಿ ಸಿದ್ದರಾಮಯ್ಯ ಭರವಸೆ



ಸಾಹಿತಿ ನಟರಾಜ್ ಹುಳಿಯಾರ್ ಅವರಿಗೆ ಜಯಶ್ರೀ ದತ್ತಿ ಪ್ರಶಸ್ತಿ ಪ್ರದಾನ.



ಕೆಪಿಸಿಸಿ ಕಚೇರಿಯಲ್ಲಿ ಗಾಂಧಿ ಭಾವಚಿತ್ರಕ್ಕೆ ಸಿಎಂ. ಸಿದ್ದರಾಮಯ್ಯ , ಡಿಕೆಶಿ ಪುಷ್ಪನಮನ

▪ ವಿಕ ಸುದ್ದಿಲೋಕ ಬೆಂಗಳೂರು

''ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಮತ್ತು ಅವುಗಳ ನಿರ್ವಹಣೆಗೆ ಅನುದಾನ ನೀಡಲಾಗುವುದು,'' ಎಂದು ಸಿಎಂ ಸಿದ್ದರಾಮಯ್ಯ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬುಧವಾರ ಗಾಂಧಿ ಜಯಂತಿ ಪ್ರಯುಕ್ತ ಹಮ್ಮಿಕೊಂಡಿದ್ದ ವಿಶ್ವ ಅಹಿಂಸಾ ದಿನ ಕಾರ್ಯಕ್ರಮ ಉದ್ಘಾಟಿಸಿ,'' ಹಿಂದಿನ ಬಾರಿ ಮುಖ್ಯಮಂತ್ರಿಯಾಗಿದ್ದಾಗ 30 ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಿಸಲು 90 ಕೋಟಿ ರೂ. ಅನುದಾನ ಬಿಡುಗಡೆ ಮಾಡಿದ್ದೆ. ಹಲವು ಜಿಲ್ಲೆಗಳಲ್ಲಿ ಭವನ ನಿರ್ಮಾಣವಾಗಿದೆ. ಜಾಗದ ಸಮಸ್ಯೆ ಇರುವಲ್ಲಿ ತಡವಾಗುತ್ತಿದೆ. ಅಂತಹ ಕಡೆಗಳಲ್ಲಿಯೂ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು,'' ಎಂದು ಭರವಸೆ ನೀಡಿದರು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ''ಗಾಂಧೀಜಿಯನ್ನು ಜಗತ್ತಿನ ನಾಯಕ ಎಂದು ಗುರುತಿಸುವವರು ವಿಶ್ವದಾದ್ಯಂತ ಇದ್ದಾರೆ. ಆದರೆ, ಗಾಂಧೀಜಿಯ ಫೋಟೊಗೆ ಗುಂಡಿಕ್ಕುವ ಕೀಳು ಮನಸ್ಸಿನ ಜನರು ಕೂಡ ನಮ್ಮ ದೇಶದಲ್ಲಿದ್ದಾರೆ,'' ಎಂದು ವಿಷಾದಿಸಿದರು.

''ರಾಜ್ಯದಲ್ಲಿ ಗಾಂಧೀಜಿ ಸಂಚರಿಸಿದ ಪ್ರದೇಶಗಳಲ್ಲಿ ಸ್ಮಾರಕ ನಿರ್ಮಿಸಲಾಗುವುದು. ಮಹಾತ್ಮ ಗಾಂಧೀಜಿ ಅವರು 1924ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಈ ಅಧಿವೇಶನಕ್ಕೆ ನೂರು ವರ್ಷ ತುಂಬಿರುವ ನೆನಪಿಗಾಗಿ ಒಂದು ವರ್ಷ ಶತಾಬ್ದಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುವುದು. ಅದಕ್ಕಾಗಿ 25 ಕೋಟಿ ರೂ. ಬಿಡುಗಡೆ ಮಾಡಲಾಗಿದೆ,'' ಎಂದು ಹೇಳಿದರು.

ಸಾಹಿತಿ ನಟರಾಜ್ ಹುಳಿಯಾರ್ ಅವರ 'ಎಲ್ಲರ ಗಾಂಧೀ' ಕೃತಿಗೆ ಜಯಶ್ರೀ ದತ್ತಿ ಪ್ರಶಸ್ತಿ ಪ್ರದಾನ ಮಾಡಲಾಯಿತು. ಅಂತರ್ಜಾತಿ ಮದುವೆಯಾಗಿರುವ ಗಾಂಧಿಭವನದ ಸಿಬ್ಬಂದಿ ತನುಜ್ ಮತ್ತು ಯಶೋಧಾ ಅವರನ್ನು ಗೌರವಿಸಲಾಯಿತು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಎನ್‌ಎಸ್‌ಎಸ್ ರಾಜ್ಯಾಧಿಕಾರಿ ಪ್ರತಾಪ್ ಲಿಂಗಯ್ಯ, ಪ್ರಾದೇಶಿಕ ಕಚೇರಿ ನಿರ್ದೇಶಕ ಕಾರ್ತಿಕೇಯನ್, ಗಾಂಧಿ ಸ್ಮಾರಕ ಭವನದ ಎಂ.ಸಿ. ನರೇಂದ್ರ, ಎನ್. ಆರ್. ವಿಶುಕುಮಾರ್, ಜಿ.ಬಿ. ಶಿವರಾಜ್ ಭಾಗವಹಿಸಿದ್ದರು.

## ಗಾಂಧೀಜಿಯಂತೆ ಕಾಂಗ್ರೆಸ್ ಕೂಡ ಶಾಶ್ವತ: ಡಿಕೆಶಿ

**ಬೆಂಗಳೂರು:** ''ಮಹಾತ್ಮ ಗಾಂಧಿ ಹೆಸರು ಹೇಗೆ ಶಾಶ್ವತವಾಗಿರುತ್ತದೆಯೋ ಅದೇರೀತಿ ಕಾಂಗ್ರೆಸ್ ಪಕ್ಷವೂ ಶಾಶ್ವತವಾಗಿರಲಿದೆ,'' ಎಂದು ಕೆಪಿಸಿಸಿ ಅಧ್ಯಕ್ಷರೂ ಆದ ಡಿಸಿಎಂ ಡಿ.ಕೆ.ಶಿವಕುಮಾರ್ ಹೇಳಿದ್ದಾರೆ.

ಕೆಪಿಸಿಸಿ ಕಚೇರಿಯಲ್ಲಿ ಆಯೋಜಿಸಿದ್ದ 'ಗಾಂಧಿ ಭಾರತ' ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡಿ,''ಗಾಂಧಿಯವರು ಕಾಂಗ್ರೆಸ್ ಅಧ್ಯಕ್ಷರಾಗಿ ಸ್ವಾತಂತ್ರ್ಯ ಹೋರಾಟದ ನೇತೃತ್ವ ವಹಿಸಿದ ಬೆಳಗಾವಿ ಅಧಿವೇಶನಕ್ಕೆ ಈಗ ಶತಮಾನ ತುಂಬಿದೆ. ಈ ಸಂದರ್ಭ ಬಳಸಿಕೊಂಡು ಗಾಂಧೀಜಿ ತತ್ವ ಹಾಗೂ ಕಾಂಗ್ರೆಸ್ ಪಕ್ಷದ ಕೊಡುಗೆಯನ್ನು ಎಲ್ಲರಿಗೂ ತಿಳಿಸಬೇಕಿದೆ,'' ಎಂದು ಹೇಳಿದರು.

**ಬದುಕಿನ ರಾಜಕಾರಣ:** ''ನಾವು ಭಾವನೆ ಮೇಲೆ ರಾಜಕಾರಣ ಮಾಡುತ್ತಿಲ್ಲ, ಜನರ ಬದುಕಿನ ಮೇಲೆ ರಾಜಕಾರಣ ಮಾಡುತ್ತಿದ್ದೇವೆ. ಜನರ ಬದುಕು ಸುಧಾರಿಸಲು ಗ್ಯಾರಂಟಿ ಯೋಜನೆಗಳನ್ನು ಜಾರಿ ಮಾಡಿದ್ದೇವೆ. ಗಾಂಧಿ ಜಯಂತಿಯಂದು ನಾವು ಅನೇಕ ಕಾರ್ಯಕ್ರಮಗಳನ್ನು ರೂಪಿಸಿದ್ದು, ಮುಂದಿನ ಒಂದು ವರ್ಷ ಕಾಲ ಈ ಕಾರ್ಯಕ್ರಮ ರೂಪಿಸಲಾಗುವುದು,'' ಎಂದು ಹೇಳಿದರು.

ಸಿಎಂ ಸಿದ್ದರಾಮಯ್ಯ , ಮಾಜಿ ಸಿಎಂ ವೀರಪ್ಪ ಮೊಯಿಲಿ, ಸಚಿವ ಎಚ್.ಕೆ.ಪಾಟೀಲ್ ಸೇರಿದಂತೆ ಹಲವು ಸಚಿವರು, ಶಾಸಕರು, ಕೆಪಿಸಿಸಿ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಪಾಲ್ಗೊಂಡರು.

## ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಸಾಧಕರಿಗೆ ಸನ್ಮಾನ

# ನ್ಯಾಯಾಲಯ ಮೀರಿದ್ದು ಆತ್ಮಸಾಕ್ಷಿ: ಸಿಎಂ

**ಬೆಂಗಳೂರು:** ಎಲ್ಲಾ ನ್ಯಾಯಾಲಯಗಳಿಗಿಂತ ಮೇಲೆ ಅತ್ಯುನ್ನತವಾದ ಆತ್ಮಸಾಕ್ಷಿಯ ನ್ಯಾಯಾಲಯವಿದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಮಹಾತ್ಮ ಗಾಂಧಿಯವರ ಮಾತನ್ನು ಪುನರುಚ್ಚರಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಅವರು, ಈಗಿನ ನ್ಯಾಯಲಯಗಳಲ್ಲಿ ನ್ಯಾಯ ಸಿಗದೇ ಹೋಗಬಹುದು. ಈಗಿನ ನ್ಯಾಯಾಲಯಗಳಿಂದ ಎಲ್ಲರಿಗೂ ನ್ಯಾಯ ಸಿಗದೇ ಹೋಗಬಹುದು. ಆದರೆ ನಾವು ಆತ್ಮಸಾಕ್ಷಿಗೆ ತಕ್ಕಂತೆ ನಡೆದುಕೊಳ್ಳಬೇಕು ಎಂದು ಅಭಿಪ್ರಾಯಪಟ್ಟರು.

ಯಾರ್‍ಯಾದರೂ ಹೊಗಳಲಿ, ತೆಗಳಲಿ. ಟೀಕೆ ಮಾಡಲಿ, ಬಿಡಲಿ. ಉಳಿದವರು ಗುರುತಿಸಲಿ ಬಿಡಲಿ ನಾವು ಪ್ರತಿಯೊಬ್ಬರೂ ಆತ್ಮಸಾಕ್ಷಿಯ ನ್ಯಾಯಾಲಯದಲ್ಲಿ ಆತ್ಮಸಾಕ್ಷಿಗೆ ತಕ್ಕಂತೆ ನಡೆದುಕೊಳ್ಳಬೇಕು. ಕೇವಲ ಭಾಷಣಗಳಿಂದ ಮಹಾತ್ಮಗಾಂಧಿ ಮತ್ತು ಅಂಬೇಡ್ಕರ್ ಅವರ ಆಶಯಗಳು ಈಡೇರುವುದಿಲ್ಲ. ಇವರಿಬ್ಬರ ಬದುಕಿನ ಮೌಲ್ಯ ಮತ್ತು ಸಂದೇಶಗಳನ್ನು ಜನ ಮಾನಸದಲ್ಲಿ ವಿಸ್ತರಿಸುತ್ತಲೇ ಸರಕಾರ ಸಮ ಸಮಾಜ ನಿರ್ಮಿಸಲು ಪೂರಕವಾದ ಕಾರ್ಯಕ್ರಮಗಳನ್ನು ರೂಪಿಸಬೇಕಾಗುತ್ತದೆ. ನಾನು ಮತ್ತು ನಮ್ಮ ಸರಕಾರ ಈ ದಿಕ್ಕಿನಲ್ಲಿ ಸಾಗುತ್ತಿದ್ದೇವೆ ಎಂದರು. ಈ ವೇಳೆ ಕಾನೂನು ಸಚಿವ ಎಚ್.ಕೆ.ಪಾಟೀಲ್, ಗಾಂಧಿ ಭವನ ಕಾರ್ಯದರ್ಶಿ ವಿಶುಕುಮಾರ್, ಎಲ್ಲರ ಗಾಂಧಿ ಕೃತಿಯ ಲೇಖಕರಾದ ನಟರಾಜ್ ಹುಳಿಯಾರ್ ಸೇರಿ ಹಲವು ಸಾಧಕರು ಉಪಸ್ಥಿತರಿದ್ದರು.



ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಸಾಧಕರಿಗೆ ಮುಖ್ಯಮಂತ್ರಿ ಸಿದ್ದರಾಮಯ್ಯ ಪ್ರಶಸ್ತಿ ಪ್ರದಾನ ಮಾಡಿದರು.

ಲಾಲ್ ಬಹದ್ದೂರ್ ಶಾಸ್ತ್ರಿ ಅವರು ಅತ್ಯಂತ ಪ್ರಾಮಾಣಿಕ ನಾಯಕರು ಮತ್ತು ರಾಜಕಾರಣಿ. ಇವರೆಲ್ಲರ ಬದುಕಿನ ಸಂದೇಶಗಳು ನಮಗೆ ಮಾರ್ಗದರ್ಶನವಾದರೆ, ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಡೆದರೆ ನಾವು ಈ ಮಹಾತ್ಮರಿಗೆ ಸಲ್ಲಿಸುವ ಗೌರವ. ಗಾಂಧಿಯವರ ಹೋರಾಟದಿಂದಾಗಿ ನಾವು ಸ್ವಾತಂತ್ರ್ಯದ ಗಾಳಿ ಸೇವಿಸುತ್ತಿದ್ದೇವೆ. ಗಾಂಧಿ ಇಡೀ ಜಗತ್ತಿನ ನಾಯಕರು ಎನ್ನುವ ಗೌರವ ಸಿಕ್ಕಿರುವ ಭಾರತೀಯರಿಗೆ ಸಿಕ್ಕ ಹೆಗ್ಗಳಿಕೆ.

-ಸಿದ್ದರಾಮಯ್ಯ, ಮುಖ್ಯಮಂತ್ರಿ

ವಿಜಯವಾಣಿ
ಗುರುವಾರ 3 ಅಕ್ಟೋಬರ್ 2024
3 OCTOBER 2024

### ಗಾಂಧಿ ವೈಚಾರಿಕತೆ ಕೊಲ್ಲಲಾಗದು । ಸಿಎಂ ಸಿದ್ದರಾಮಯ್ಯ ಹೇಳಿಕೆ । ವಿಶ್ವ ಅಹಿಂಸಾ ದಿನಾಚರಣೆ

# ಆತ್ಮಸಾಕ್ಷಿ ಒಪ್ಪುವಂತೆ ನಮ್ಮ ಕೆಲಸ ಇರಲಿ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ನಾನು ಪ್ರಾಮಾಣಿಕತೆ ಬಗ್ಗೆ ಉದ್ದುದ್ದ ಭಾಷಣ ಮಾಡಲು ಹೋಗುವುದಿಲ್ಲ. ಮತ್ತೊಬ್ಬರು ಮೆಚ್ಚಲಿ- ಬಿಡಲಿ, ವಿರೋಧ ಮಾಡಲಿ- ಬಿಡಲಿ, ತೆಗಳಲಿ. ಆದರೆ, ನಾವು ಮಾಡುವ ಕೆಲಸ ಆತ್ಮಸಾಕ್ಷಿಗೆ ಅನುಗುಣವಾಗಿ ಇರಬೇಕು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಮಹಾತ್ಮ ಗಾಂಧಿ ಅವರ 155ನೇ ಜಯಂತಿ ವಿಶ್ವ ಅಹಿಂಸಾ ದಿನಾಚರಣೆಗೆ ಚಾಲನೆ ನೀಡಿ ಮಾತನಾಡಿದರು.

### ದಾಂಪತ್ಯಕ್ಕೆ ಕಾಲಿಟ್ಟರು...

ಗಾಂಧಿ ಸ್ಮಾರಕ ನಿಧಿ ಆಡಿ ಕಾರ್ಯನಿರ್ವಹಿಸುವ ಯಶೋದಾ ಮತ್ತು ತನುಜ್‌ಎಂಬ ಅಂತರ್ಜಾತಿ ವಧು-ವರರು ಗಾಂಧಿ ಜಯಂತಿ ವೇದಿಕೆ ಕಾರ್ಯಕ್ರಮದಲ್ಲಿ ಹಾರ ಬದಲಾಯಿಸಿಕೊಳ್ಳುವ ಮೂಲಕ ದಾಂಪತ್ಯಕ್ಕೆ ಕಾಲಿಟ್ಟರು.

ಗಾಂಧಿ ಅವರನ್ನು ಕೊಂದಿರಬಹುದು. ಆದರೆ, ಅವರ ವಿಚಾರಗಳು ಹಾಗೂ ಸತ್ಯ-ಅಹಿಂಸೆಯನ್ನು ಕೊಲ್ಲಲು ಸಾಧ್ಯವಿಲ್ಲ. ಈ ಕಾರಣದಿಂದಲೇ ಗಾಂಧಿ ಅವರು 'ಆತ್ಮಸಾಕ್ಷಿ ನ್ಯಾಯಾಲಯವು ಎಲ್ಲ ನ್ಯಾಯಾಲಯಗಳಿಗಿಂತ ಅತ್ಯುನ್ನತವಾದುದು. ಕೆಲವು ಬಾರಿ ನ್ಯಾಯಾಲಯಗಳಲ್ಲಿ ನ್ಯಾಯ ಸಿಗದಿರಬಹುದು, ಆತ್ಮಸಾಕ್ಷಿ ನ್ಯಾಯಾಲಯದಲ್ಲಿ ನ್ಯಾಯ ಸಿಗಲಿದೆ' ಎಂದಿದ್ದರು ಎಂದು ಸ್ಮರಿಸಿದರು.

ಲಾಲ್ ಬಹದ್ದೂರ್ ಶಾಸ್ತ್ರಿ ಭಾರತ ಕಂಡ ಅತ್ಯಂತ ಪ್ರಾಮಾಣಿಕ ರಾಜಕಾರಣಿ. ಗಾಂಧಿ ಹೇಳಿದ ವಿಚಾರಗಳು ಹಾಗೂ ಶಾಸ್ತ್ರಿ ಅವರು ಬದುಕಿದ ರೀತಿ ನಮಗೆ ಮಾರ್ಗದರ್ಶನ ಆಗಲಿ ಎಂದರು. ಗಾಂಧಿ ಅವರು ಸತ್ಯ, ಅಹಿಂಸೆಯ ಮಾರ್ಗದಲ್ಲಿ ನುಡಿದಂತೆ ನಡೆದವರು. ದೇಶದ ಲಕ್ಷಾಂತರ ಜನ ಅಹಿಂಸಾ ಮಾರ್ಗದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿದವರು. ಹೀಗಾಗಿ, ಗಾಂಧಿ ಭಾರತದಲ್ಲಿ ಹುಟ್ಟಿದ್ದೇ ಹೆಮ್ಮೆಯ ವಿಷಯವಾಗಿದೆ.

ಅಮೆರಿಕದ ಮಾಜಿ ಅಧ್ಯಕ್ಷ ಬರಾಕ್ ಒಬಾಮ ಅವರು, 'ಗಾಂಧಿ ಅವರು ಭಾರತಕ್ಕೆ ಮಾತ್ರವಲ್ಲ, ಇಡೀ ವಿಶ್ವಕ್ಕೇ ನಾಯಕರಾಗಿದ್ದಾರೆ' ಎಂದಿದ್ದಾರೆ ಎಂದರು.

'ಎಲ್ಲರ ಗಾಂಧೀ' ಕೃತಿಗಾಗಿ ಚಿಂತಕ ಡಾ.ನಟರಾಜ್ ಹುಳಿಯಾರ್ ಅವರಿಗೆ ಜಯಶ್ರೀ ದತ್ತಿ ಪುರಸ್ಕಾರ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಎನ್‌ಎಸ್‌ಎಸ್ ರಾಜ್ಯಾಧಿಕಾರಿ ಡಾ. ಪ್ರತಾಪ್ ಲಿಂಗಯ್ಯ ಅವರಿಗೆ ಮಹಾತ್ಮ ಗಾಂಧಿ ಯುವ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ಜಿ.ಬಿ. ಶಿವರಾಜು, ಕಾರ್ಯದರ್ಶಿ ಎನ್.ಆರ್.ವಿಶುಕುಮಾರ್, ಗೌರವ ಕಾರ್ಯದರ್ಶಿ ಎಂ.ಸಿ. ನರೇಂದ್ರ ಸೇರಿ ಹಲವರು ಉಪಸ್ಥಿತರಿದ್ದರು.



ವಿಜಯವಾಣಿ ಚಿತ್ರ

ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ 'ಎಲ್ಲರ ಗಾಂಧೀ' ಕೃತಿಗಾಗಿ ಚಿಂತಕ ಡಾ. ನಟರಾಜ್ ಹುಳಿಯಾರ್‌ಗೆ ಜಯಶ್ರೀ ದತ್ತಿ ಪುರಸ್ಕಾರ ಪ್ರದಾನ ಮಾಡಲಾಯಿತು. ಸಿಎಂ ಸಿದ್ದರಾಮಯ್ಯ, ಸಚಿವ ಎಚ್.ಕೆ. ಪಾಟೀಲ್, ಶಿಕ್ಷಣತಜ್ಞ ಡಾ. ವೂಡೇ ಪಿ. ಕೃಷ್ಣ ಇತರರಿದ್ದರು.

## ಗಾಂಧಿ ಭೇಟಿ ನೀಡಿದ್ದ ಜಾಗದಲ್ಲಿ ಸ್ಮಾರಕ

ಗಾಂಧಿ ಅಧ್ಯಕ್ಷತೆ ವಹಿಸಿದ್ದ ಬೆಳಗಾವಿ ಅಧಿವೇಶನದ ಶತಾಬ್ದಿ ಕಾರ್ಯಕ್ರಮವನ್ನು ಅದ್ದೂರಿಯಾಗಿ ನಡೆಸಲು 25 ಕೋಟಿ ರೂ. ಬಿಡುಗಡೆ ಮಾಡಲಾಗಿದೆ. ಇಂದಿನಿಂದ 2025ರ ಅ. 2ರವರೆಗೆ ಒಂದು ವರ್ಷ ಕಾರ್ಯಕ್ರಮ ನಡೆಸಲಾಗುವುದು ಎಂದು ಕಾನೂನು ಸಚಿವ ಎಚ್.ಕೆ. ಪಾಟೀಲ್ ಹೇಳಿದರು. ಗಾಂಧಿ ಅವರು ಕರ್ನಾಟಕದ ಸುಮಾರು 50 ಸ್ಥಳಗಳಿಗೆ ವಿವಿಧ ಸಂದರ್ಭ ದಲ್ಲಿ ಭೇಟಿ ನೀಡಿದ್ದಾರೆ. ಆ ಸ್ಥಳಗಳಲ್ಲಿ ಗಾಂಧಿ ಸ್ಮಾರಕಗಳನ್ನು ನಿರ್ಮಿಸಲಾಗುವುದು ಎಂದರು.

## ರಾಜ್ಯದೆಲ್ಲೆಡೆ ಗಾಂಧಿ ಭವನ ಸಕ್ರಿಯವಾಗಲು ಕ್ರಮ

ನಾನು ಮೊದಲ ಬಾರಿ ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಪ್ರತಿ ಜಿಲ್ಲೆಯಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ 90 ಕೋಟಿ ರೂ. ಬಿಡುಗಡೆ ಮಾಡಿದ್ದೆ. ಜಾಗ ಸಿಗದೆ ಕೆಲವೆಡೆ ಕಟ್ಟಡ ನಿರ್ಮಿಸಲು ಸಾಧ್ಯವಾಗಿಲ್ಲ. ಅಂತಹ ಕಡೆ ಕಟ್ಟಡ ನಿರ್ಮಿಸಲಾಗುತ್ತದೆ. ಹಾಗೆಯೇ ಹೊಸ ಬೇಡಿಕೆಯಂತೆ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಸಮಿತಿ ರಚಿಸುವುದು ಮತ್ತು ಗಾಂಧಿ ಭವನಗಳನ್ನು ಸಕ್ರಿಯವಾಗಿ ಕಾರ್ಯನಿರ್ವಹಿಸಲು ಬೇಕಾದ ಕ್ರಮ ಕೈಗೊಳ್ಳಲಾಗುವುದು ಎಂದು ಸಿದ್ದರಾಮಯ್ಯ ಭರವಸೆ ನೀಡಿದರು. ಗಾಂಧಿ ಭವನಗಳನ್ನು ಸಕ್ರಿಯಗೊಳಿಸುವಂತೆ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮನವಿ ಮಾಡಿದರು.

# ಗ್ರಾಮಗಳ ಸ್ವಾವಲಂಬನೆ ಸಾಕಾರಕ್ಕೆ ಸರ್ಕಾರ ಬದ್ಧ

ಬೆಂಗಳೂರು: ಗ್ರಾಮಗಳು ಸ್ವಾವಲಂಬಿಯಾಗಿರಬೇಕು ಎನ್ನುವುದು ಗಾಂಧಿ ಅವರ ಕನಸಾಗಿತ್ತು. ಈ ನಿಟ್ಟಿನಲ್ಲಿ ಸರ್ಕಾರ ಬದ್ಧವಾಗಿದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದ್ದಾರೆ.

ಬಿಬಿಎಂಪಿ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಆಯೋಜಿಸಿದ್ದ ಗಾಂಧಿ ಜಯಂತಿ ಮತ್ತು ಸ್ವಚ್ಛತಾ ಆಂದೋಲನ ಪ್ರತಿಜ್ಞಾವಿಧಿ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

» ಮುಖ್ಯಮಂತ್ರಿ ಭರವಸೆ

» ವಿಧಾನಸೌಧದಲ್ಲಿ ಗಾಂಧಿ ಜಯಂತಿ

ಗಾಂಧಿ ಮೊದಲು ಇಡೀ ಗ್ರಾಮೀಣ ಭಾರತವನ್ನು ಸುತ್ತಾಡಿ ನಮ್ಮ ಜನರ ಬದುಕು- ಬವಣೆಯನ್ನು ಅರ್ಥ ಮಾಡಿಕೊಂಡು, ಬಳಿಕ ಅದಕ್ಕೆ ತಕ್ಕಂತೆ ಸ್ವಾತಂತ್ರ್ಯ ಹೋರಾಟ ಸಂಘಟಿಸಿ ಜೈಲು ಸೇರಿ ಹೋರಾಟ ಮುಂದುವರಿಸಿ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿಕೊಟ್ಟರು ಎಂದರು. ಸ್ವಾತಂತ್ರ್ಯ ಭಾರತದಲ್ಲಿ ಡಾ. ಅಂಬೇಡ್ಕರ್ ನೀಡಿದ ಸಂವಿಧಾನದ ಆಶಯಗಳನ್ನು ಈಡೇರಿಸುವ ಸಾಮಾಜಿಕ, ಆರ್ಥಿಕ ಕಾರ್ಯಕ್ರಮಗಳನ್ನು ನಾವು ರೂಪಿಸಿ ಜಾರಿ ಮಾಡಿದ್ದೇವೆ. ನಮ್ಮ 'ಗ್ಯಾರಂಟಿ' ಕಾರ್ಯಕ್ರಮಗಳು ಬಡವರಿಗೆ ಆರ್ಥಿಕ ಸ್ವಾತಂತ್ರ್ಯ ಒದಗಿಸಿಕೊಟ್ಟಿವೆ ಎಂದು ಹೇಳಿದರು.

ಗಾಂಧಿಯವರ ಸರ್ವೋದಯ, ಅಂಬೇಡ್ಕರ್ ಅವರ ಅಂತ್ಯೋದಯ ನಮ್ಮ ಸರ್ಕಾರದ ಧ್ಯೇಯ. ಗ್ರಾಮಗಳ ಉದ್ಧಾರ ಆಗದೆ ದೇಶ ಉದ್ಧಾರ ಆಗಲು ಸಾಧ್ಯವಿಲ್ಲ ಎಂದು ನಾವು ಗ್ರಾಮಗಳ ಪ್ರಗತಿಗೆ ಕಾರ್ಯಕ್ರಮ ರೂಪಿಸಿದ್ದೇವೆ ಎಂದರು.

ಡಿಸಿಎಂ ಡಿ.ಕೆ. ಶಿವಕುಮಾರ್, ಸಚಿವರಾದ ಎಚ್.ಕೆ. ಪಾಟೀಲ್, ಲಕ್ಷ್ಮೀ ಹೆಬ್ಬಾಳ್ಕರ್, ಮಾಜಿ ಸಿಎಂ ವೀರಪ್ಪ ಮೊಯಿಲಿ, ವಿಧಾನ ಪರಿಷತ್ ಮುಖ್ಯ ಸಚೇತಕರಾದ ಸಲೀಂ ಅಹಮದ್, ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ನಸೀರ್ ಅಹಮದ್, ಸರ್ಕಾರದ ಮುಖ್ಯ ಕಾರ್ಯದರ್ಶಿ ಶಾಲಿನಿ ರಜನೀಶ್, ಶಾಸಕ ರಿಜ್ವಾನ್ ಅರ್ಷದ್, ಬಿಬಿಎಂಪಿ ಆಯುಕ್ತರಾದ ತುಷಾರ್ ಗಿರಿನಾಥ್, ಚಲನಚಿತ್ರ ಅಕಾಡೆಮಿ ಅಧ್ಯಕ್ಷರಾದ ಸಾಧು ಕೋಕಿಲ ಇತರರಿದ್ದರು.

ಸಂಯುಕ್ತ ಕರ್ನಾಟಕ
ಸೆಪ್ಟೆಂಬರ್ 27 ಶುಕ್ರವಾರ 2024

# ಪ್ರೊ. ಜಿ.ಬಿ.ಶಿವರಾಜುಗೆ ಗಾಂಧಿ ಸೇವಾ ಪ್ರಶಸ್ತಿ

## ಸಂಘ-ಸಂಸ್ಥೆಗಳಿಗೆ ನೀಡುವ ಪ್ರಶಸ್ತಿಗೆ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಆಯ್ಕೆ



ಬೆಂಗಳೂರು: ಗಾಂಧಿ ವಿಚಾರಧಾರೆಯನ್ನು ಹರಡುವ ವ್ಯಕ್ತಿ ಹಾಗೂ ಸಂಘ-ಸಂಸ್ಥೆಗಳಿಗೆ ನೀಡುವ ಪ್ರತಿಷ್ಠಿತ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ-2024ಕ್ಕೆ ಹಿರಿಯ ಗಾಂಧಿವಾದಿ ಪ್ರೊ. ಜಿ.ಬಿ.ಶಿವರಾಜು ಹಾಗೂ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಭಾಜನವಾಗಿದೆ.



ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕ ಸರ್ಕಾರ 2014ರಿಂದ ಪ್ರತಿ ವರ್ಷ ಈ ಪ್ರಶಸ್ತಿ ವಿತರಿಸುತ್ತದೆ. ಪ್ರಶಸ್ತಿ 5 ಲಕ್ಷ ರೂ. ನಗದು ಹಾಗೂ ಫಲಕ ಒಳಗೊಂಡಿದೆ. ಅ.2ರಂದು ನಡೆಯುವ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಪ್ರಶಸ್ತಿ ವಿತರಣೆ ಮಾಡಲಿದ್ದಾರೆ.

ಪ್ರೊ. ಜಿ.ಬಿ. ಶಿವರಾಜು ತುರುವೇಕೆರೆ ತಾಲೂಕಿನ ಗೊಟ್ಟಿಕೆರೆ ಗ್ರಾಮದವರು. ಇವರು ತಮ್ಮ ಜೀವನದ ಬಹುತೇಕ ಸಮಯವನ್ನು ಗಾಂಧಿ ವಿಚಾರಧಾರೆಯನ್ನು ಜನರಿಗೆ ತಲುಪಿಸಲು ಶ್ರಮಿಸುತ್ತಿದ್ದಾರೆ. ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಶ್ರೀಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಈ ಬಾರಿ ಪ್ರಶಸ್ತಿಗೆ ಆಯ್ಕೆಯಾಗಿದೆ. 2014ರಿಂದ 2 ಸಂಸ್ಥೆಗಳಿಗೆ ಪ್ರಶಸ್ತಿ ನೀಡಲಾಗಿದೆ.ನಿವೃತ್ತ ನ್ಯಾ. ಪಿ.ಎನ್.ದೇಸಾಯಿ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷರಾಗಿದ್ದಾರೆ. ಪತ್ರಕರ್ತ ಸನತ್ ಕುಮಾರ್ ಬೆಳಗಲಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕಿ ಧರಣಿದೇವಿ ಮಾಲಗತ್ತಿ ಹಾಗೂ ವಾರ್ತಾ ಇಲಾಖೆ ಆಯುಕ್ತ ಹೇಮಂತ್ ನಿಂಬಾಳ್ಕರ್ ಆಯ್ಕೆ ಸಮಿತಿ ಸದಸ್ಯರಾಗಿದ್ದಾರೆ.

ಉದಯಕಾಲ
ಕನ್ನಡಿಗರ ದೇವಾಲ

Sep 27. 2024

# ಪ್ರೊ.ಜಿ.ಬಿ. ಶಿವರಾಜು, ಗ್ರಾಮೀಣ ಗುರುಕುಲ ಶಾಲೆಗೆ ಗಾಂಧಿ ಸೇವಾ ಪ್ರಶಸ್ತಿ

ಉದಯಕಾಲ ವಿಶೇಷ

ಬೆಂಗಳೂರು: ರಾಜ್ಯ ಸರ್ಕಾರವು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕ ಪ್ರತಿವರ್ಷ ನೀಡುವ ಪ್ರತಿಷ್ಠಿತ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಗೆ ಪ್ರಸಕ್ತ ಸಾಲಿನಲ್ಲಿ ಹಿರಿಯ ಗಾಂಧಿವಾದಿ ಪ್ರೊ.ಜಿ.ಬಿ. ಶಿವರಾಜು ಹಾಗೂ ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆಗಳು ಆಯ್ಕೆಯಾಗಿವೆ.

ಈ ಕುರಿತು ವಾರ್ತಾ ಇಲಾಖೆಯ ಆಯುಕ್ತರಾದ ಹೇಮಂತ್ ನಿಂಬಾಳ್ಕರ್ ಮಾಹಿತಿ ನೀಡಿದ್ದು, 2024ನೇ ಸಾಲಿನ ಪ್ರಶಸ್ತಿಯು ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ಗೊಟ್ಟಿಕೆರೆ ಪ್ರೊ. ಜಿ.ಬಿ. ಶಿವರಾಜು ಇವರಿಗೆ ಮತ್ತು ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಸಂಸ್ಥೆಗೆ ವಿಂಗಡಿಸಿ ಪ್ರದಾನ ಮಾಡಲಾಗುತ್ತಿದೆ. ಪ್ರಶಸ್ತಿ ಮೊತ್ತವನ್ನು ತಲಾ ರೂ.2.5 ಲಕ್ಷಗಳಂತೆ ಸಮನಾಗಿ ಪುರಸ್ಕಾರ ನೀಡಿ ಸ್ಮರಣಿಕೆ, ಪ್ರಶಸ್ತಿ ಪತ್ರದೊಂದಿಗೆ ಬರುವ ಅಕ್ಟೋಬರ್ 02 ಗಾಂಧಿ ಜಯಂತಿಯಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದಿದ್ದಾರೆ.



ನಿವೃತ್ತ ನ್ಯಾಯಮೂರ್ತಿ ಪಿ.ಎನ್. ದೇಸಾಯಿ ಅವರ ಅಧ್ಯಕ್ಷತೆಯಲ್ಲಿ ರಚನೆಯಾದ ಆಯ್ಕೆ ಸಮಿತಿಯಲ್ಲಿ ಹಿರಿಯ ಪತ್ರಕರ್ತ ಸನತ್‌ಕುಮಾರ್ ಬೆಳಗಲಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ವೂಡೆ ಪಿ.ಕೃಷ್ಣ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕಿ ಡಾ. ಧರಣಿದೇವಿ ಮಾಲಗತ್ತಿ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಆಯುಕ್ತರಾದ ಹೇಮಂತ್ ಎಂ. ನಿಂಬಾಳ್ಕರ್ ಅವರು ಸದಸ್ಯರಾಗಿದ್ದರು.



ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಸತ್ಯ, ಅಹಿಂಸೆ, ಸ್ವಾವಲಂಬನೆ, ಗ್ರಾಮಸ್ವರಾಜ್, ಅಸ್ಪೃಶ್ಯತೆ ನಿವಾರಣೆ, ಆರ್ಥಿಕ ಚಿಂತನೆಗಳು, ಖಾದಿ ಚಟುವಟಿಕೆ, ಜೀವನ ಶಿಕ್ಷಣ ಮತ್ತಿತರ ತತ್ವಾದರ್ಶಗಳನ್ನು ಅಳವಡಿಸಿಕೊಂಡು ಸಾಧನೆ ಮಾಡಿದ ಮಹನೀಯರು ಹಾಗೂ ಸಂಘ ಸಂಸ್ಥೆಗಳನ್ನು ಗುರುತಿಸಿ ಗೌರವಿಸಲು ರಾಜ್ಯ ಸರ್ಕಾರವು 2014 ರಲ್ಲಿ ಕರ್ನಾಟಕ ಗಾಂಧೀ ಸೇವಾ ಪ್ರಶಸ್ತಿ ಸ್ಥಾಪಿಸಿದೆ.

## ಯುವಜನತೆಗೆ ನಿರಂತರ ಗಾಂಧಿ ವಿಚಾರ ತಲುಪಿಸುತ್ತಿರುವ ಪ್ರೊ.ಜಿ.ಬಿ. ಶಿವರಾಜು

ನಿವೃತ್ತ ಉಪನ್ಯಾಸಕರಾಗಿರುವ ಪ್ರೊ. ಜಿ.ಬಿ. ಶಿವರಾಜು ಅವರು ವೃತ್ತಿ ಜೀವನದುದ್ದಕ್ಕೂ ವಿದ್ಯಾರ್ಥಿಗಳಲ್ಲಿ ಗಾಂಧಿ ವಿಚಾರಧಾರೆಯನ್ನು ರೂಪಿಸಲು ಶ್ರಮಿಸಿದ್ದಾರೆ. 73 ವರ್ಷದ ಇವರು ತಮ್ಮ ನಿವೃತ್ತಿ ವೇತನವನ್ನು ಗಾಂಧೀ ವಿಚಾರಗಳನ್ನು ಯುವ ಜನರಿಗೆ ತಲುಪಿಸಲು ವಿನಿಯೋಗಿಸುತ್ತಿದ್ದಾರೆ. ಗಾಂಧಿ ಪ್ರಣೀತ ಸಂಘ ಸಂಸ್ಥೆಗಳು ಮತ್ತು ಸರ್ಕಾರಿ ಸಂಸ್ಥೆಗಳು, ರಾಷ್ಟ್ರೀಯ ಸೇವಾ ಯೋಜನೆ ಮತ್ತು ಮದ್ಯಪಾನ ಸಂಯಮ ಮಂಡಳಿಗಳ ಸಮನ್ವಯದ ಮೂಲಕ ಗಾಂಧಿ ವಿಚಾರಗಳನ್ನು ವಿದ್ಯಾರ್ಥಿಗಳು ಮತ್ತು ಯುವ ಸಮುದಾಯಕ್ಕೆ ತಲುಪಿಸುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದಾರೆ.

ಅರಸೀಕೆರೆಯಲ್ಲಿನ ಕಸ್ತೂರ ಬಾ ಗಾಂಧಿ ಆಶ್ರಮದ ಪುನರುಜ್ಜೀವನಗೊಳಿಸಿದ್ದಾರೆ. ಮೂಡಿಗೆರೆಯ ಭಾರತಿ ಬೈಲ್ ಕೇಂದ್ರವನ್ನು ಅಭಿವೃದ್ಧಿಗೊಳಿಸಿದ್ದಾರೆ. ಮಂಡ್ಯ ಜಿಲ್ಲೆ ಮಾರ್ನೋಮಿದೊಡ್ಡಿ ಗ್ರಾಮದಲ್ಲಿ ಕಸ್ತೂರಬಾ ಗಾಂಧಿ ಟ್ರಸ್ಟ್‌ನ ಉಪಕೇಂದ್ರವನ್ನು ಸ್ಥಳೀಯರ ಸಹಕಾರದಿಂದ ಗ್ರಾಮೀಣ ಮಹಿಳೆಯರ ಸ್ವಉದ್ಯೋಗ ಕಾರ್ಯಾಗಾರವಾಗಿ ಅಭಿವೃದ್ಧಿಪಡಿಸಿದ್ದಾರೆ.

## ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ

1984 ರ ಅಕ್ಟೋಬರ್ 02 ರಂದು ಹಾವೇರಿ ಜಿಲ್ಲೆ ಹೊಸರಿತ್ತಿ ಗ್ರಾಮದಲ್ಲಿ ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನವು ಸ್ಥಾಪಿಸಿದ ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಯು ಕಳೆದ 39 ವರ್ಷಗಳಿಂದ ಗಾಂಧಿ ವಿಚಾರಗಳನ್ನು ಹೊಸ ಪೀಳಿಗೆಯಲ್ಲಿ ಅಳವಡಿಸಲು ಅಹರ್ನಿಶಿ ದುಡಿಯುತ್ತಿದೆ. ಸಮಾಜದ ಎಲ್ಲಾ ವರ್ಗಗಳು ಸೇರಿದಂತೆ ಗ್ರಾಮೀಣ ಕೃಷಿಕ ಹಾಗೂ ಕೂಲಿಕಾರರ ಕುಟುಂಬದ ಹಿನ್ನಲೆಯ ಸಾವಿರಾರು ಪ್ರತಿಭಾವಂತ ಮಕ್ಕಳಿಗೆ ಊಟ, ವಸತಿ, ಇತರೆ ಸೌಲಭ್ಯಗಳನ್ನು ನೀಡುತ್ತಾ ಬಂದಿದೆ.

ಇಲ್ಲಿನ ವಿದ್ಯಾರ್ಥಿಗಳು ತಾವೇ ನೇಯ್ದ ಬಟ್ಟೆಗಳನ್ನು ಧರಿಸುತ್ತಾರೆ. ತಾವೇ ಬೆಳೆದ ಕೃಷಿ ಬೆಳೆಗಳಿಂದ ತಯಾರಿಸಿದ ಆಹಾರ ಸೇವಿಸುತ್ತಾರೆ. ದೇಶದ ಆಂತರಿಕ ಕಲಹಗಳನ್ನು ಕಿತ್ತೆಸೆಯುವ ಹಾಗೂ ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳುವ ಶಿಕ್ಷಣ ಪಡೆಯುತ್ತಿದ್ದಾರೆ. ರಾಜ್ಯ ಪಠ್ಯಕ್ರಮದ ಜೊತೆಗೆ ಗಾಂಧೀ ವಿಚಾರಧಾರೆಯ ಅನುಸಾರ ಕೃಷಿ, ನೂಲು ಮತ್ತು ನೇಯ್ಗೆ, ಹೈನುಗಾರಿಕೆ, ತೋಟಗಾರಿಕೆ ಮುಂತಾದ ಸ್ವಾವಲಂಬಿ, ಪ್ರಾಯೋಗಿಕ ಶಿಕ್ಷಣವನ್ನು ಇಲ್ಲಿನ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದೆ.

ಜನದನಿಯ ಸಾರಥಿ
ವಾರ್ತಾ ಭಾರತಿ
Sep 27, 2024

# ಪ್ರೊ.ಜಿ.ಬಿ.ಶಿವರಾಜುಗೆ 'ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿ'



ಬೆಂಗಳೂರು, ಸೆ.26: ವಾರ್ತಾ ಇಲಾಖೆ ಪ್ರತಿವರ್ಷ ನೀಡುವ ಪ್ರತಿಷ್ಠಿತ ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿಗೆ ಪ್ರಸಕ್ತ ಸಾಲಿನಲ್ಲಿ ಹಿರಿಯ ಗಾಂಧಿವಾದಿ ಪ್ರೊ.ಜಿ.ಬಿ.ಶಿವರಾಜು ಹಾಗೂ ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆಗಳು ಆಯ್ಕೆಯಾಗಿವೆ ಎಂದು ಇಲಾಖೆಯ ಆಯುಕ್ತ ಹೇಮಂತ್ ಎಂ.ನಿಂಬಾಳ್ಕರ್ ತಿಳಿಸಿದ್ದಾರೆ.

ಗುರುವಾರ ಈ ಕುರಿತು ಪ್ರಕಟನೆ ನೀಡಿರುವ ಅವರು, ರಾಷ್ಟ್ರಪಿತ ಗಾಂಧೀಜಿಯವರ ಸತ್ಯ, ಅಹಿಂಸೆ, ಸ್ವಾವಲಂಬನೆ, ಗ್ರಾಮ ಸ್ವರಾಜ್ಯ, ಅಸ್ಪೃಶ್ಯತೆ ನಿವಾರಣೆ, ಆರ್ಥಿಕ ಚಿಂತನೆಗಳು, ಖಾದಿ ಚಟುವಟಿಕೆ, ಜೀವನ ಶಿಕ್ಷಣ ಮತ್ತಿತರ ತತ್ವಾದರ್ಶಗಳನ್ನು ಅಳವಡಿಸಿಕೊಂಡು ಸಾಧನೆ ಮಾಡಿದ ಮಹನೀಯರು ಹಾಗೂ ಸಂಘ ಸಂಸ್ಥೆಗಳನ್ನು ಗುರುತಿಸಿ ಗೌರವಿಸಲು ರಾಜ್ಯ ಸರಕಾರವು 2014ರಲ್ಲಿ ಕರ್ನಾಟಕ ಗಾಂಧಿ ಸೇವಾ ಪ್ರಶಸ್ತಿ ಸ್ಥಾಪಿಸಿದೆ ಎಂದು ತಿಳಿಸಿದ್ದಾರೆ.

ಪ್ರಶಸ್ತಿಯು 5ಲಕ್ಷ ರೂ.ನಗದು ಹಾಗೂ ಫಲಕ ಒಳಗೊಂಡಿದೆ. 2024ನೇ ಸಾಲಿನ ಪ್ರಶಸ್ತಿಯು ಪ್ರೊ.ಜಿ.ಬಿ. ಶಿವರಾಜು ಹಾಗೂ ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಸಂಸ್ಥೆಗೆ ಹಂಚಿಕೆಯಾಗಿ ಪ್ರದಾನ ಮಾಡಲಾಗುತ್ತಿದೆ. ಪ್ರಶಸ್ತಿ ಮೊತ್ತವನ್ನು ತಲಾ 2.5ಲಕ್ಷ ರೂ.ನಂತೆ ಸಮನಾಗಿ ಪುರಸ್ಕಾರ ನೀಡಿ ಸ್ಮರಣಿಕೆ, ಪ್ರಶಸ್ತಿ ಪತ್ರದೊಂದಿಗೆ ಅ.2ರ ಗಾಂಧಿ ಜಯಂತಿಯಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ.

ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಪಿ.ಎನ್. ದೇಸಾಯಿ ಅಧ್ಯಕ್ಷತೆಯಲ್ಲಿ ರಚನೆಯಾದ ಆಯ್ಕೆ ಸಮಿತಿಯಲ್ಲಿ ಹಿರಿಯ ಪತ್ರಕರ್ತ ಸನತ್‌ಕುಮಾರ್ ಬೆಳಗಲಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕಿ ಡಾ.ಧರಣಿದೇವಿ ಮಾಲಗತ್ತಿ, ವಾರ್ತಾ ಇಲಾಖೆಯ ಆಯುಕ್ತರು ಇದ್ದರು. ಮೇಲ್ಕಂಡ ಸಮಿತಿ ಪುರಸ್ಕೃತರನ್ನು ಆಯ್ಕೆ ಮಾಡಿದೆ.

ಪ್ರಶಸ್ತಿ ಪ್ರದಾನ ಸಮಾರಂಭವು ಅ.2ರ ಸಂಜೆ 4:30ಕ್ಕೆ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ವಾರ್ತಾಸೌಧದ ಸುಲೋಚನಾ ಸಭಾಂಗಣದಲ್ಲಿ ನಡೆಯಲಿದೆ ಎಂದು ಪ್ರಕಟನೆ ತಿಳಿಸಿದೆ.

ಹೊಸ ದಿಗಂತ | ಶುಕ್ರವಾರ, 27 ಸೆಪ್ಟೆಂಬರ್ 2024, ಬೆಂಗಳೂರು

# ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರಕಟ

ಬೆಂಗಳೂರು: ರಾಜ್ಯ ಸರ್ಕಾರವು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕ ಪ್ರತಿ ವರ್ಷ ನೀಡುವ ಪ್ರತಿಷ್ಠಿತ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತರ ಹೆಸರನ್ನು ಪ್ರಕಟಿಸಲಾಗಿದೆ.



ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಸತ್ಯ, ಅಹಿಂಸೆ, ಸ್ವಾವಲಂಬನೆ, ಗ್ರಾಮ ಸ್ವರಾಜ್, ಅಸ್ಪೃಶ್ಯತೆ ನಿವಾರಣೆ, ಆರ್ಥಿಕ ಚಿಂತನೆಗಳು, ಖಾದಿ ಚಳುವಳಿ, ಜೀವನ ಶಿಕ್ಷಣ ಮತ್ತಿತರ ಆದರ್ಶಗಳನ್ನು ಅಳವಡಿಸಿಕೊಂಡು ಮಹೋನ್ನತ ಸಾಧನೆ ಮಾಡಿದ ಮಹನೀಯರು ಹಾಗೂ ಸಂಘ ಸಂಸ್ಥೆಗಳನ್ನು ಗುರುತಿಸಿ ಗೌರವಿಸಲು ಕರ್ನಾಟಕ ರಾಜ್ಯ ಸರ್ಕಾರವು 2014 ರಲ್ಲಿ ಮಹಾತ್ಮ ಗಾಂಧೀ ಸೇವಾ ಪ್ರಶಸ್ತಿ ಸ್ಥಾಪಿಸಿ ಆದೇಶ ಹೊರಡಿಸಿದೆ. ಪ್ರಸಕ್ತ ಸಾಲಿನಲ್ಲಿ ಹಿರಿಯ ಗಾಂಧಿವಾದಿ ಪ್ರೊ.ಜಿ.ಬಿ. ಶಿವರಾಜು ಹಾಗೂ ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದ ಶ್ರೀ ಗುದ್ಲೆಪ್ಪ ಹಳ್ಳಿಕೇರಿ ಸ್ಮಾರಕ ಪ್ರತಿಷ್ಠಾನದ ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆಗಳು ಆಯ್ಕೆಯಾಗಿದೆ ಎಂದು ಇಲಾಖೆಯ ಆಯುಕ್ತ ಹೇಮಂತ್ ಎಂ. ನಿಂಬಾಳ್ಕರ್ ತಿಳಿಸಿದರು.

ಪ್ರಶಸ್ತಿ ಮೊತ್ತವನ್ನು ರೂ.25 ಲಕ್ಷಗಳ ನಗದಾಗಿ ಪುರಸ್ಕಾರ ನೀಡಿ ಸ್ಮರಣಿಕೆ, ಪ್ರಶಸ್ತಿ ಪತ್ರದೊಂದಿಗೆ



ಅ.2 ರಂದು ಸಂಜೆ 4.30ಕ್ಕೆ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ವಾರ್ತಾಸೌಧದ ಸುಲೋಚನಾ ಸಭಾಂಗಣದಲ್ಲಿ ನಡೆಯಲಿರುವ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ ಎಂದು ತಿಳಿಸಿದರು.

ಕರ್ನಾಟಕ ಉಚ್ಚ ನ್ಯಾಯಾಲಯದ ನಿ. ನ್ಯಾಯಮೂರ್ತಿ ಕೆ.ಎನ್.ದೇಸಾಯಿ ಅವರ ಅಧ್ಯಕ್ಷತೆಯಲ್ಲಿ ರಚನೆಯಾದ ಆಯ್ಕೆ ಸಮಿತಿಯಲ್ಲಿ ಹಿರಿಯ ಪತ್ರಕರ್ತ ಸನತ್‌ಕುಮಾರ್ ಬೆಳಗಲಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕಿ ಡಾ.ಧರಣಿದೇವಿ ಮಾಲಗತ್ತಿ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಆಯುಕ್ತ ಹೇಮಂತ್ ಎಂ. ನಿಂಬಾಳ್ಕರ್ ಅವರು ಸದಸ್ಯರಾಗಿದ್ದರು.

# ಸರಳತೆಯ ಮಹಾ ರೂಪಕ :
# ನಾಡೋಜ ಡಾ.ವೂಡೇ. ಪಿ. ಕೃಷ್ಣ

ಯಾರು ತಾನು ಬದುಕಿರುವಾಗ ಇತರರೂ ತನ್ನಂತೆಯೇ ಬದುಕಲು ಪ್ರೇರೇಪಿಸುತ್ತಾರೋ, ಆತ ನಿಜವಾದ ಮನುಷ್ಯ : ಎಂದು ಛಾಂದೋಗ್ಯೋಪನಿಷತ್ ಹೇಳುತ್ತದೆ. ಸ್ವಾತಂತ್ರ್ಯ ಹೋರಾಟಗಾರ ಮನೆತನದಿಂದ ಬಂದ ನಾಡೋಜ ಡಾ.ವೂಡೇ. ಪಿ. ಕೃಷ್ಣ ಅವರು ತಮ್ಮ ಸೇವಾ ಮನೋಭಾವ, ಸರಳತೆ, ನ್ಯಾಯಪರತೆ ಮತ್ತು ಜೀವನ ಮೌಲ್ಯಗಳ ಆದರ್ಶಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ತಾನು ಬದುಕಿರುವಾಗ ಇತರರೂ ತನ್ನಂತೆ ಬದುಕಬೇಕು ಎಂಬ ಸೇವಾ ಮನೋಭಾವದಲ್ಲಿ ಬದುಕುತ್ತಾ, ತನ್ನ ಸಂಪರ್ಕಕ್ಕೆ ಬಂದವರನ್ನು ಉತ್ತಮ ಮಾರ್ಗದಲ್ಲಿ ಬದುಕಲು ಪ್ರೇರೇಪಿಸುತ್ತಾ, ಜೀವಂತ ದಂತ ಕತೆಯಾಗಿ ಬದುಕುತ್ತಿದ್ದಾರೆ. ಉಪನಿಷತ್ ವಾಕ್ಯದಲ್ಲಿ ಹೇಳದಂತೆಯೇ ನಿಜವಾದ ಮನುಷ್ಯನಾಗಿ, ಆಗರ್ಭ ಶ್ರೀಮಂತರಾದರೂ ಶ್ರೀಮಂತಿಕೆಯ ಸೋಂಕಿಲ್ಲದೆ, ಮಹಾತ್ಮಾ ಗಾಂಧೀಜಿಯವರ ಆದರ್ಶಗಳನ್ನು ಅನುಸರಿಸುತ್ತಾ, ಸರಳತೆಯ ಮಹಾ ರೂಪಕವಾಗಿ ಜನಸಾಮಾನ್ಯರ ನಡುವೆ ಸಂತನಂತೆ ಜೀವಿಸುತ್ತಿದ್ದಾರೆ.



ನಾಡೋಜ ಡಾ. ವೂಡೇ. ಪಿ. ಕೃಷ್ಣ ಅವರು ಒಬ್ಬ ಭಾರತೀಯ ಶಿಕ್ಷಣತಜ್ಞ, ತಂತ್ರಜ್ಞ ಮತ್ತು ಸಾಮಾಜಿಕ ಕಾರ್ಯಕರ್ತರಾಗಿ, ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್‌ನ ಗೌರವ ಪ್ರಧಾನ ಕಾರ್ಯದರ್ಶಿಯಾಗಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ, ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಇಂಜಿನಿಯರ್ಸ್ (ಭಾರತ), ಕರ್ನಾಟಕ ರಾಜ್ಯ ಕೇಂದ್ರದ ಮಾಜೀ ಅಧ್ಯಕ್ಷರಾಗಿ, ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರದ ಸದಸ್ಯರಾಗಿ, ರಾಜ್ಯ ಸಚಿವರ ಶ್ರೇಣಿಯಲ್ಲಿ, ರಾಜ್ಯದಲ್ಲಿ ಯಾವುದೇ ವಿಪತ್ತುಗಳನ್ನು ಶಮನಗೊಳಿಸಲು ಪೂರ್ವಭಾವಿ ತಂತ್ರಗಳನ್ನು ಅಭಿವೃದ್ಧಿಪಡಿಸಲು ಸೇವೆ ಸಲ್ಲಿಸಿದ್ದಾರೆ.

ಕೃಷ್ಣ ಅವರು 1963 ರಲ್ಲಿ ಕರ್ನಾಟಕದ ಬೆಂಗಳೂರಿನಲ್ಲಿ ಜನಿಸಿದರು. ತಂದೆ ದಿ॥ ಡಬ್ಲ್ಯು. ಪುಟ್ಟಯ್ಯ ವ್ಯಾಪಾರಿ ಮತ್ತು ಸ್ವಾತಂತ್ರ್ಯ ಹೋರಾಟಗಾರರಾಗಿದ್ದವರು ಮತ್ತು ತಾಯಿ ದಿವಂಗತ

ದೊಡ್ಡಮ್ಮಯ್ಯ. ಡಾ.ಜಿ.ಸವಿತಾ ಅವರನ್ನು ವಿವಾಹವಾಗಿದ್ದಾರೆ. ಕೃಷ್ಣ ಅವರು ಮೈಸೂರಿನ ಶ್ರೀ ರಾಮಕೃಷ್ಣ ವಿದ್ಯಾಶಾಲೆಯಲ್ಲಿ ವ್ಯಾಸಂಗ ಮಾಡಿದರು ಮತ್ತು ಮ್ಯಾನೇಜ್‌ಮೆಂಟ್‌ನಲ್ಲಿ ಡಾಕ್ಟರೇಟ್ (ಪಿಎಚ್‌ಡಿ) ಮತ್ತು ಎಂಜಿನಿಯರಿಂಗ್, ಕಾನೂನು, ಸಮಾಜಶಾಸ್ತ್ರ ಮತ್ತು ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ ಪದವೀಧರರಾಗಿದ್ದಾರೆ. ಶಾಲೆಯಲ್ಲಿ ಅವರು ಸ್ವಾಮಿ ವಿವೇಕಾನಂದರ ತತ್ವಗಳಿಂದ ಪ್ರಭಾವಿತರಾದರು ಮತ್ತು ನಂತರ ರಾಜಾ ರಾಮಮೋಹನ್ ರಾಯ್ ಅವರಿಂದ ಪ್ರಭಾವಿತರಾದರು.

ಕೃಷ್ಣ ಅವರು ಸುಪ್ರಸಿದ್ಧ ಮತ್ತು ರಾಷ್ಟ್ರೀಯವಾಗಿ ಗುರುತಿಸಲ್ಪಟ್ಟ ಶಿಕ್ಷಣತಜ್ಞರು. ಬೆಂಗಳೂರು, ಮೈಸೂರು, ತುಮಕೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಹರಡಿರುವ 34 ಶಿಕ್ಷಣ ಸಂಸ್ಥೆಗಳನ್ನು ಒಳಗೊಂಡಿರುವ ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ (ಎಸ್‌ಇಟಿ) ಗೆ ಅವರು ನಾಯಕತ್ವವನ್ನು ಒದಗಿಸಿದ್ದಾರೆ ಮತ್ತು 1930 ರಲ್ಲಿ ಮಹಿಳೆಯರ ಗುಂಪಿನಿಂದ ಶೇಷಾದ್ರಿಪುರಂ ಸ್ತ್ರೀ ಸಮಾಜ ಎಂಬ ಪ್ರಾಥಮಿಕ ಶಾಲೆಯಾಗಿ ಸ್ಥಾಪಿಸಲಾಯಿತು . ಅವರು ಭಾರತೀಯ ರೆಡ್ ಕ್ರಾಸ್ ಸೊಸೈಟಿ, ದಿ ಟ್ಯೂಬರ್ಕ್ಯುಲೋಸಿಸ್ ಅಸೋಸಿಯೇಷನ್ ಆಫ್ ಇಂಡಿಯಾ, ಗಾಂಧಿ ಪೀಸ್ ಫೌಂಡೇಶನ್ . ಮತ್ತು ದಿ ಇನ್‌ಸ್ಟಿಟ್ಯೂಶನ್ ಆಫ್ ಇಂಜಿನಿಯರ್ಸ್ (ಭಾರತ) ರಾಷ್ಟ್ರೀಯ ಮಟ್ಟದಲ್ಲಿ ತೊಡಗಿಸಿಕೊಂಡಿದ್ದಾರೆ. ಮೂರು ದಶಕಗಳಿಗೂ ಹೆಚ್ಚು ಕಾಲ ನಿಂತಿರುವ ಚಾರ್ಟರ್ಡ್ ಇಂಜಿನಿಯರ್, ಅವರು ಪ್ರಸಿದ್ಧ ತಾಂತ್ರಿಕ ಮಧ್ಯಸ್ಥಗಾರರೂ ಹೌದು. ಕೃಷ್ಣ ಅವರು ಸರ್ ಎಂ ವಿಶ್ವೇಶ್ವರಯ್ಯ ಜೀವನ ಸಾಧನೆ ಎಂಬ ಪುಸ್ತಕವನ್ನು ಬರೆದಿದ್ದಾರೆ, ಇದನ್ನು 2009 ರಲ್ಲಿ ರಾಷ್ಟ್ರೀಯ ವಿಜ್ಞಾನ ದಿನದಂದು ಬಿಡುಗಡೆ ಮಾಡಲಾಯಿತು . 2002 – ಶಿಕ್ಷಣಕ್ಕಾಗಿ ಬೆಂಗಳೂರು ಮಹಾನಗರ ಪಾಲಿಕೆಯಿಂದ ಕೆಂಪೇಗೌಡ ಪ್ರಶಸ್ತಿ, 2004 – ಕರ್ನಾಟಕ ಸರ್ಕಾರದಿಂದ ರಾಜ್ಯ ರಾಜ್ಯೋತ್ಸವ ಪ್ರಶಸ್ತಿ – ಸಾಮಾಜಿಕ ಕಾರ್ಯಗಳಿಗಾಗಿ ,2005 – ಗೌರವಾನ್ವಿತ ಕರ್ನಾಟಕ ರಾಜ್ಯಪಾಲರಿಂದ ರೆಡ್ ಕ್ರಾಸ್ ಪ್ರಶಸ್ತಿ – ಮಾನವೀಯ ಸೇವೆಗಳಿಗಾಗಿ, 2011 – ಇಂಜಿನಿಯರ್‌ಗಳ ಸಂಸ್ಥೆಯಿಂದ ಎಮಿನೆಂಟ್ ಇಂಜಿನಿಯರ್ ಪ್ರಶಸ್ತಿ – ಎಂಜಿನಿಯರಿಂಗ್ ಕ್ಷೇತ್ರದಲ್ಲಿನ ಕೊಡುಗೆಗಾಗಿ, 2012 – ರೆಡ್ ಕ್ರಾಸ್ ಮಾನವೀಯ ಕೆಲಸಕ್ಕಾಗಿ ಭಾರತದ ಗೌರವಾನ್ವಿತ




ಕನ್ನಡದ ಸಮಕಾಲೀನ ಯುವ ಬರಹಗಾರರಲ್ಲಿ ಸೂಕ್ಷ್ಮಸಂವೇದಿ ಹಾಗೂ ಜೀವಪರ ಚಿಂತನೆಯ ಕವಿಯಾಗಿ, ಕಾವ್ಯ, ವಿಮರ್ಶೆ, ವ್ಯಕ್ತಿಚಿತ್ರ, ಸಂಪಾದನೀಯ, ಸಂಶೋಧನೆಯ ಕ್ಷೇತ್ರದಲ್ಲಿ ಕೆಲಸಮಾಡುತ್ತಿದ್ದಾರೆ. ಕೇಂದ್ರಸಾಹಿತ್ಯ ಅಕಾಡೆಮಿಯು ಆಯೋಜಿಸಿದ್ದ "ರಾಷ್ಟ್ರೀಯ ಯುವ ಬರಹಗಾರರ ಸಮ್ಮೇಳನ" ಕೇರಳ, ಪಂಜಾಬ್, ಮಹಾರಾಷ್ಟ್ರ, ಅಸ್ಸಾಂ ಹೀಗೆ ರಾಷ್ಟ್ರದ ಅನೇಕ ಕಡೆಗಳಲ್ಲಿ ಕಾವ್ಯವಾಚನ ಮಾಡಿ ಕನ್ನಡದ ಹಿರಿಮೆಯನ್ನು ಹರಡಿಸಿದ್ದಾರೆ.

ರಾಷ್ಟ್ರಪತಿಗಳಿಂದ ರಾಷ್ಟ್ರಪತಿಗಳ ಚಿನ್ನದ ಪದಕ, 2014 – ಯುನೈಟೆಡ್ ಕಿಂಗ್‌ಡಂನ ಇಂಜಿನಿಯರಿಂಗ್ ಮತ್ತು ತಂತ್ರಜ್ಞಾನ ಸಂಸ್ಥೆಯ ಫೆಲೋಶಿಪ್, 2017 – ಶಿಕ್ಷಣವನ್ನು ಒಳಗೊಳ್ಳಲು ಮತ್ತು ಕರ್ನಾಟಕದ ಶಿಕ್ಷಣದ ಭೂದೃಶ್ಯವನ್ನು ಬದಲಾಯಿಸಲು ಅವರ ಆದರ್ಶಪ್ರಾಯ ಕೊಡುಗೆಯನ್ನು ಗುರುತಿಸಿ ಹಿಂದೂ ಗ್ರೂಪ್‌ನಿಂದ ಡೋಯೆನ್ಸ್ ಪ್ರಶಸ್ತಿ 2020 – ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ನಾಡೋಜ ಗೌರವ ಪದವಿ . ಕರ್ನಾಟಕ ರಾಜ್ಯಪಾಲರು ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಘನತೆವೆತ್ತ ಶ್ರೀ ವಜುಭಾಯಿ ರೂಡಾಭಾಯಿ ವಾಲಾ ಅವರು ಗೌರವ ಪದವಿಯನ್ನು ಪ್ರದಾನ ಮಾಡಿದರು. 2023 – ಸಮಾಜಕ್ಕೆ ಅಸಾಧಾರಣ ಸೇವೆಗಾಗಿ ಬೆಂಗಳೂರು ಸಿಟಿ ವಿಶ್ವವಿದ್ಯಾಲಯದಿಂದ ಡಾಕ್ಟರ್ ಆಫ್ ಲೆಟರ್ಸ್ (ಡಿ. ಲಿಟ್.) ಗೌರವ ಪದವಿ.

ಇಷ್ಟೆಲ್ಲಾ ಗೌರವ, ಮಾನ್ಯತೆಗಳನ್ನು ಪಡೆದರೂ ಸರಳತೆಯನ್ನು ತಮ್ಮ ನಿತ್ಯ ಧರ್ಮವನ್ನಾಗಿ ಪಾಲಿಸುತ್ತಿದ್ದಾರೆ. ಇದಕ್ಕೆ ನಿದರ್ಶನವೆಂಬಂತೆ ನಾನು ಕಂಡ ಒಂದು ಘಟನೆಯನ್ನು ತಮ್ಮೊಂದಿಗೆ ಹಂಚಿಕೊಳ್ಳಬಯಸುತ್ತೇನೆ. ತತ್ವ ಕಥನ ಎಂಬ ಶಾಸ್ತ್ರ ಚೂಡಾಮಣಿ ಪ್ರೊ. ಮಲ್ಲೇಪುರಂ ಜಿ ವೆಂಕಟೇಶ ಅವರ ಕೃತಿ, ಲೋಕಾರ್ಪಣ ಸಮಾರಂಭವು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಏರ್ಪಾಟಾಗಿತ್ತು. ಆಂದಿನ ದಿನದ ಕಾರ್ಯಕ್ರಮದ ನಿರೂಪಣೆ ನನ್ನ ಪಾಲಿಗೆ ಬಂದಿತ್ತು. ಅಂದು ನಾಡೋಜ ಡಾ. ವೂಡೇ. ಪಿ. ಕೃಷ್ಣ ಅವರು ವಿಶೇಷ ಆಹ್ವಾನಿತರಾಗಿ





ಕಾರ್ಯಕ್ರಮದಲ್ಲಿ ಹಾಜರಿದ್ದರು. ಪ್ರೇಕ್ಷಕರ ಸಾಲಿನಲ್ಲಿ ಸಾಮಾನ್ಯರಂತೆ ಕುಳಿತಿದ್ದರು. ವಿಶೇಷ ಆಹ್ವಾನಿತರಿಗೆ ಪುಸ್ತಕ ಗೌರವಕ್ಕಾಗಿ ವೇದಿಕೆಗೆ ಹೆಸರುಗಳನ್ನು ಓದುತ್ತಲಿದ್ದೆ. ಆಗ ಕೃಷ್ಣ ಸರ್ ಅವರ ಹತ್ತಿರ ಪಕ್ಕದಲ್ಲೇ ಕುಳಿತಿದ್ದ ಒಬ್ಬ ವ್ಯಕ್ತಿ ಕೃಷ್ಣ ಸರ್ ಅವರಿಗೆ 'ಒಂದು ಫೋಟೊ ತೆಗೆದು ಕೊಡಿ ನಾನು ಪುಸ್ತಕ ತೆಗೆದುಕೊಳ್ಳಲು ವೇದಿಕೆಯ ಮೇಲೆ ತೆರಳುತ್ತೇನೆ' ಎಂದು ಹೇಳಿದರು. ಆದಕ್ಕೆ ಕೃಷ್ಣ ಸರ್ ಅವರು "ಆಗಲಿ ಹೋಗಿ" ಎಂದು ಅವರ ಮೊಬೈಲ್ ಪಡೆದು ಸಾಮಾನ್ಯರಂತೆ ಫೋಟೊ ಕ್ಲಿಕ್ಕಿಸಿ ಮುಗುಳುನಗುತ್ತಾ ಮೊಬೈಲ್‌ನ್ನು ಆತನಿಗೆ ಹಿಂತಿರುಗಿಸಿದರು. ಈ ಘಟನೆ ಸಾಮಾನ್ಯವಾಗಿದೆ ಮತ್ತು ಎಲ್ಲರಿಗೂ ಸಾಮಾನ್ಯವಾಗಿ ಕಾಣುತ್ತದೆ. ಆದರೆ ನಾನು ಆ ಘಟನೆಗೆ ಸಾಕ್ಷಿಯಾದಾಗ ಅನ್ನಿಸಿದ್ದು 22 ಸಾವಿರದ 600 ಜನ ವಿದ್ಯಾರ್ಥಿಗಳು ಓದುತ್ತಿರುವ 32 ಸಂಸ್ಥೆಗಳನ್ನು ಮುನ್ನಡೆಸುವ ಶಿಕ್ಷಣತಜ್ಞರು, ರಾಷ್ಟ್ರಪತಿಗಳ ಚಿನ್ನದ ಪದಕ ಪಡೆದವರು, ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷರು ಹೀಗೆ ಅನೇಕ ಸೇವಾ ಕ್ಷೇತ್ರಗಳಲ್ಲಿ ದಂತ ಕತೆಯಾಗಿರುವ ಕೃಷ್ಣ ಸರ್ ಅವರ ಫೋಟೋ ತೆಗೆಯಲು ಹಾಗೂ ಸಂದರ್ಶನಕ್ಕೆ ಹಲವಾರು ಕ್ಯಾಮರಾಗಳು ಕಾಯುವಾಗ, ಯಾರೋ ಒಬ್ಬ ಫೋಟೊ ತೆಗೆಯಲು ಹೇಳಿದಾಗ ಸಾಮಾನ್ಯರಂತೆ ನಿರಹಂಕಾರದಿಂದ ಮಮತೆಯಿಂದ ಫೋಟೋ ತೆಗೆದುಕೊಡುವ ಅವರ ವ್ಯಕ್ತಿತ್ವ ಎಷ್ಟುಜನ ದೊಡ್ಡವರು ಎನಿಸಿಕೊಂಡವರಿಗೆ ಇದೆ ಹೇಳಿ. ಯಾವುದಾದರೂ ಗ್ರಾಮಪಂಚಾಯ್ತಿ ಸದಸ್ಯನಾದರೆ ಸಾಕು ಅವರನ್ನು ಮಾತನಾಡಿಸುವುದೇ ಕಷ್ಟವಾಗಿರುವ ಈ ಸಮಾಜದಲ್ಲಿ ವೂಡೇ ಪಿ ಕೃಷ್ಣ ಅವರು ನನಗೆ ಈ ಕಾರಣಕ್ಕೆ ಸರಳತೆಯ ಮಹಾ ರೂಪಕದಂತೆ ಕಾಣಿಸುತ್ತಾರೆ ಮತ್ತು ನೈತಿಕತೆಯ ಕನ್ನಡಿಯಂತೆ ಸದಾ ಶುಭ್ರವಾದ ಬಿಳಿಯ ವಸ್ತ್ರಧರಿಸಿ, ನಿಜ ಗಾಂಧೀವಾದವನ್ನು ಬದುಕಿ ತೋರಿಸುತ್ತಿದ್ದಾರೆ. ಅವರ ಕೈಯಲ್ಲಿ ಇರುವ ದಿನಚರಿ ಪುಸ್ತಕವನ್ನು ಗಮನಿಸಬೇಕು ನೀವು. ಎಷ್ಟೋ ವರ್ಷ ಹಳೆಯ ಡೈರಿ ಆದರಲ್ಲಿ ಪ್ರತೀವರ್ಷ ಹಾಳೆಗಳನ್ನು ಮಾತ್ರ ಬದಲಿಸುತ್ತಾರೆ. ಕಾರಣ ಗಾಂಧೀಜಿಯವರು ಹೇಳಿದ ಮಿತಬಳಕೆ ತತ್ವ ಮತ್ತು ಅವರ ಉಡುಪಿನಲ್ಲಿ ಬದಲಾವಣೆಯಿಲ್ಲ. ಕಲರ್ ಬಟ್ಟೆಗಳನ್ನು ಅವರು ಧರಿಸಲೇ ಇಲ್ಲ. ಗಾಂಧೀ ಭವನವಾಗಿರಲಿ, ಶೇಷಾದ್ರಿಪುರಂ ಶಿಕ್ಷಣದತ್ತಿ ಆವರಣವಾಗಿರಲಿ ಸ್ವಚ್ಛತೆಗೆ ಮೊದಲ ಆದ್ಯತೆ. ಎಲ್ಲಾದರೂ ಒಂದು ಸಣ್ಣ ಪೇಪರ್ ಬಿದ್ದಿರುವುದು ಕಾಣಿಸಿದರೆ ತಾವೇ ಸ್ವತಃ ಕೈಯಾರೆ ಆಯ್ದುಕೊಂಡು ಕಸದ ಡಬ್ಬಿಗೆ ಹಾಕುತ್ತಾರೆ. ತಮ್ಮ ಚಾಲಕನಿಗಾಗಲಿ, ಇತರರಿಗಾಗಲಿ ಇದು ಎತ್ತಿ ಎಂದು ಹೇಳುವುದಿಲ್ಲ. ಮತ್ತು ತಮ್ಮ ಬಳಿ ಬಂದವರಿಗೆ ಕೋಪದಿಂದ ಹೇಳುವುದಿಲ್ಲ. 'ಮಾತಿಗಿಂತ ಕೃತಿಲೇಸು' ಎಂದು ನಂಬಿದ ಕೃಷ್ಣ ಅವರ ನಡತೆ ಅಪರೂಪದ ಗಾಂಧೀ ತತ್ವವನ್ನು ನಮಗೆ ದರ್ಶನಮಾಡಿಸುತ್ತದೆ. ಯಾರಾದರೂ ನೀವು ಸರಳತೆಯ ಶ್ರೇಷ್ಠತೆಯ ರೂಪಕ ಎಂದು ಅವರಿಗೆ ಹೇಳಿದರೆ ಅಷ್ಟೇ ವಿನಮ್ರತೆಯಿಂದ ಅವರು ಮನುಷ್ಯ ಬದುಕಬೇಕಾಗಿರುವುದು ಹೀಗೆ ಅಲ್ಲವೇ ಎಂದು ಹೇಳುತ್ತಾರೆ.



ಯಾವುದೇ ವ್ಯಕ್ತಿ ಸಮಾಜವನ್ನು ಬದಲಿಸಲು ರಾಜಕೀಯ ಕ್ಷೇತ್ರವಾಗಲಿ, ಸಾಮಾಜಿಕ ಕ್ಷೇತ್ರವಾಗಲಿ ಇತರರು ಸರಿ ಇಲ್ಲ ಎಂದು ದೂರುತ್ತಾರೆ. ಆದರೆ ಕೃಷ್ಣ ಅವರು ಮೊದಲು ನಮ್ಮಲ್ಲಿ ಪರಿವರ್ತನೆ ಆಗದ ಹೊರತು ಸಮಾಜ ಪರಿವರ್ತನೆ ಆಗುವುದಿಲ್ಲ ಎಂದು ನಿರೂಪಿಸುತ್ತಾರೆ. ಯಾವುದೇ ಸಾಧಕ ಅಥವಾ ಸಮರ್ಥ ನಾಯಕನ ವ್ಯಕ್ತಿತ್ವ ಇದು. ಮೊದಲು ನನ್ನಲ್ಲಿ ಬದಲಾವಣೆ ತರುವುದು ನಂತರ ಸಮಾಜದಲ್ಲಿ ಎನ್ನುವುದು ಕೃತಿ ರೂಪಕದ ನಡೆಯಲ್ಲವೇ. ಹೀಗೆ ಹೇಳುತ್ತಾ ಹೋದರೆ ಅವರ ವ್ಯಕ್ತಿತ್ವ ಆಡಳಿತಕ್ಕೆ ಸಮರ್ಥನಾಯಕರಾಗಿ, ಶಿಕ್ಷಣ ಕ್ಷೇತ್ರಕ್ಕೆ ತಜ್ಞರಾಗಿ, ಇಂಜನಿಯರಿಂಗ್ ಕ್ಷೇತ್ರಕ್ಕೆ ಅತ್ಯುತ್ತಮ ಅಭಿಯಂತರರಾಗಿ ಸೇವೆಯ ಕ್ಷೇತ್ರಕ್ಕೆ ಅತ್ಯುತ್ತಮ ಮಾನವೀಯ ಸೇವೆಯ ಸ್ವಯಂ ಸೇವಕರಾಗಿ, ಧಾರ್ಮಿಕವಾದ ನೆಲೆಯಲ್ಲಿ ನಿಜದ ದಾರ್ಶನಿಕನಾಗಿ, ಕನ್ನಡವನ್ನು ಕಟ್ಟಿ ಬೆಳೆಸುವ ನಿಟ್ಟಿನಲ್ಲಿ ಒಬ್ಬ ಕನ್ನಡದ ಕಟ್ಟಾಳುವಾಗಿ, ಹೋರಾಟ ಮತ್ತು ಕನ್ನಡದ ಏಳ್ಗೆಗೆ ಬೇಕಾದ ಕಟ್ಟುಪಾಡು ಮತ್ತು ಸೇವೆಯ ಗಮ್ಯತೆಯನ್ನು ಪೋಷಿಸುವ ಘನ ವ್ಯಕ್ತಿತ್ವ ಕೃಷ್ಣ ಅವರದಾಗಿದೆ. ಆದ್ದರಿಂದಲೇ ಗಾಂಧೀನಗರ ವಿಧಾನಸಭಾ ಕ್ಷೇತ್ರದ ಮೊದಲ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರನ್ನು ಕನ್ನಡದ ಮನಸ್ಸುಗಳು ಮೆರೆಸಿದ್ದು ಅದು ಒಂದು ಸಾಕ್ಷಿ. ಇಂತಹ ಬಹುಮುಖೀ ವ್ಯಕ್ತಿತ್ವದ ಸಾಧಕ ಕೃಷ್ಣ ಅವರ ವ್ಯಕ್ತಿತ್ವ ಸರಳತೆಯ ಜೀವನಕ್ಕೆ ಬರೆದ ಭಾಷ್ಯದಂತಿದೆ ಹಾಗೂ ನಾಡೋಜ ಡಾ. ವೂಡೇ. ಪಿ. ಕೃಷ್ಣ ಅವರ ವ್ಯಕ್ತಿತ್ವ ಗಾಂಧೀ ತತ್ವಕ್ಕೆ ತೊಡಿಸಿದ ಸುವರ್ಣದ ಚೌಕಟ್ಟು ಎಂದರೆ ತಪ್ಪಾಗಲಾರದು.

ಉದಯವಾಣಿ ಬೆಂಗಳೂರು

ಮಂಗಳವಾರ, ಸೆಪ್ಟೆಂಬರ್ 24, 2024

# 'ಯುವಜನರಿಂದ ಸಮರ್ಥ ಭಾರತ'

## ಆದಿಚುಂಚನಗಿರಿ ವಿವಿ ಕಾಲೇಜುಗಳ ಎನ್‌ಎಸ್‌ಎಸ್‌ ಶಿಬಿರಕ್ಕೆ ಶಂಭುನಾಥ ಶ್ರೀ ಚಾಲನೆ



ಅರಸೀಕೆರೆಯಲ್ಲಿ ಆದಿ ಚುಂಚನಗಿರಿ ವಿವಿ ವಿವಿಧ ಕಾಲೇಜುಗಳ ಎನ್‌ಎಸ್ ಎಸ್ ಶಿಬಿರಕ್ಕೆ ಸ್ಮಾರಕ ನಿಧಿ ಟ್ರಸ್ಟ್ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಚಾಲನೆ ನೀಡಿದರು.

■ ಉದಯವಾಣಿ ಸಮಾಚಾರ

ಅರಸೀಕೆರೆ: ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಜೊತೆಗೆ ಹೃದಯ ಶ್ರೀಮಂತಿಕೆ ಬೆಳೆಸಿಕೊಂಡಾಗ ಮಾತ್ರ ಸಮರ್ಥ ಭಾರತ ನಿರ್ಮಾಣ ಮಾಡಲು ಸಾಧ್ಯವಾಗುತ್ತದೆ. ಇದಕ್ಕಾಗಿ ನಾವುಗಳು ಯುವ ಜನಾಂಗ ಜಾಗೃತಗೊಳಿಸಬೇಕಿದೆ ಎಂದು ಆದಿಚುಂಚನಗಿರಿ ಹಾಸನ ಶಾಖಾ ಮಠದ ಶಂಭುನಾಥ ಸ್ವಾಮೀಜಿ ತಿಳಿಸಿದರು.

ನಗರದ ಕಸ್ತೂರ ಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಕೇಂದ್ರದ ಸಭಾಂಗಣದಲ್ಲಿ ಆಯೋಜಿಸಿದ್ದ ಆದಿಚುಂಚನಗಿರಿ ವಿಶ್ವವಿದ್ಯಾಲಯದ ವಿವಿಧ ಕಾಲೇಜುಗಳ ಎನ್‌ಎಸ್‌ಎಸ್ ವಿಶೇಷ ಶಿಬಿರದ ಉದ್ಘಾಟನಾ ಸಮಾರಂಭದ ಸಾನ್ನಿಧ್ಯ ವಹಿಸಿ ಮಾತನಾಡಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ವಿಶೇಷ ಶಿಬಿರದ ಉದ್ಘಾಟನೆ ನೆರವೇರಿಸಿ ಮಾತನಾಡಿದರು.

ಆದಿಚುಂಚನಗಿರಿ ವಿವಿ ಕುಲ ಸಚಿವ ಡಾ.ಸಿ.ಕೆ. ಸುಬ್ಬರಾಯ, ಶಿಬಿರಾಧಿಕಾರಿ ಡಾ.ಎ.ಟಿ.ಶಿವರಾಮು ಪ್ರಾಸ್ತಾವಿಕವಾಗಿ ಮಾತನಾಡಿದರು. ವಿವಿ ಡೀನ್ ಡಾ.ಬಿ.ರಮೇಶ್, ಕಸ್ತೂರ ಬಾ ಸ್ಮಾರಕ ಟ್ರಸ್ಟ್ ಅಧ್ಯಕ್ಷ ಶಿವರಾಜು, ಅನಂತ ಇಂಟರ್‌ನ್ಯಾಷನಲ್ ವಿದ್ಯಾ ಸಂಸ್ಥೆ ಅಧ್ಯಕ್ಷ ಅನಂತ ಕುಮಾರ್, ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ನಗರಸಭಾ ಮಾಜಿ ಅಧ್ಯಕ್ಷ ಮೋಹನಕುಮಾರ್ ಇತರರಿದ್ದರು.

ಸಂಯುಕ್ತ ಕರ್ನಾಟಕ

ಮಂಗಳವಾರ 24 ಸೆಪ್ಟೆಂಬರ್ 2024
ಬೆಂಗಳೂರು | BENGALURU

## ಯಶೋಧರಮ್ಮ ದಾಸಪ್ಪ ನಿರ್ಮಾಣ ಮಾಡಿರುವ ಗಾಂಧಿ ಸ್ಮಾರಕ ಅವಿಸ್ಮರಣೀಯ ಪುಣ್ಯಭೂಮಿ

# ರಾಷ್ಟ್ರೀಯ ಸೇವೆ ಏಕತೆಯ ಸಂದೇಶ: ಸ್ವಾಮೀಜಿ

ಸಂ.ಕ ಸಮಾಚಾರ, ಅರಸೀಕೆರೆ

ದಕ್ಷಿಣ ಭಾರತದ ರಾಜ್ ಘಾಟ್ ಅರಸೀಕೆರೆ ಗಾಂಧಿ ಸ್ಮಾರಕ ಪುಣ್ಯಭೂಮಿಯಲ್ಲಿ ಆಯೋಜಿಸಲಾಗಿರುವ ರಾಷ್ಟ್ರೀಯ ಸೇವಾ ಯೋಜನೆಗಳು ವಿದ್ಯಾರ್ಥಿಗಳಲ್ಲಿ ಏಕತೆ, ಸಂಘಟನೆ ಮತ್ತು ರಾಷ್ಟ್ರೀಯತೆ ಭಾವೈಕ್ಯತೆಯೊಂದಿಗೆ ಏಕತೆಯ ಸಂದೇಶ ನೀಡಲಿದೆ ಎಂದು ಆದಿಚುಂಚನಗಿರಿ ಹಾಸನ ಮತ್ತು ಕೊಡಗು ಶಾಖಾ ಮಠದ ಶ್ರೀ ಶಂಭುನಾಥ ಸ್ವಾಮೀಜಿ ಹೇಳಿದರು.

ನಗರದ ಮೈಸೂರು ರಸ್ತೆಯಲ್ಲಿರುವ ಕಸ್ತೂರಬಾ ಗಾಂಧಿ ಆಶ್ರಮದಲ್ಲಿ ಆದಿಚುಂಚನಗಿರಿ ಯೂನಿವರ್ಸಿಟಿ ಮತ್ತು ಕಸ್ತೂರಬಾ ಗಾಂಧಿ ಸ್ಮಾರಕ ಟ್ರಸ್ಟ್ ಸಂಯುಕ್ತಾಶ್ರಯದಲ್ಲಿ ಆಯೋಜಿಸಲಾಗಿದ್ದ ವಾರ್ಷಿಕ ವಿಶೇಷ ರಾಷ್ಟ್ರೀಯ ಸೇವಾ ಯೋಜನೆ ಕಾರ್ಯಕ್ರಮ ವೇದಿಕೆಯಲ್ಲಿ ಸಾನ್ನಿಧ್ಯ ವಹಿಸಿ ಮಾತನಾಡಿದರು. ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಅವರ ಮಾರ್ಗದರ್ಶನದಂತೆ ಸೇವಾ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವ ಆದಿಚುಂಚನಗಿರಿ ಯುನಿವರ್ಸಿಟಿಯು ಇಂದು ಗಾಂಧಿ ಸ್ಮಾರಕದಲ್ಲಿ ರಾಷ್ಟ್ರೀಯ ಸೇವಾ ಯೋಜನೆ ಆಯೋಜಿಸಲಾಗಿದೆ. ಎನ್‌ಎಸ್‌ಎಸ್ ಯೋಜನೆಗೆ ಆಗಮಿಸಿರುವ ವಿದ್ಯಾರ್ಥಿಗಳು ವೀರ ಯೋಧರಾಗಿ ಆಗಮಿಸಿದ್ದಾರೆ. ಈ ಸಂಬಂಧ ತರಬೇತಿ ನೀಡಲು ಅನೇಕ ಅನುಭವಿದಾರರು, ಇತಿಹಾಸ ತಜ್ಞರು ಮತ್ತು ಸಂಪನ್ಮೂಲ ವ್ಯಕ್ತಿಗಳು ಆಗಮಿಸಿದ್ದಾರೆ. ಯಶೋಧರಮ್ಮ ದಾಸಪ್ಪ ನಿರ್ಮಾಣ ಮಾಡಿರುವ ಗಾಂಧಿ ಸ್ಮಾರಕ ಅವಿಸ್ಮರಣೀಯ ಪುಣ್ಯಭೂಮಿಯಾಗಿದೆ. ಈ ತಪೋಭೂಮಿಯಲ್ಲಿ ಸಾಧನೆ ಮಾಡಲು ಸೇವಾ ಕಾರ್ಯಗಳ ಕಲಿಕೆ ಸಹಾಯ ಮಾಡಲಿದೆ. ಇಂತಹ ಸಂದರ್ಭವನ್ನು ಶಿಬಿರಾರ್ಥಿಗಳು ಸದುಪಯೋಗ ಮಾಡಿಕೊಳ್ಳಬೇಕು.

ಅತ್ಯುತ್ತಮ ಸಮಯ ಕಳೆದುಕೊಂಡರೆ ಮಸ್ಲ ಪಡೆಯಲು ಸಾಧ್ಯವಿಲ್ಲ. ವ್ಯಕ್ತಿತ್ವ ವಿಕಸನಕ್ಕೆ ಇಂತಹ ಶಿಬಿರಗಳು ಸಹಕಾರಿಯಾಗಲಿವೆ. ವಿದ್ಯಾರ್ಥಿಗಳು ಸಾಧನೆ ಮಾಡಿದ ವ್ಯಕ್ತಿಗಳ ಜೀವನ ಚರಿತ್ರೆ ಅಧ್ಯಯನ ಮಾಡಬೇಕು. ಅಧ್ಯಯನದಿಂದ ಇತಿಹಾಸ ತಿಳಿಯಲು ಸಾಧ್ಯ. ಈ ಆರು ದಿನಗಳ ಕಾಲ ಮೊಬೈಲ್ ಬಳಕೆಯಿಂದ ವಿದ್ಯಾರ್ಥಿಗಳು ದೂರವಿದ್ದು, ಸೇವಾ ಚಟುವಟಿಕೆಗಳಲ್ಲಿ ಭಾಗವಹಿಸಬೇಕು. ದೊರಕಿರುವ ಅವಕಾಶವನ್ನು ಸದುಪಯೋಗ ಮಾಡಿಕೊಂಡು ಉತ್ತಮ ವ್ಯಕ್ತಿಗಳಾಗಿ ರೂಪುಗೊಳ್ಳಬೇಕು. ವಿದ್ಯಾರ್ಥಿಗಳು ಓದುವುದರೊಂದಿಗೆ ವ್ಯಕ್ತಿತ್ವ, ಗುಣಮಟ್ಟದ ಶಿಕ್ಷಣ, ಪರಿಸರ ಸಂರಕ್ಷಣೆಯೊಂದಿಗೆ ಎಲ್ಲ ಕ್ಷೇತ್ರಗಳಲ್ಲಿ ಸಾಧನೆ ಮಾಡಬೇಕು. ಸೇವೆಯಲ್ಲಿ ಸ್ವಾರ್ಥ ಬೇಡ. ನಿಸ್ವಾರ್ಥ ಇದ್ದಲ್ಲಿ ಮಾತ್ರ ಸೇವಾ ಕಾರ್ಯ ಅರ್ಥೈಸುತ್ತದೆ ಎಂದರು.



ವಾರ್ಷಿಕ ವಿಶೇಷ ರಾಷ್ಟ್ರೀಯ ಸೇವಾ ಯೋಜನೆ ಕಾರ್ಯಕ್ರಮದಲ್ಲಿ ಆದಿಚುಂಚನಗಿರಿ ಹಾಸನ, ಕೊಡಗು ಶಾಖಾ ಮಠದ ಶ್ರೀ ಶಂಭುನಾಥ ಸ್ವಾಮೀಜಿ ಮತ್ತಿತರರು ಇದ್ದಾರೆ.

ರಾಷ್ಟ್ರೀಯ ಸೇವಾ ಯೋಜನೆ ಸಹ ಸಂಯೋಜಕ ಹಾಗೂ ಬಿಜಿಎಸ್ ಕಾಲೇಜು ಪ್ರಿನ್ಸಿಪಾಲ್ ಡಾ.ಎ.ಟಿ. ಶಿವರಾಮು ಮಾತನಾಡಿ, ರಾಷ್ಟ್ರೀಯ ಸೇವಾ ಯೋಜನೆ ಅನುಷ್ಠಾನಕ್ಕೆ ಸಾಕಷ್ಟು ಪ್ರಾಮಾಣಿಕ ಪ್ರಯತ್ನಗಳನ್ನು ಹಾಕಲಾಗುತ್ತಿದೆ. ಇಂದಿನ ಕಾರ್ಯಕ್ರಮಕ್ಕೆ 150 ಸ್ವಯಂ ಸೇವಕ ವಿದ್ಯಾರ್ಥಿಗಳು ಆಗಮಿಸಿದ್ದಾರೆ. ಯುವಶಕ್ತಿ ದೇಶದ ಶಕ್ತಿಯೇ ಆಗಿದೆ. ಸಮಾಜಕ್ಕೆ ಕೊಡುಗೆ ನೀಡುವ ಇಚ್ಛೆ ಇದ್ದಲ್ಲಿ ಮೊದಲು ರಾಷ್ಟ್ರೀಯ ಸೇವೆಗೆ ಮುಂದಾಗಿ. ಸಮಯ ಅಮೂಲ್ಯವಾದದ್ದು, ಅದನ್ನು ಸದುಪಯೋಗ ಮಾಡಿಕೊಳ್ಳಿ, ಇದು ಬದುಕಿನ [illegible] ನಡೆಯುವ ಸೇವಾ ಕಾರ್ಯಗಳನ್ನು ನಿಸ್ವಾರ್ಥದಿಂದ ಅತ್ಯುತ್ತಮ ವ್ಯಕ್ತಿಯನ್ನಾಗಿ ರೂಪಿಸುತ್ತವೆ [illegible] ಯಾವುದೇ ಅನುಮಾನವಿಲ್ಲ ಎಂದರು.

ಕಾರ್ಯಕ್ರಮ ಉದ್ಘಾಟಿಸಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವಿ.ಕೃಷ್ಣ ಮಾತನಾಡಿದರು. ಆದಿಚುಂಚನಗಿರಿ ಯುನಿವರ್ಸಿಟಿ ಕುಲಸಚಿವ ಡಾ.ಸಿ.ಕೆ ಸುಬ್ಬರಾಯ, ಅಕಾಡೆಮಿಕ್ [illegible] ಡಾ.ರಮೇಶ್, ಆರ್. ಅನಂತಕುಮಾರ್, ಪ್ರಿನ್ಸಿಪಾಲ್ ಡಾ.ಲಿಂಗರಾಜು, ಮುಖ್ಯೋಪಾಧ್ಯಾಯಿನಿ [illegible], ಮಾನವ ಸಂಪನ್ಮೂಲ ವ್ಯಕ್ತಿ ಪ್ರಕಾಶ್ ಕುಮಾರ್, ಮೇಲ್ವಿಚಾರಕರಾದ [illegible] ಸೇರಿದಂತೆ ನಾನಾ ಸಂಸ್ಥೆಯಲ್ಲಿ ಶಿಬಿರಾರ್ಥಿಗಳು ಭಾಗವಹಿಸಿದ್ದರು.

- ವ್ಯಕ್ತಿತ್ವ ವಿಕಸನಕ್ಕೆ ಇಂತಹ ಶಿಬಿರಗಳು ಸಹಕಾರಿ
- ಅತ್ಯುತ್ತಮ ಸಮಯ ಕಳೆದುಕೊಂಡರೆ ಮರಳಿ ಪಡೆಯಲು ಸಾಧ್ಯವಿಲ್ಲ

# 'ಕನ್ನಡ ಸಂಘಟನೆಗಳು ರಾಜಕೀಯದಿಂದ ದೂರವಿರುವುದು ಅಗತ್ಯ'

■ **ವಿಕ ಸುದ್ದಿಲೋಕ** ಬೆಂಗಳೂರು

ಕನ್ನಡ ಸಂಘಟನೆಗಳು ಪ್ರಾಮಾಣಿಕತೆ, ಲೆಕ್ಕಪತ್ರಗಳಲ್ಲಿ ಪಾರದರ್ಶಕತೆ ಉಳಿಸಿಕೊಂಡು ರಾಜಕೀಯದಿಂದ ದೂರವಿರಬೇಕು ಎಂದು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ಅಭಿಪ್ರಾಯಪಟ್ಟರು.

ಎಚ್‌ಎಎಲ್ ಕೇಂದ್ರೀಯ ಕನ್ನಡ ಸಂಘವು ಕನ್ನಡ ಸಂಘಟನೆಗಳ ಪದಾಧಿಕಾರಿಗಳು, ಕನ್ನಡ ಕಾರ್ಯಕರ್ತರು ಮತ್ತು ಆಸಕ್ತರಿಗೆ ಸಂಘದ ಸಭಾಂಗಣದಲ್ಲಿ ಮೂರು ದಿನಗಳ ಕಾಲ ಆಯೋಜಿಸಿದ್ದ 'ಕನ್ನಡ ಕಾರ್ಯಕರ್ತರ ಕಾರ್ಯಾಗಾರ'ದಲ್ಲಿ ಅವರು ಮಾತನಾಡಿದರು.

ಕಾರ್ಯಾಗಾರದ ಸಂಚಾಲಕ ಕನ್ನಡಪರ ಚಿಂತಕ ರಾ.ನಂ. ಚಂದ್ರಶೇಖರ ಮಾತನಾಡಿ, ''ಕನ್ನಡ-ಕನ್ನಡಿಗ-ಕರ್ನಾಟಕ'ಗಳು ಎದುರಿಸುತ್ತಿರುವ ಸಮಸ್ಯೆ, ಪರಿಹಾರೋಪಾಯ, ಹೋರಾಟದ ಮಾರ್ಗೋಪಾಯಗಳನ್ನು ತಿಳಿದುಕೊಂಡರೆ ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡಲು ಸಾಧ್ಯ,'' ಎಂದರು. ಕಾರ್ಯಾಗಾರದ 2ನೇ ದಿನ ಕನ್ನಡ ಹೋರಾಟಗಾರ ವ.ಚ. ಚನ್ನೇಗೌಡ 'ಸಾರ್ವಜನಿಕ ಪ್ರದರ್ಶನ- ಹೋರಾಟ ಸಭೆ ವ್ಯವಸ್ಥೆ- ನಿರ್ವಹಣೆ' ಕುರಿತು ಮಾತನಾಡಿದರು. ಮೂರನೆಯ ದಿನ ಪತ್ರಕರ್ತೆ, ಲೇಖಕಿ ಡಾ. ರೀಟಾ ರೀನಿ ಅವರು ಸಭೆ- ಸಮಾರಂಭಗಳ ಆಯೋಜನೆ, ನಿರ್ವಹಣೆ ಹಾಗೂ ಸಮೂಹ ಮಾಧ್ಯಮಗಳ ಸಂಪರ್ಕದ ಬಗ್ಗೆ ವಿವರಿಸಿದರು.

ಪ್ರಜಾವಾಣಿ ಶನಿವಾರ • ಸೆಪ್ಟೆಂಬರ್ 21, 2024

### ವಿಚಾರಸಂಕಿರಣ, ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ತುಷಾರ್ ಗಾಂಧಿ ಪ್ರತಿಪಾದನೆ

# ಏಕತೆಯ ಕಾಮನಬಿಲ್ಲು ಮಂಕು

ಪ್ರಜಾವಾಣಿ ವಾರ್ತೆ

ಮಂಗಳೂರು: ದ್ವೇಷದ ವಿಷಬೀಜ ಮೊಳೆತಿರುವ ಭಾರತದಲ್ಲಿ ಜಾತಿ, ಧರ್ಮವನ್ನು ಸಾರ್ವಜನಿಕವಾಗಿ ಪ್ರದರ್ಶಿಸುವುದರಿಂದ ಮತ್ತು ಜಾತ್ಯತೀತ ತತ್ವವನ್ನು ಗಾಳಿಗೆ ತೂರಿ ಚುನಾವಣೆ ನಡೆಸುವುದರಿಂದ ಐಕ್ಯದ ಕಾಮನಬಿಲ್ಲು ಮಂಕಾಗಿದೆ ಎಂದು ಮಹಾತ್ಮಗಾಂಧಿ ಅವರ ಮರಿಮಗ ಹಾಗೂ ಸಾಮಾಜಿಕ ಚಿಂತಕ ತುಷಾರ್ ಗಾಂಧಿ ಪ್ರತಿಪಾದಿಸಿದರು.

ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಮಂಗಳೂರು ವಿಶ್ವವಿದ್ಯಾಲಯ ಹಾಗೂ ಪುತ್ತೂರು ಕೆದಂಬಾಡಿಯ ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನ ನಗರದಲ್ಲಿ ಶುಕ್ರವಾರ ಆಯೋಜಿಸಿದ್ದ ವಿಚಾರಸಂಕಿರಣ ಮತ್ತು ಕೃತಿ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಚುನಾವಣೆಗಳು ಸಮೀಪಿಸುತ್ತಿದ್ದಂತೆ ದ್ವೇಷ ಬಿತ್ತುವ ಕೆಲಸ ಚುರುಕಾಗುತ್ತದೆ. ಜಾತಿ, ಧರ್ಮ ಮುನ್ನೆಲೆಗೆ ಬರುತ್ತದೆ. ಜಾತಿ ಆಧಾರದಲ್ಲೇ ಜನಪ್ರತಿನಿಧಿಗಳ ಆಯ್ಕೆ ಆಗುತ್ತದೆ. ಸಮುದಾಯಗಳ ಮತಗಳನ್ನು ಒಡೆಯುವ ಪಿತೂರಿಯೂ ನಡೆಯುತ್ತದೆ. ಒಟ್ಟಿನಲ್ಲಿ ಸಮಾಜ ಒಡೆಯುವುದೇ ಇತ್ತೀಚೆಗೆ ರಾಜಕಾರಣದ ಪ್ರಮುಖ ಭಾಗವಾಗಿದೆ. ಏಳು ಬಣ್ಣಗಳನ್ನು ಚೆಲ್ಲಾಪಿಲ್ಲಿ ಮಾಡಿದರೆ ಕಾಮನಬಿಲ್ಲು ಇರುವುದಿಲ್ಲ. ಭಾರತದ ಸಾಮಾಜಿಕ ಸ್ಥಿತಿಯೂ ಹಾಗೆಯೇ ಆಗಿದೆ. ಎಲ್ಲರನ್ನೂ ಪ್ರತ್ಯೇಕಿಸುವ ಪ್ರಯತ್ನ ಈಚೆಗೆ ಜೋರಾಗಿದೆ ಎಂದರು.

'ಜಾತಿ ಮತ್ತು ಧರ್ಮದ ಆಚರಣೆ, ಪ್ರದರ್ಶನ ಮನೆಗಷ್ಟೇ ಸೀಮಿತವಾಗಿರಬೇಕು. ಈಗ ಜಾತಿಯನ್ನು ಅಧಿಕೃತಗೊಳಿಸುವ ಪ್ರಯತ್ನ ನಡೆಯುತ್ತಿದೆ. ಸಾರ್ವಜನಿಕ ಸ್ಥಳದಲ್ಲಿ ಮತ್ತು ಕಚೇರಿಯಲ್ಲಿ ಜಾತಿ ಇರಬಾರದು. ಇಂಥ ಕಾಳಜಿಯಿಂದಲೇ ಗಾಂಧೀಜಿ ಕಾಂಗ್ರೆಸ್ ಕ್ಯಾಪ್ ಜಾರಿಗೆ ತಂದಿದ್ದರು. ಆದರೆ ಈಗ ಕಾಂಗ್ರೆಸ್‌ನಲ್ಲೇ ಆ ಸಂಸ್ಕೃತಿ ಉಳಿದಿಲ್ಲ' ಎಂದರು.

**ಕರ್ನಾಟಕದಲ್ಲಿ ರಾಜಕೀಯ ದುರಂತ**

ಕರ್ನಾಟಕದಲ್ಲಿ ರಾಜಕೀಯದ ಸಿದ್ಧಾಂತಗಳೇ ಬದಲಾಗಿವೆ. ಒಂದು ಪಕ್ಷದಿಂದ ಗೆದ್ದ ಪ್ರತಿನಿಧಿಗಳು ಹಣಕ್ಕಾಗಿ ಮತ್ತೊಂದು ಪಕ್ಷ ಸೇರಿದ್ದು ನಾಚಿಕೆಗೇಡಿನ ವಿಷಯ. ಪಕ್ಷಾಂತರ ಮಾಡಿದವರು ಮತ್ತೊಮ್ಮೆ ಚುನಾವಣೆಯಲ್ಲಿ ಗೆದ್ದಿರುವುದು ರಾಜಕೀಯದ ದೊಡ್ಡ ದುರಂತ. ಅವರು ಪಕ್ಷಕ್ಕೆ ಮಾತ್ರವಲ್ಲ, ಮತದಾರರಿಗೂ ಮೋಸ ಮಾಡಿದ್ದಾರೆ ಎಂದು ತುಷಾರ್ ಗಾಂಧಿ ಹೇಳಿದರು.



ತುಷಾರ್ ಗಾಂಧಿ ಅವರನ್ನು ಸನ್ಮಾನಿಸಲಾಯಿತು ಪ್ರಜಾವಾಣಿ ಚಿತ್ರ

**ಬಿಡುಗಡೆಗೊಂಡ ಪುಸ್ತಕಗಳು**

ದಿಫ್ಲೋರ್ ಐ ರಿಟರ್ನ್ ಟು ದ ಸೋಲ್, ಲೇಖಕ: ಇಳಂತಜೆ ಪ್ರಮೋದ್ ಕುಮಾರ್ ರೈ, ಪ್ರಕಾಶನ: ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನ, ಬೆಲೆ: ₹500

ಆನ್ ದ ಟ್ರೇಲ್ ಆಫ್ ಗಾಂಧೀಜಿಸ್ ಫುಟ್‌ಸ್ಟೆಪ್, ಲೇಖಕ: ಇಳಂತಜೆ ಪ್ರಮೋದ್ ಕುಮಾರ್ ರೈ, ಪ್ರಕಾಶನ: ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನ, ಬೆಲೆ: ₹500

**ಮಂಗಳೂರಿಗೆ ಗಾಂಧಿ ಸಂದೇಶ ಬೇಡವೇ?:**

ಮಹಾತ್ಮ ಗಾಂಧೀಜಿ ಮೂರು ಬಾರಿ ಬಂದು ಹೋಗಿದ್ದಾರೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಮಂಗಳೂರಿನ ಈಗಿನ ಪರಿಸ್ಥಿತಿ ಹೇಗಿದೆ ಎಂದು ಪ್ರಶ್ನಿಸಿದ ಅವರು ಇಲ್ಲಿ ರಾಜಕೀಯ ಪ್ರೇರಿತ ಧ್ರುವೀಕರಣ ನಡೆಯುತ್ತಿರುವುದು ನಾಚಿಕೆಗೇಡು. ಮಂಗಳೂರಿಗೆ ಗಾಂಧಿ ಸಂದೇಶ ಬೇಕೇ ಅಥವಾ ಅನ್ಯ ವಿಚಾರಗಳು ಬೇಕೇ ಎಂಬುದನ್ನು ಯೋಚಿಸಬೇಕಾಗಿದೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಮಂಗಳೂರು ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಕೆ.ಎಲ್ ಧರ್ಮ ಮಾತನಾಡಿ ದೇಶದ ರಾಜಕೀಯದಲ್ಲಿ ಪ್ರತಿ ಬಾರಿಯೂ ಪ್ರಯೋಗ ನಡೆಯುತ್ತಿದೆ. ಅದರ ಫಲವಾಗಿ ಸಿಕ್ಕಿರುವುದು ಜಾತಿ. ಧರ್ಮ ಮತ್ತು ಜಾತಿ ಪ್ರಯೋಗ ಮಾಡಿ ಗಾಂಧೀಜಿಗೆ ನಿತ್ಯವೂ ಅವಮಾನ ಮಾಡಲಾಗುತ್ತಿದೆ. ಈ ವಿಷಯದಕ್ಕೆ ಮಂಗಳೂರು ಬ್ರ್ಯಾಂಡ್ ಆಗುತ್ತಿದೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ನಿಟ್ಟೆ ವಿವಿ ಸಹಕುಲಾಧಿಪತಿ ಶಾಂತಾರಾಮ ಶೆಟ್ಟಿ, ಕುಂಬ್ರ ಜತ್ತಪ್ಪ ಪ್ರತಿಷ್ಠಾನದ ಸಂಸ್ಥಾಪಕ ಪ್ರಮೋದ್ ಕುಮಾರ್, ಮಂಗಳೂರು ವಿವಿ ಎನ್‌ಎಸ್‌ಎಸ್ ಅಧಿಕಾರಿ ಶೇಷಪ್ಪ ಕೆ, ಮಂಗಳೂರು ವಿವಿ ಕಾಲೇಜು ಪ್ರಾಚಾರ್ಯ ಗಣಪತಿ ಗೌಡ ಇದ್ದರು.

16-09-2024-8
16 Sep 2024

# ಇಂದು ಸಂಜೆ

INDU SANJE

POWERED BY. KHUSHIHOST® WEB DESIGN AND DEVELOPMENT

# 'ಸಕಾರಾತ್ಮಕ ಶಕ್ತಿಗಳನ್ನು ನಾವು ಸಕಾರಾತ್ಮಕ ಶಕ್ತಿಗಳಿಂದಲೇ ಎದುರಿಸಿ ಗೆಲ್ಲಬೇಕು'





ಬೆಂಗಳೂರು:" ಸಕಾರಾತ್ಮಕ ಶಕ್ತಿಗಳನ್ನು ನಾವು ಸಕಾರಾತ್ಮಕ ಶಕ್ತಿಗಳಿಂದಲೇ ಎದುರಿಸಿ ಗೆಲ್ಲಬೇಕು ಇವತ್ತು ಸರ್ ಎಂ ವಿಶ್ವೇಶ್ವರಯ್ಯನವರ ಜನ್ಮ ದಿನಾಚರಣೆ ಅವರ ಅತ್ಯಂತ ಶಿಸ್ತಿನ ವ್ಯಕ್ತಿ. ಇವತ್ತು ನಾವು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಿಂತು ಮಾತನಾಡಿ ಕನ್ನಡ ಚಿಂತನೆ ನಡೆಸ್ತಾ ಇದ್ದೇವೆ. ಎಂದರೆ ಆ ಕೀರ್ತಿ ವಿಶ್ವೇಶ್ವರಯ್ಯನವರಿಗೆ ಸಲ್ಲಬೇಕು ನಾವು ಏನೇ ಕೆಲಸ ಮಾಡಿದರೂ ಅದು ಸಾಂಘಿಕವಾಗಿರಬೇಕು. ಯಾಕೆಂದರೆ ಒಬ್ಬರಿಂದ ಏನು ಸಾಧಿಸಲಾಗದು. ಸಾರ್ವತ್ರಿಕವಾಗಿ ಸಮಾಜಕ್ಕೆ ಪ್ರಯೋಜನವಾಗಬೇಕೆಂದರೆ ಸಾಮೂಹಿಕ ಪ್ರಯತ್ನ ಅತ್ಯಗತ್ಯವಾಗಿದೆ ಎಂದು ಶೇಷಾದ್ರಿಪುರಂ ಕಾಲೇಜಿನ ಪ್ರಧಾನ ಕಾರ್ಯದರ್ಶಿ ನಾಡೋಜ ವುಡೆ ಪಿ ಕೃಷ್ಣರವರು ಅಭಿಪ್ರಾಯ ಪಟ್ಟರು.

ಅವರು ಬೆಂಗಳೂರು ನಗರ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತಿನ ಚುಟುಕು ಸಾಹಿತ್ಯ ಸಮ್ಮೇಳನದಲ್ಲಿ ಮುಖ್ಯ ಅತಿಥಿಯಾಗಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಬಿ ಶಿವಲಿಂಗೇಗೌಡರಿಗೆ ನಿಕಟಪೂರ್ವ ಅಧ್ಯಕ್ಷ ಡಾ. ಶ್ರೀಲತಾ ಎ ಅವರಿಂದ ಧ್ವಜ ಹಸ್ತಾಂತರಿಸಲಾಯಿತು. ಬೆಂಗಳೂರು ನಗರ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ ವಿಜಯ್ ಸಮರ್ಥರವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಸಾಹಿತ್ಯ ಪರಿಷತ್ತಿನ ಕೇಂದ್ರ ಸಮಿತಿಯ ಅಧ್ಯಕ್ಷರಾದ ಡಾ. ಎಂಜಿಆರ್ ಅರಸ್ ಕೌಸ್ತುಭ ಮಾಸಪತ್ರಿಕೆಯ ಸಂಪಾದಕಿ ರತ್ನ ಹಾಲಪ್ಪ ಗೌಡ. ವೇದಿಕೆಯಲ್ಲಿ ಉಪಸ್ಥಿತರಿದ್ದರು.

ವಿಚಾರಗೋಷ್ಠಿ ಕವಿಗೋಷ್ಠಿಗಳು ನಡೆದವು. ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಸಾಹಿತಿಗಳಾದ ನಾ ಗೀತಾಚಾರ್ಯ ಭಾಗವಹಿಸಿದ್ದರು. ರಾಮ್ ಕೆ ಹನುಮಂತಯ್ಯ ಅಂಬುಜಾಕ್ಷಿ ವೀರೇಶ್ ಮಧುರ ಡಿ ಮತ್ತು 30 ಸಾಧಕರಿಗೆ ರೇಣುಕಾಚಾರ್ಯ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಚುಟುಕು ಸಾಹಿತ್ಯ ಪರಿಷತ್ತ ವತಿಯಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಆವರಣದಲ್ಲಿ ಇರುವ ಕುವೆಂಪು ಸಭಾಂಗಣದಲ್ಲಿ ಚುಟುಕು ಸಮ್ಮೇಳನ ಏರ್ಪಡಿಸಲಾಗಿತ್ತು ಈ ಸಂದರ್ಭದಲ್ಲಿ ಕೇಂದ್ರ ಶ್ರೀ ಶಿವಲಿಂಗೆಗೌಡ ನಿವೃತ್ತ ನ್ಯಾಯಮೂರ್ತಿ ಹಾಗೂ ಚುಟುಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಎಂ.ಜಿ.ಅರಸ್ ಕೌಸ್ತುಭ ಪತ್ರಿಕೆ ಸಂಪಾದಕರು ಬೆಂಗಳೂರು ನಗರ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ವಿಜಯ್ ಸಮರ್ಥ ವರಿಂದ ಜಾಗೃತಿ ಟ್ರಸ್ಟ್ ಅಧ್ಯಕ್ಷರಾದ ಬಿ.ನಾಗೇಶ ಮತ್ತು ಜಾನಪದ ಕಲಾವಿದರಾದ ಗೌರಮ್ಮ ಅವರಿಗೆ ಸನ್ಮಾನಿಸಲಾಯಿತು

ಸಂಯುಕ್ತ ಕರ್ನಾಟಕ
Sep 15, 2024



# ಶೇಷಾದ್ರಿಪುರಂ ಕಾಲೇಜಿನಲ್ಲಿ ಘಟಿಕೋತ್ಸವ

ಬೆಂಗಳೂರು: ಶೇಷಾದ್ರಿಪುರಂ ಶಿಕ್ಷಣ ದತ್ತಿ ವತಿಯಿಂದ ಬೆಂಗಳೂರು, ಮೈಸೂರು, ತುಮಕೂರು ಶಿಕ್ಷಣ ಸಂಸ್ಥೆಗಳ ಪದವೀಧರರಿಗೆ ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ಶನಿವಾರ ವಾರ್ಷಿಕ ಘಟಿಕೋತ್ಸವ ಸಮಾರಂಭ ನಡೆಯಿತು.

ಸಮಾರಂಭದಲ್ಲಿ 15 ಪಿ.ಎಚ್‌ಡಿ ಪದವೀಧರರು, 18 ರ್‍ಯಾಂಕ್ ವಿಜೇತರು, 57 ಟಾಪರ್ಸ್‌ಗಳನ್ನು ಸನ್ಮಾನಿಸಲಾಯಿತು. 2300 ಪದವೀಧರ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಡಾ.ವೂಡೇ ಪಿ ಕೃಷ್ಣ ಉಪಸ್ಥಿತರಿದ್ದು ಪದವೀಧರರಿಗೆ ಪ್ರಮಾಣ ವಚನ ಬೋಧಿಸಿದರು.

ಮುಖ್ಯಅತಿಥಿಗಳಾಗಿ ಬೆಳಗಾವಿ ರಾಣಿ ಚೆನ್ನಮ್ಮ ವಿವಿ ಕುಲಪತಿ ಪ್ರೊ.ಸಿ.ಎಂ.ತ್ಯಾಗರಾಜ ಭಾಗವಹಿಸಿ ಮಾತನಾಡಿದರು, ಎಂ.ಎಸ್.ನಟರಾಜ್, ಪ್ರೊ.ಕೆ.ಪಿ. ನರಸಿಂಹಮೂರ್ತಿ, ಟಿ.ಸಿ.ನಾರಾಯಣ, ಕೆ.ಕೃಷ್ಣಸ್ವಾಮಿ, ಬಿ.ಎ.ಅನಂತರಾಮ್, ಡಬ್ಲ್ಯೂಡಿ. ವಿಜಯಕುಮಾರ್, ಡಬ್ಲ್ಯೂಡಿ. ಅಶೋಕ್ ಮತ್ತು ಪ್ರಾಂಶುಪಾಲರು ಡಾ.ಬಿ.ಜಿ. ಭಾಸ್ಕರ, ಡಾ. ಎಸ್.ಎನ್. ವೆಂಕಟೇಶ್, ಡಾ.ಎನ್.ಎಸ್. ಸತೀಶ್, ಡಾ. ಜಯರಾಮ, ಡಾ. ಪ್ರಣೀತಾ, ಪ್ರೊ.ವಿದ್ಯಾ ಶಿವಣ್ಣನವರ್, ಪ್ರೊ. ಸುಮತಿ ಸಿ, ಡಾ.ಸೌಮ್ಯ ಈರಪ್ಪ ಕೆ, ಡಾ.ಜಗದೀಶ ಜಿ.ಟಿ ಹಾಜರಿದ್ದರು.

ಸಮಯ ಮಿತ್ರ

15/9/2024

# ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ 2300 ವಿದ್ಯಾರ್ಥಿಗಳಿಗೆ ಪದವಿ ಪ್ರಧಾನ :



ಯಲಹಂಕ : ಯಲಹಂಕ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಘಟಿಕೋತ್ಸವ ಸಮಾರಂಭದಲ್ಲಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ ವಿವಿಧ ವಿಷಯಗಳಲ್ಲಿ ಪದವಿ ಪಡೆದ 2300 ವಿದ್ಯಾರ್ಥಿಗಳಿಗೆ ಪದವಿ ಪ್ರಧಾನ ಮಾಡಲಾಯಿತು.

ಅತ್ಯುನ್ನತ ರ್‍ಯಾಂಕ್ ಗಳಿಸಿದ 17 ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಹಾಗೂ ಪಿಹೆಚ್‌ಡಿ ಪಡೆದ 15 ಮಂದಿಯನ್ನು ಇದೇ ವೇಳೆ ಸನ್ಮಾನಿಸಿ ಗೌರವಿಸಲಾಯಿತು.

ಕಾರ್ಯಕ್ರಮ ಉದ್ದೇಶಿಸಿ ರಾಣಿ ಚೆನ್ನಮ್ಮ ವಿ.ವಿ.ಯ ಕುಲಪತಿ ಪ್ರೊ.ಸಿ.ಎಂ.ತ್ಯಾಗರಾಜ್ ಮಾತನಾಡಿ 'ದೇಶದಲ್ಲಿ ಇಂದು ಮನುಕುಲ ಹಣದ ಹಿಂದೆ ಬಿದ್ದಿದ್ದು, ಕೇವಲ ಹಣದ ಬಗ್ಗೆ ಚಿಂತಿಸದೆ, ಮನುಕುಲದ ಒಳಿತಿನ ಬಗ್ಗೆ ಚಿಂತಿಸುವ ವಿದ್ಯಾರ್ಥಿಗಳನ್ನು ತಯಾರು ಮಾಡಬೇಕಾದ ಮಹತ್ತರ ಜವಾಬ್ದಾರಿ ಅಧ್ಯಾಪಕರ ಮೇಲಿದೆ ಎಂದರು.

ವಿದ್ಯಾರ್ಥಿಗಳು ಕೇವಲ ಹೆಚ್ಚಿನ ಅಂಕಗಳನ್ನು ಪಡೆದು, ಪದವಿ ಗಳಿಸಿದರೆ ಸಾಲದು, ಬದುಕಿನಲ್ಲಿ ಒಳ್ಳೆಯ ಸಂಸ್ಕಾರ ಮತ್ತು ಮೌಲ್ಯಗಳನ್ನು ಅಳವಡಿಸಿಕೊಂಡು ಬದುಕಿನ ಜ್ಞಾನ ವೃದ್ಧಿಸಿಕೊಳ್ಳಬೇಕು. ನಾವು ಮಾಡುವ ಕೆಲಸ, ಹೊಸ ಚಿಂತನೆ ಮತ್ತು ಸಂಶೋಧನೆಗಳು ನಮ್ಮನ್ನು ಶ್ರೇಷ್ಠ ವ್ಯಕ್ತಿಗಳನ್ನಾಗಿ ರೂಪಿಸಿ, ಎತ್ತರಕ್ಕೆ ಕೊಂಡೊಯ್ಯುತ್ತವೆ ಎಂದರು.

ಶಿಕ್ಷಣತಜ್ಞ, ನಾಡೋಜ ಪ್ರೊ.ಪಿ.ಕೃಷ್ಣ ಮಾತನಾಡಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ 9 ಪದವಿ ತರಗತಿಗಳಲ್ಲಿ ಅಧ್ಯಯನ ಮಾಡಿದ ಒಟ್ಟು 2300 ವಿದ್ಯಾರ್ಥಿಗಳು ಇಂದು ವಿವಿಧ ವಿಷಯಗಳಲ್ಲಿ ಪದವಿಯನ್ನು ಪಡೆದಿರುವುದು ಹೆಮ್ಮೆಯ ಸಂಗತಿ, ಸಂಸ್ಥೆಯು ಹಿಂದಿನಿಂದಲೂ ಗುಣಮಟ್ಟ, ಸಂಸ್ಕಾರ ಮತ್ತು ಮೌಲ್ಯಯುತ ಶಿಕ್ಷಣಕ್ಕೆ ಆದ್ಯತೆ ನೀಡುತ್ತಾ ಬಂದಿದೆ. ಇಲ್ಲಿಂದ ಹೊರ ನಡೆದ ಅಸಂಖ್ಯಾತ ವಿದ್ಯಾರ್ಥಿಗಳು ಸಮಾಜದಲ್ಲಿ ಅತ್ಯುನ್ನತ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಸಹ ಕಾರ್ಯದರ್ಶಿ ಎಂ.ಎಸ್.ನಟರಾಜ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಎಂ.ಎ.ಪಾರ್ಥಸಾರಥಿ, ಆಡಳಿತ ಸಲಹಾ ಮಂಡಳಿಯ ಪದಾಧಿಕಾರಿಗಳಾದ ಡಬ್ಲ್ಯೂ.ಡಿ.ವಿಜಯಕುಮಾರ್, ಡಬ್ಲ್ಯೂ.ಡಿ.ಅಶೋಕ್, ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ.ಎಸ್.ಎನ್. ವೆಂಕಟೇಶ್ ಉಪಸ್ಥಿತರಿದ್ದರು.

ಪರಿವರ್ತನ ವಾಣಿ

15/9/2024

# ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ ಪದವಿ ಪಡೆದ

# 2300 ವಿದ್ಯಾರ್ಥಿಗಳಿಗೆ ಪದವಿ ಪ್ರಧಾನ :

ಯಲಹಂಕ : ಯಲಹಂಕ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಘಟಿಕೋತ್ಸವ ಸಮಾರಂಭದಲ್ಲಿ ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ ವಿವಿಧ ವಿಷಯಗಳಲ್ಲಿ ಪದವಿ ಪಡೆದ 2300 ವಿದ್ಯಾರ್ಥಿಗಳಿಗೆ ಪದವಿ ಪ್ರಧಾನ ಮಾಡಲಾಯಿತು.

ಅತ್ಯುನ್ನತ ರ‍್ಯಾಂಕ್ ಗಳಿಸಿದ 17 ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಹಾಗೂ ಪಿಎಚ್‌ಡಿ ಪಡೆದ 15 ಮಂದಿಯನ್ನು ಇದೇ ವೇಳೆ ಸನ್ಮಾನಿಸಿ ಗೌರವಿಸಲಾಯಿತು.

ಕಾರ್ಯಕ್ರಮ ಉದ್ದೇಶಿಸಿ ರಾಣಿ ಚೆನ್ನಮ್ಮ ವಿ.ವಿ.ಯ ಕುಲಪತಿ ಪ್ರೊ.ಸಿ.ಎಂ.ತ್ಯಾಗರಾಜ್ ಮಾತನಾಡಿ 'ದೇಶದಲ್ಲಿ ಇಂದು ಮನುಕುಲ ಹಣದ ಹಿಂದೆ ಬಿದ್ದಿದ್ದು, ಕೇವಲ ಹಣದ ಬಗ್ಗೆ ಚಿಂತಿಸದೆ, ಮನುಕುಲದ ಒಳಿತಿನ ಬಗ್ಗೆ ಚಿಂತಿಸುವ ವಿದ್ಯಾರ್ಥಿಗಳನ್ನು ತಯಾರು ಮಾಡಬೇಕಾದ ಮಹತ್ತರ ಜವಾಬ್ದಾರಿ ಅಧ್ಯಾಪಕರ ಮೇಲಿದೆ ಎಂದರು.

ವಿದ್ಯಾರ್ಥಿಗಳು ಕೇವಲ ಹೆಚ್ಚಿನ ಅಂಕಗಳನ್ನು ಪಡೆದು, ಪದವಿ ಗಳಿಸಿದರೆ ಸಾಲದು, ಬದುಕಿನಲ್ಲಿ ಒಳ್ಳೆಯ ಸಂಸ್ಕಾರ ಮತ್ತು ಮೌಲ್ಯಗಳನ್ನು ಅಳವಡಿಸಿಕೊಂಡು ಬದುಕಿನ ಜ್ಞಾನ ವೃದ್ಧಿಸಿಕೊಳ್ಳಬೇಕು. ನಾವು ಮಾಡುವ ಕೆಲಸ, ಹೊಸ ಚಿಂತನೆ ಮತ್ತು ಸಂಶೋಧನೆಗಳು ನಮ್ಮನ್ನು ಶ್ರೇಷ್ಠ ವ್ಯಕ್ತಿಗಳನ್ನಾಗಿ ರೂಪಿಸಿ, ಎತ್ತರಕ್ಕೆ ಕೊಂಡೊಯ್ಯುತ್ತವೆ ಎಂದರು.

ಶಿಕ್ಷಣತಜ್ಞ, ನಾಡೋಜ ಪ್ರೊ.ಕೆ.ಪಿ.ಕೃಷ್ಣ ಮಾತನಾಡಿ "ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ 9 ಪದವಿ ತರಗತಿಗಳಲ್ಲಿ ಅಧ್ಯಯನ ಮಾಡಿದ ಒಟ್ಟು 2300 ವಿದ್ಯಾರ್ಥಿಗಳು ಇಂದು ವಿವಿಧ ವಿಷಯಗಳಲ್ಲಿ ಪದವಿಯನ್ನು ಪಡೆದಿರುವುದು ಹೆಮ್ಮೆಯ ಸಂಗತಿ. ಸಂಸ್ಥೆಯು ಹಿಂದಿನಿಂದಲೂ ಗುಣಮಟ್ಟ, ಸಂಸ್ಕಾರ ಮತ್ತು ಮೌಲ್ಯಯುತ ಶಿಕ್ಷಣಕ್ಕೆ ಆದ್ಯತೆ ನೀಡುತ್ತಾ ಬಂದಿದೆ. ಇಲ್ಲಿಂದ ಹೊರ ನಡೆದ ಅಸಂಖ್ಯಾತ ವಿದ್ಯಾರ್ಥಿಗಳು ಸಮಾಜದಲ್ಲಿ ಅತ್ಯುನ್ನತ ಹುದ್ದೆಗಳಲ್ಲಿ



ಕಾರ್ಯ ನಿರ್ವಹಿಸುತ್ತಿದ್ದಾರೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್.ಹಂಜಾರಪ್ಪ, ಸಹ ಕಾರ್ಯದರ್ಶಿ ಎಂ.ಎಸ್.ನಟರಾಜ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಎಂ.ಎ.ಪಾರ್ಥಸಾರಥಿ, ಆಡಳಿತ ಸಲಹಾ ಮಂಡಳಿಯ ಪದಾಧಿಕಾರಿಗಳಾದ ಡಬ್ಲ್ಯು.ಡಿ. ವಿಜಯಕುಮಾರ್, ಡಬ್ಲ್ಯು.ಡಿ.ಅಶೋಕ್, ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ.ಎಸ್.ಎನ್. ವೆಂಕಟೇಶ್ ಉಪಸ್ಥಿತರಿದ್ದರು.

ಪ್ರಜಾವಾಣಿ




ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ಘಟಿಕೋತ್ಸವದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ವತಿಯಿಂದ ಬೆಂಗಳೂರು, ಮೈಸೂರು, ತುಮಕೂರು ಶಿಕ್ಷಣ ಸಂಸ್ಥೆಗಳ ಪದವೀಧರರನ್ನು ಸನ್ಮಾನಿಸಲಾಯಿತು. 15 ಪಿಎಚ್‌ಡಿ ಪದವೀಧರರು, 18 ರ‍್ಯಾಂಕ್ ವಿಜೇತರು, 57 ಟಾಪರ್‌ಗಳನ್ನು ಸನ್ಮಾನಿಸಲಾಯಿತು. ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಕುಲಪತಿ ಸಿ.ಎಂ. ತ್ಯಾಗರಾಜ, ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು

ಸಂಯುಕ್ತ ಕರ್ನಾಟಕ

ಶನಿವಾರ 14 ಸೆಪ್ಟೆಂಬರ್ 2024

ಬೆಂಗಳೂರು | BENGALURU



# ಸಂವಿಧಾನದ ಅರಿವು ಅಗತ್ಯ: ಮೊಯಿಲಿ

ಬೆಂಗಳೂರು: ಸಂವಿಧಾನವೇ ನಮಗೆ ಪರಮೋಚ್ಚ. ಸರ್ಕಾರವೂ ಅಲ್ಲ, ನ್ಯಾಯಾಲಯವೂ ಅಲ್ಲ. ಸಂವಿಧಾನದ ಬಗ್ಗೆ ಎಲ್ಲರೂ ತಿಳಿದುಕೊಳ್ಳಲೇಬೇಕಾದ ಅನಿವಾರ್ಯತೆ ಇದೆ ಎಂದು ಮಾಜಿ ಮುಖ್ಯಮಂತ್ರಿ ಡಾ.ಎಂ.ವೀರಪ್ಪಮೊಯಿಲಿ ತಿಳಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಎಂ.ವಿ.ಆರ್.ಫೌಂಡೇಷನ್ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ಆಯೋಜಿಸಿದ್ದ ಡಾ.ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆ ಮತ್ತು ದತ್ತಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು. ಬಹುಮುಖ್ಯವಾಗಿ ಇಂದಿನ ಮಕ್ಕಳು ಸಂವಿಧಾನವನ್ನು ಅರಿತುಕೊಂಡು, ಅದನ್ನು ಉಳಿಸುವ ಕೆಲಸ ಮಾಡಬೇಕಾದ ಅಗತ್ಯತೆ ಇದೆ ಎಂದು ಹೇಳಿದರು.

ಸ್ವಾತಂತ್ರ್ಯ ನಂತರ ನಮಗೆ ಆನೇಕ ಸವಾಲುಗಳು ಎದುರಾಗಿವೆ. ಆದರೆ ನಮ್ಮ ಬಲಿಷ್ಠ ಸಂವಿಧಾನ ನಮಗೆ ಆಶ್ರಯವಾಗಿ ನಿಂತಿದೆ ಎಂಬುದನ್ನು ಮರೆಯುವಂತಿಲ್ಲ. ಇಡೀ ಪ್ರಪಂಚದಲ್ಲಿ ಭಾರತದ ಸಂವಿಧಾನ ವಿಭಿನ್ನತೆ ಕೂಡಿದೆ. ಇದು ನಮ್ಮ ದೇಶವನ್ನು ಸುಭದ್ರವಾಗಿ ತಲೆ ಎತ್ತಿ ನಿಲ್ಲುವಂತೆ ಮಾಡಿದೆ. ಸಂವಿಧಾನ ರಚನೆಯಲ್ಲಿ ಬಹಳಷ್ಟು ಜನರು ಕೆಲಸ ಮಾಡಿದ್ದಾರೆ. ಸಂವಿಧಾನದ ಮೇಲೆ ನೂರಾರು ದಿನ ಚರ್ಚೆ ನಡೆದು, ಅದನ್ನು ಅಂಗೀಕರಿಸಿಕೊಳ್ಳಲಾಗಿದೆ. ಅದನ್ನು ಉಳಿಸಿಕೊಳ್ಳುವ ಕೆಲಸ ಮಾಡಬೇಕಾಗಿದೆ ಎಂದು ತಿಳಿಸಿದರು.

ಗಾಂಧಿ ತತ್ವ ಸಿದ್ಧಾಂತಗಳಲ್ಲಿ ಅಪಾರವಾದ ನಂಬಿಕೆ ಇಟ್ಟು ಆದರಂತೆ ಬದುಕನ್ನು ರೂಪಿಸಿಕೊಂಡವರು. ಅದರಂತೆ ತಮ್ಮ ಬದುಕಿನಲ್ಲಿ ಸರಳತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡು ಪ್ರಬುದ್ಧ ರಾಜಕಾರಣಿ ಆಗಿದ್ದರು. ಲೋಕಸಭೆ, ರಾಜ್ಯಸಭೆ ಹಾಗೂ ವಿಧಾನಪರಿಷತ್ ಸದಸ್ಯರಾಗಿ ಅತ್ಯುತ್ತಮ ಸಂಸದೀಯ ಪಟುವಾಗಿ ಗುರುತಿಸಿಕೊಂಡಿದ್ದರು. ಇವರು ವ್ಯಕ್ತಿತ್ವ ಒಂದು ತರಹದ ಇತರರಿಗೆ ಮಾದರಿಯಾಗಬಲ್ಲದು ಎಂದು ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಯುವಕರು ಸಂವಿಧಾನವನ್ನು ಕಡ್ಡಾಯವಾಗಿ ಓದಬೇಕಾಗಿದೆ. ಈ ನಿಟ್ಟಿನಲ್ಲಿ ಹೆಚ್ಚು ಆಸಕ್ತಿ ಬೆಳೆಸಿಕೊಳ್ಳುವುದು ಬಹುಮುಖ್ಯವಾಗಿದೆ. ತಮ್ಮ ಹಕ್ಕುಗಳು, ಕರ್ತವ್ಯಗಳ ಬಗ್ಗೆ ಅರಿತುಕೊಂಡು ಬಾಳ್ವೆ ನಡೆಸಲು ಸಂವಿಧಾನ ಓದು ಅತ್ಯವಶ್ಯಕ ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಎಂ.ವಿ.ರಾಜಶೇಖರನ್ ಅವರು ಪರಿಶುದ್ಧ ರಾಜಕಾರಣಿಯಾಗಿ ಇತರರಿಗೆ ಮಾದರಿಯಾಗುವಂತೆ ಬದುಕು ನಡೆಸಿದ ಶ್ರೇಷ್ಠ ವ್ಯಕ್ತಿ ಎಂದೇ ತಿಳಿಯಬಹುದಾಗಿದೆ ಎಂದರು.

ಮಾಜಿ ಸಂಸದ ಎಚ್.ಹನುಮಂತಪ್ಪ ಮಾತನಾಡಿ, ಮಹಾತ್ಮ ಗಾಂಧೀಜಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್ ಅವರ ಸಂದೇಶಗಳಂತೆ ಬದುಕು ತೋರಿಸಿದವರು. ಮಾಜಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪ ಅವರ ಅಳಿಯರಾದರೂ ಕೂಡ ತಮ್ಮ ಸ್ವಪರಿಶ್ರಮದ ಮೇಲೆ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಕೊಂಡ ಬಗೆಯೇ ವಿಶೇಷತೆಯಿಂದ ಕೂಡಿದೆ ಎಂದು ತಿಳಿಸಿದರು. ಎಂವಿಆರ್ ಫೌಂಡೇಷನ್ ಅಧ್ಯಕ್ಷ ಮಂಜುನಾಥ್ ಪಿ.ಬಿಜ್ಜಳ್ಳಿ, ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಎಚ್.ಶಿವಲಿಂಗಯ್ಯ ಇತರರಿದ್ದರು. ಶಾಲಾ–ಕಾಲೇಜು ವಿದ್ಯಾರ್ಥಿಗಳು ದತ್ತಿಉಪನ್ಯಾಸದಲ್ಲಿ ಪಾಲ್ಗೊಂಡಿದ್ದರು.



ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಎಂ.ವಿ.ಆರ್.ಫೌಂಡೇಷನ್ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ಆಯೋಜಿಸಿದ್ದ ಡಾ.ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆ ಮತ್ತು ದತ್ತಿ ಕಾರ್ಯಕ್ರಮವನ್ನು ಮಾಜಿ ಮುಖ್ಯಮಂತ್ರಿ ಡಾ.ಎಂ.ವೀರಪ್ಪಮೊಯಿಲಿ ಗಿಡಕ್ಕೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಇತರರಿದ್ದಾರೆ.

ಕನ್ನಡಪ್ರಭ ಶನಿವಾರ 14.09.2024



ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ಡಾ। ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆ ಮತ್ತು ದತ್ತಿ ಕಾರ್ಯಕ್ರಮ'ದಲ್ಲಿ ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯ್ಲಿ ಅವರು ರಾಜಶೇಖರನ್ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಹಾಜರಿದ್ದರು.

ಎಂವಿಆರ್ ಜನ್ಮ ದಿನಾಚರಣೆ

# ಪ್ರಬುದ್ಧ ರಾಜಕಾರಣಿ ಎಂವಿಆರ್: ಮೊಯ್ಲಿ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಕೇಂದ್ರದ ಮಾಜಿ ಸಚಿವ ಡಾ। ಎಂ.ವಿ. ರಾಜಶೇಖರನ್ ಅವರು ಅತ್ಯುತ್ತಮ ಸಂಸದೀಯ ಪಟುವಾಗಿದ್ದರು. ಜೀವನದಲ್ಲಿ ಸರಳತೆಯನ್ನು ಮೈಗೂಡಿಸಿಕೊಂಡಿದ್ದ ಪ್ರಬುದ್ಧ ರಾಜಕಾರಣಿಯಾಗಿದ್ದರು ಎಂದು ಮಾಜಿ ಸಿಎಂ ಎಂ.ವೀರಪ್ಪ ಮೊಯ್ಲಿ ಪ್ರಶಂಸಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಎಂ.ವಿ.ಆರ್. ಫೌಂಡೇಷನ್, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಶುಕ್ರವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ಡಾ.ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆ ಮತ್ತು ದತ್ತಿ ಕಾರ್ಯಕ್ರಮ'ವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ರಾಜಶೇಖರನ್ ಅತ್ಯುತ್ತಮ ರಾಜಕಾರಣಿಯಾಗಿರುವ ಜೊತೆಗೆ ಉತ್ತಮ ಸಂಸದೀಯ ಪಟುವಾಗಿದ್ದರು. ಅವರ ಪಕ್ಷ ನಿಷ್ಠೆ ಅನುಕರಣೀಯ ಎಂದರು. ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿದರು. ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಎಚ್.ಶಿವಲಿಂಗಯ್ಯ, ಎಂ.ವಿ.ಆರ್.ಫೌಂಡೇಷನ್‌ಅಧ್ಯಕ್ಷಮಂಜುನಾಥ್ ಪ್ರಿ.ಬಿಜ್ಜಳ್ಳಿ, ಸಂಧ್ಯಾ ಪ್ರದೀಪ್ ಕುಮಾರ್, ಗೌರವ ಕಾರ್ಯದರ್ಶಿ ಎಂ.ಸಿ.ನರೇಂದ್ರ ಇದ್ದರು.

ಈ ಸಂಜೆ

Sep 14, 2024




ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ವಾರ್ಷಿಕ ಘಟಿಕೋತ್ಸವದಲ್ಲಿ ಬೆಳಗಾವಿಯ ರಾಣಿ ಚೆನ್ನಮ್ಮ ವಿವಿಯ ಕುಲಪತಿ ಪ್ರೊ. ಸಿಎಂ ತ್ಯಾಗರಾಜ, ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ, ನಾಡೋಜ, ಡಾ. ವೂಡೇ.ಪೀ ಕೃಷ್ಣ, ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಪ್ರೊ. ನರಸಿಂಹಮೂರ್ತಿ ಮತ್ತಿತರರಿದ್ದರು:

ಸಮಸ್ತ ಕನ್ನಡಿಗ[illegible]ಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ

Sep 13, 2024




ಗಾಂಧಿಭವನದಲ್ಲಿಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಎಂವಿಆರ್ ಫೌಂಡೇಷನ್ ವತಿಯಿಂದ ಹಮ್ಮಿಕೊಂಡಿದ್ದ ಡಾ.ಎಂ.ವಿ.ರಾಜಶೇಖರನ್ ಜನ್ಮ ದಿನಾಚರಣೆ ಹಾಗೂ ದತ್ತಿ ಕಾರ್ಯಕ್ರಮದಲ್ಲಿ ಮಾಜಿ ಸಿಎಂ ವೀರಪ್ಪಮೊಯ್ಲಿ, ನಾಡೋಜ ಡಾ.ವೂಡೆ ಪಿ.ಕೃಷ್ಣ, ಎಂವಿಆರ್ ಫೌಂಡೇಷನ್ ಅಧ್ಯಕ್ಷ ಮಂಜುನಾಥ್ ಪಿ.ಬಜ್ಜಳ್ಳಿ, ಏಷ್ಯಾ ಗ್ರಾಮಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಹೆಚ್.ಶಿವಲಿಂಗಯ್ಯ, ಹೆಚ್.ಹನುಮಂತಯ್ಯ, ಸಂಧ್ಯಾ ಪ್ರದೀಪ್ ಕುಮಾರ್, ನರೇಂದ್ರ ಮತ್ತಿತರರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ಕನ್ನಡಪ್ರಭ
ಸೆಪ್ಟೆಂಬರ್ 7, 2024

# ಶೇಷಾದ್ರಿಪುರ ಕಾಲೇಜಿನ ವಿದ್ಯಾರ್ಥಿಗಳಿಗೆ ಸನ್ಮಾನ

## ಯಲಹಂಕ ಶಾಖೆಯಿಂದ ದ್ವಿತೀಯ ಪಿಯುನಲ್ಲಿ ರ್‍ಯಾಂಕ್ ಪಡೆದ ಮಕ್ಕಳಿಗೆ ಅಭಿನಂದನೆ

• ಕನ್ನಡಪ್ರಭ ವಾರ್ತೆ ಯಲಹಂಕ

ಜೀವನದಲ್ಲಿ ಒಳ್ಳೆಯ ಸಂಸ್ಕಾರ ಮತ್ತು ಮೌಲ್ಯಗಳನ್ನು ಅಳವಡಿಸಿಕೊಂಡು, ಕಠಿಣ ಪರಿಶ್ರಮ, ಬದ್ಧತೆ ಮತ್ತು ಸಮರ್ಪಣಾ ಮನೋಭಾವದಿಂದ ಮುನ್ನಡೆದರೆ ಯಶಸ್ಸು ನಮ್ಮನ್ನು ಸದಾ ಹಿಂಬಾಲಿಸುತ್ತದೆ ಎಂದು ಆದಿಚುಂಚನಗಿರಿ ವಿಶ್ವವಿದ್ಯಾಲಯದ ಕುಲಪತಿ ಡಾ| ಎಂ.ಎ.ಶೇಖರ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ 2023-24ನೇ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ರ್‍ಯಾಂಕ್‌ಗಳಿಸಿದ ವಿದ್ಯಾರ್ಥಿಗಳಿಗಾಗಿ ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ಮಾತನಾಡಿದರು. ವಿದ್ಯಾರ್ಥಿಗಳ ಕಠಿಣ ಪರಿಶ್ರಮ, ಶಿಕ್ಷಕರ ಶ್ರಮ ಮತ್ತು ಪೋಷಕರ ಸಹಕಾರದಿಂದ ಈ ಸಾಧನೆ ಮಾಡಲು ಸಾಧ್ಯವಾಗಿದೆ. ವಿದ್ಯಾರ್ಥಿಗಳು ತಂದೆ-ತಾಯಿ, ಶಿಕ್ಷಕರು ಹಾಗೂ ಗುರುಹಿರಿಯರನ್ನು ಸದಾ ಗೌರವಿಸಬೇಕು ಎಂದರು.

ಶಿಕ್ಷಣ ತಜ್ಞ ಪ್ರೊ.ಪಿ.ಕೃಷ್ಣ ಮಾತನಾಡಿ, ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ 7 ಪದವಿಪೂರ್ವ ಕಾಲೇಜುಗಳ ವಿದ್ಯಾರ್ಥಿಗಳು 83 ರಾಜ್ಯಮಟ್ಟದ ರ್‍ಯಾಂಕ್ ಪಡೆದಿದ್ದಾರೆ. ಈ ಪೈಕಿ ಶೇಷಾದ್ರಿಪುರ ಸಂಯುಕ್ತ ಪದವಿಪೂರ್ವ ಕಾಲೇಜಿನ ವಿಜ್ಞಾನ ವಿಭಾಗದ ವಿದ್ಯಾರ್ಥಿ ರಾಜ್ಯಕ್ಕೇ ಪ್ರಥಮ ರ್‍ಯಾಂಕ್ ಗಳಿಸಿದ್ದಾನೆ. 94 ಸುದೀರ್ಘ ವರ್ಷಗಳ ಇತಿಹಾಸ ಇರುವ ಈ ಸಂಸ್ಥೆಯಲ್ಲಿ ಇದೇ ಮೊದಲ ಬಾರಿ ಇಷ್ಟೊಂದು ರ್‍ಯಾಂಕ್ ಗಳಿಸುವ ಮೂಲಕ ವಿದ್ಯಾರ್ಥಿಗಳು ಐತಿಹಾಸಿಕ ಮೈಲಿಗಲ್ಲು ಸಾಧಿಸಿರುವುದು ಹೆಮ್ಮೆಯ ಸಂಗತಿಯಾಗಿದೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಸಹಕಾರ್ಯದರ್ಶಿ ಎಂ.ಎಸ್.ನಟರಾಜ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಬಿ.ಎಂ.ಪಾರ್ಥಸಾರಥಿ, ಪ್ರಥಮ ದರ್ಜೆ ಹಾಗೂ ಪಿಯು ಕಾಲೇಜಿನ ಪ್ರಾಂಶುಪಾಲರಾದ ಡಾ| ಎಸ್.ಎನ್.ವೆಂಕಟೇಶ್, ಪ್ರೊ.ಟಿ.ದೊಡ್ಡೇಗೌಡ ಇದ್ದರು.



ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ರ್‍ಯಾಂಕ್ ಗಳಿಸಿದ 83 ವಿದ್ಯಾರ್ಥಿಗಳನ್ನು ಗೌರವಿಸಲಾಯಿತು. ಪ್ರೊ. ಪಿ.ಕೃಷ್ಣ, ಡಾ| ಎಂ.ಎ.ಶೇಖರ್, ಟಿ.ಎಸ್.ಹೆಂಜಾರಪ್ಪ, ಎಂ.ಎಸ್.ನಟರಾಜ್, ಎಸ್.ಶೇಷನಾರಾಯಣ, ಬಿ.ಎಂ.ಪಾರ್ಥಸಾರಥಿ, ಡಾ| ಎಸ್.ಎನ್.ವೆಂಕಟೇಶ್, ಪ್ರೊ.ಟಿ.ದೊಡ್ಡೇಗೌಡ ಇದ್ದರು.

ಉದಯಕಾಲ
ಕನ್ನಡಿಗರ ಜೀವಾಳ
ಸೆಪ್ಟೆಂಬರ್ 7, 2024

# ಕಠಿಣ ಪರಿಶ್ರಮದಿಂದ ಯಶಸ್ಸು ಸಾಧ್ಯ: ಡಾ.ಎಂ.ಎ.ಶೇಖರ್



ಯಲಹಂಕ: ಜೀವನದಲ್ಲಿ ಉತ್ತಮ ಸಂಸ್ಕಾರ ಮತ್ತು ಮೌಲ್ಯಗಳನ್ನು ಅಳವಡಿಸಿಕೊಂಡು, ಕಠಿಣ ಪರಿಶ್ರಮ, ಬದ್ಧತೆ ಮತ್ತು ಸಮರ್ಪಣಾ ಮನೋಭಾವದಿಂದ ಮುನ್ನಡೆದರೆ ಯಶಸ್ಸು ನಮ್ಮನ್ನು ಸದಾ ಹಿಂಬಾಲಿಸುತ್ತದೆ ಎಂದು ಆದಿಚುಂಚನಗಿರಿ ವಿಶ್ವವಿದ್ಯಾಲಯದ ಕುಲಪತಿ ಡಾ.ಎಂ.ಎ.ಶೇಖರ್ ಅಭಿಪ್ರಾಯಪಟ್ಟರು. ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ 2023-24ನೇ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ರ್‍ಯಾಂಕ್ ಗಳಿಸಿದ ವಿದ್ಯಾರ್ಥಿಗಳಿಗಾಗಿ ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದರು.

ಶಿಕ್ಷಣ ತಜ್ಞ, ನಾಡೋಜ ಪ್ರೊಫೆ.ಪಿ.ಕೃಷ್ಣ, ಶೇಷಾದ್ರಿಪುರ ಶಿಕ್ಷಣದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಸಹ ಕಾರ್ಯದರ್ಶಿ ಎಂ.ಎಸ್. ನಟರಾಜ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಬಿ.ಎಂ.ಪಾರ್ಥ ಸಾರಥಿ, ಪ್ರಥಮ ದರ್ಜೆ ಹಾಗೂ ಪಿಯು ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್.ಎನ್. ವೆಂಕಟೇಶ್, ಪ್ರೊ.ಟಿ.ದೊಡ್ಡೇಗೌಡ ಇದ್ದರು.

ಬಯಲು ಸಿಂಹ

ಸೆಪ್ಟೆಂಬರ್ 7, 2024

# ಒಳ್ಳೆಯ ಸಂಸ್ಕಾರ, ಮೌಲ್ಯಗಳನ್ನು ಅಳವಡಿಸಿಕೊಂಡು ಕಠಿಣ ಪರಿಶ್ರಮ ಪಟ್ಟರೆ ಯಶಸ್ಸು ಸಾಧ್ಯ : ಡಾ.ಎಂ.ಎ.ಶೇಖರ್



ಯಲಹಂಕ: ಜೀವನದಲ್ಲಿ ಒಳ್ಳೆಯ ಸಂಸ್ಕಾರ ಮತ್ತು ಮೌಲ್ಯಗಳನ್ನು ಅಳವಡಿಸಿಕೊಂಡು, ಕಠಿಣ ಪರಿಶ್ರಮ, ಬದ್ಧತೆ ಮತ್ತು ಸಮರ್ಪಣಾ ಮನೋಭಾವದಿಂದ ಮುನ್ನಡೆದರೆ ಯಶಸ್ಸು ನಮ್ಮನ್ನು ಸದಾ ಹಿಂಬಾಲಿಸುತ್ತದೆ ಎಂದು ಆದಿಚುಂಚನಗಿರಿ ವಿಶ್ವವಿದ್ಯಾಲಯದ ಕುಲಪತಿ ಡಾ.ಎಂ.ಎ.ಶೇಖರ್ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳಲ್ಲಿ 2023-24ನೇ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ರ್‍ಯಾಂಕ್ ಗಳಿಸಿದ ವಿದ್ಯಾರ್ಥಿಗಳಿಗಾಗಿ ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದ ಅವರು 'ವಿದ್ಯಾರ್ಥಿಗಳ ಕಠಿಣ ಪರಿಶ್ರಮ, ಶಿಕ್ಷಕರ ಶ್ರಮ ಮತ್ತು ಪೋಷಕರ ಸಹಕಾರದಿಂದ ಈ ಸಾಧನೆ ಮಾಡಲು ಸಾಧ್ಯವಾಗಿದೆ. ವಿದ್ಯಾರ್ಥಿಗಳು ತಂದೆ-ತಾಯಿ, ಶಿಕ್ಷಕರು ಹಾಗೂ ಗುರು ಹಿರಿಯರನ್ನು ಸದಾ ಗೌರವಿಸಬೇಕು ಎಂದರು.

ಶಿಕ್ಷಣ ತಜ್ಞ, ನಾಡೋಜ ವೂಡೆ.ಪಿ.ಕೃಷ್ಣ ಮಾತನಾಡಿ 'ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ 7 ಪದವಿಪೂರ್ವ ಕಾಲೇಜುಗಳ ವಿದ್ಯಾರ್ಥಿಗಳು 83 ರಾಜ್ಯಮಟ್ಟದ ರ್‍ಯಾಂಕ್ ಗಳನ್ನು ಪಡೆದಿದ್ದಾರೆ. ಈ ಪೈಕಿ ಶೇಷಾದ್ರಿಪುರ ಸಂಯುಕ್ತ ಪದವಿಪೂರ್ವ ಕಾಲೇಜಿನ ವಿಜ್ಞಾನ ವಿಭಾಗದ ವಿದ್ಯಾರ್ಥಿ ರಾಜ್ಯಕ್ಕೇ ಪ್ರಥಮ ರ್‍ಯಾಂಕ್ ಗಳಿಸಿದ್ದಾನೆ.

94 ಸುದೀರ್ಘ ವರ್ಷಗಳ ಇತಿಹಾಸ ಇರುವ ಈ ಸಂಸ್ಥೆಯಲ್ಲಿ ಇದೇ ಮೊದಲ ಬಾರಿ ಇಷ್ಟೊಂದು ರ್‍ಯಾಂಕ್ ಗಳಿಸುವ ಮೂಲಕ ವಿದ್ಯಾರ್ಥಿಗಳು ಐತಿಹಾಸಿಕ ಮೈಲಿಗಲ್ಲು ಸಾಧಿಸಿರುವುದು ಹೆಮ್ಮೆಯ ಸಂಗತಿಯಾಗಿದೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಶಿಕ್ಷಣದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಸಹ ಕಾರ್ಯದರ್ಶಿ ಎಂ.ಎಸ್.ನಟರಾಜ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಖಜಾಂಚಿ ಬಿ.ಎಂ.ಪಾರ್ಥಸಾರಥಿ, ಪ್ರಥಮ ದರ್ಜೆ ಹಾಗೂ ಪಿಯು ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್.ಎನ್.ವೆಂಕಟೇಶ್, ಪ್ರೊ.ಟಿ.ದೊಡ್ಡೇಗೌಡ ಸೇರಿದಂತೆ ಇನ್ನಿತರರಿದ್ದರು.

ಸಂಯುಕ್ತ ಕರ್ನಾಟಕ ಮಂಗಳವಾರ 3 ಸೆಪ್ಟೆಂಬರ್ 2024
ಬೆಂಗಳೂರು | BENGALURU

# ಮಾನವೀಯ ಮೌಲ್ಯಗಳು ಭವಿಷ್ಯಕ್ಕೆ ಅಡಿಪಾಯ

ಬೆಂಗಳೂರು: ನಡೆ-ನುಡಿ, ಆಚಾರಗಳಿಂದ ಮಾನವೀಯ ಗುಣಗಳನ್ನು ಬೆಳೆಸಲು ಸಾಧ್ಯ ಎಂದು ನಿವೃತ್ತ ನ್ಯಾಯಾಧೀಶ ಎನ್. ಸಂತೋಷ್ ಹೆಗ್ಡೆ ತಿಳಿಸಿದರು.

ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆಯ ಸಂಯುಕ್ತಾಶ್ರಯದಲ್ಲಿ ಗಾಂಧಿಭವನದಲ್ಲಿ ನಡೆದ 'ಡಾ.ಕೆ.ನಾಗಪ್ಪ ಆಳ್ವ ಮತ್ತು ಕಲ್ಯಾಣಿ ನಾಗಪ್ಪ ಆಳ್ವ ದತ್ತಿ ಉಪನ್ಯಾಸ' ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು. ಪ್ರಜಾಪ್ರಭುತ್ವದ ಆಧಾರ ಸ್ತಂಭಗಳಾದ ನ್ಯಾಯಾಂಗ, ಕಾರ್ಯಾಂಗ, ಶಾಸಕಾಂಗ ಮತ್ತು ಮಾಧ್ಯಮಗಳ ಬಗ್ಗೆ ಅರಿತು ನಡೆಯಬೇಕು. ಕಾನೂನಿನ ನಿಯಮ ಸಮಾನತೆ ಮತ್ತು ನ್ಯಾಯವನ್ನು ಖಾತ್ರಿಪಡಿಸುವುದು, ಮುಕ್ತ ಮತ್ತು ನ್ಯಾಯಯುತ ಚುನಾವಣೆಗಳು, ನಾಗರಿಕರು ತಮ್ಮ ನಾಯಕರನ್ನು ಆಯ್ಕೆ ಮಾಡಲು ಅವಕಾಶ ಮಾಡಿಕೊಡುತ್ತಾರೆ. ಮಾನವ ಹಕ್ಕುಗಳ ರಕ್ಷಣೆ, ವೈಯಕ್ತಿಕ ಸ್ವಾತಂತ್ರ್ಯಗಳನ್ನು ರಕ್ಷಿಸುವುದು, ದುರುಪಯೋಗವನ್ನು ತಡೆಗಟ್ಟಲು ಸರ್ಕಾರದ ಶಾಖೆಗಳ ನಡುವೆ ಅಧಿಕಾರವನ್ನು ವಿತರಿಸಿ, ಪ್ರಜಾಸತ್ತಾತ್ಮಕ ಮೌಲ್ಯಗಳು ಉಳಿಸಿಕೊಂಡು ಹೋಗಬೇಕೆಂದರು.

ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಕಾನೂನುಗಳು ಏನೇ ಇರಲಿ ಮೊದಲು ನಾವು ಉತ್ತಮ ನಾಗರಿಕರಾಗಬೇಕು. ಈ ನಿಟ್ಟಿನಲ್ಲಿ ಗಾಂಧಿಜೀಯವರ ಮೌಲ್ಯಗಳು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ ಎಂದು ಹೇಳಿದರು.

ಸರ್ವೋದಯ ಕಾರ್ಯಕರ್ತ ಇ.ಪಿ ಮೆನನ್ ಮಾತನಾಡಿ, ನಮ್ಮ ದೇಶದ ಬೆನ್ನೆಲುಬು ರೈತರು ಪಡುತ್ತಿರುವ ಕಷ್ಟವನ್ನು ತಿಳಿದು ಅವರಿಗೆ ನ್ಯಾಯ ನೀಡುವ ಕೆಲಸವಾಗಬೇಕಾಗಿದೆ. ಒಂದು ವೇಳೆ ರೈತರು ಕೆಲಸ ಮಾಡುವುದನ್ನು ನಿಲ್ಲಿಸಿ ಬಿಟ್ಟರೆ ಇಡೀ ದೇಶದ ಜನ ಊಟವಿಲ್ಲದೇ ಸಾಯುವ ಪರಿಸ್ಥಿತಿ ಬರುತ್ತದೆ ಎಂದು ವಿಷಾದ ವ್ಯಕ್ತಪಡಿಸಿದರು.

ಡಾ.ಕೆ.ನಾಗಪ್ಪ ಆಳ್ವ ಅವರ ಪುತ್ರ ಕೆ.ಮೋಹನ್ ಆಳ್ವ ತಮ್ಮ ತಂದೆಯ ಪಯಣವನ್ನು ಮೆಲಕು ಹಾಕಿ ಭಾವುಕರಾದರು. ಗಾಂಧಿ ಸ್ಮಾರಕ ನಿಧಿಯ ನಿರ್ದೇಶಕ ಜಿ.ಬಿ ಶಿವರಾಜ್ ಪ್ರಾಸ್ತಾವಿಕವಾಗಿ ಮಾತನಾಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಎಂ.ಸಿ ನರೇಂದ್ರ ಮತ್ತಿತರರಿದ್ದರು.



ವಿಜಯ ಕರ್ನಾಟಕ ಮಂಗಳವಾರ,3 ಸೆಪ್ಟೆಂಬರ್ 2024

# ದೇವೇಂದ್ರಕುಮಾರ್ ಪತ್ತಾರ್‌ಗೆ ಪಂಚಾಕ್ಷರ ಕೃಪಾಭೂಷಣ ಪ್ರಶಸ್ತಿ ಪ್ರದಾನ

■ **ವಿಕ ಸುದ್ದಿಲೋಕ** ಬೆಂಗಳೂರು

ಶ್ರೀ ಗುರುಕುಮಾರ ಪಂಚಾಕ್ಷರೇಶ್ವರ ಸಂಗೀತ ಕಲಾ ವೇದಿಕೆ ವತಿಯಿಂದ ಖ್ಯಾತ ಹಿಂದೂಸ್ತಾನಿ ಗಾಯಕ ಪಂಡಿತ್ ದೇವೇಂದ್ರಕುಮಾರ್ ಪತ್ತಾರ್ ಮುಧೋಳ್ ಅವರಿಗೆ 'ಪಂಚಾಕ್ಷರ ಕೃಪಾಭೂಷಣ' ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು.

ಚಾಮರಾಜಪೇಟೆಯ ಕಸಾಪ ಸಭಾಂಗಣದಲ್ಲಿ ಆಯೋಜಿಸಿದ್ದ ಪಂ. ಶೇಷಾದ್ರಿ ಗವಾಯಿ ಸಂಗೀತೋತ್ಸವ ಕಾರ್ಯಕ್ರಮದಲ್ಲಿ ಪತ್ತಾರ್ ಅವರಿಗೆ ಶಿಕ್ಷಣ ತಜ್ಞ, ನಾಡೋಜ ಡಾ: ವೂಡೇ ಪಿ.ಕೃಷ್ಣ ಪ್ರಶಸ್ತಿ ಪ್ರದಾನ ಮಾಡಿದರು. ಪ್ರಶಸ್ತಿಯು 10 ಸಾವಿರ ರೂ.ನಗದು, ಪ್ರಶಸ್ತಿ ಪತ್ರ ಮತ್ತು ಸ್ಮರಣಿಕೆಯನ್ನು ಒಳಗೊಂಡಿದೆ.

ಬಳಿಕ ಮಾತನಾಡಿದ ಡಾ.ವೂಡೇ ಪಿ. ಕೃಷ್ಣ, ''ಮಾತೃದೇವೋಭವ, ಆಚಾರ್ಯ ದೇವೋಭವ, ಅತಿಥಿ ದೇವೋಭವ ಎಂಬಂತಹ ಮೌಲ್ಯಗಳನ್ನು ಸಂಗೀತದ ಮೂಲಕ ಮಕ್ಕಳಲ್ಲಿ ಬಿತ್ತಿದ್ದೇ ಆದಲ್ಲಿ ನಮ್ಮ ಮಕ್ಕಳು ಮತ್ತು ದೇಶ ಸುರಕ್ಷಿತ,'' ಎಂದರು.

ತಬಲಾ ವಾದಕ ಪಂ.ಸತೀಶ್ ಹಂಪಹೊಳಿ ಮಾತನಾಡಿ, ''ಅಂತರಂಗದ ತರಂಗಗಳನ್ನು ಉಜ್ವಲಗೊಳಿಸುವ ಶಕ್ತಿ ಸಂಗೀತಕ್ಕಿದೆ,'' ಎಂದರು. ವಾಸ್ ಯೋಗ ಕೇಂದ್ರದ ಶ್ರೀ ಉಮಾಮಹೇಶ್ವರ್ ಗುರೂಜಿ ಕಾರ್ಯಕ್ರಮ ಉದ್ಘಾಟಿಸಿದರು.



ಸಮಸ್ತ ಕನ್ನ. ಏಕೈಕ ಸಂಜೆ ದಿನಪತ್ರಿಕೆ

ಈ ಸಂಜೆ

Sep 03, 2024

# ಕೃತಕ ಬುದ್ಧಿಮತ್ತೆಯು ಹೊಸ ಸೃಷ್ಟಿಗೆ ಕೀಲಿಕೈ ಇದ್ದಂತೆ: ಡಾ.ಆರ್.ಸಿ.ಜಿ. ಗಮಗೆ



ಬೆಂಗಳೂರು, ಸೆ.3- ಕೃತಕ ಬುದ್ಧಿಮತ್ತೆಯು(ಎ.ಐ) ನಮ್ಮ ಗತಿಸಿದ ಭಾರತೀಯ ಐತಿಹಾಸಿಕ ಸನ್ನಿವೇಶಗಳನ್ನು ಮರುಸೃಷ್ಟಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದು ಶ್ರೀಲಂಕಾ ಕೊಲಂಬಿಯಾ ವಿಶ್ವವಿದ್ಯಾಲಯ ರಾಷ್ಟ್ರೀಯ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗದ ಪ್ರಾಧ್ಯಾಪಕ ಡಾ. ಆರ್.ಸಿ.ಜಿ ಗಮಗೆ ಅಭಿಪ್ರಾಯಪಟ್ಟಿದ್ದಾರೆ.

ಶೇಷಾದ್ರಿಪುರಂ ಸಂಜೆ ಕಾಲೇಜು ಗ್ರಂಥಾಲಯ ವಿಭಾಗದ ವತಿಯಿಂದ ಭಾರತೀಯ ಗ್ರಂಥಾಲಯಗಳ ಸಂಘ ಹಾಗೂ ಶ್ರೀಲಂಕಾ ಗ್ರಂಥಾಲಯಗಳ ಸಂಘಗಳ ಸಹಯೋಗದಲ್ಲಿ ಶೈಕ್ಷಣಿಕ ಗ್ರಂಥಾಲಯದ ಮೇಲೆ ಕೃತಕ ಬುದ್ಧಿಮತ್ತೆಯ ಪ್ರಭಾವ ಕುರಿತ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಅವರು ಮಾತನಾಡಿದರು.

ಕೃತಕ ಬುದ್ಧಿಮತ್ತೆಯ ಪ್ರಭಾವದಿಂದ ಸಂಶೋಧನಾ ಪ್ರಬಂಧವನ್ನು ಬರೆಯಲು ಹಾಗೂ ಪರಿಣಾಮಕಾರಿ ಬೋಧನೆಯನ್ನು ಕೈಗೊಳ್ಳಲು ಸಹಾಯಕವಾಗಿದೆ. ಕೃತಕ ಬುದ್ಧಿಮತ್ತೆಗೆ ಸಂವೇದನೆಗಳಿಲ್ಲ, ಆದರೆ ಸನ್ನಿವೇಶಗಳನ್ನು ಸೃಷ್ಟಿಸುತ್ತದೆ, ಕೃತಕ ಬುದ್ಧಿಮತ್ತೆಯನ್ನು ಬಳಸಿ ಸಂವೇದನೆಗಳನ್ನು ತುಂಬಬಲ್ಲ ಸಾಮರ್ಥ್ಯವು ಮನುಷ್ಯನ ಸಾಧ್ಯತೆಯಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಶೈಕ್ಷಣಿಕ ಗ್ರಂಥಾಲಯಗಳು ಕೃತಕ ಬುದ್ಧಿಮತ್ತೆಯ ಸಾಧ್ಯತೆಗಳನ್ನು ಸಂಪೂರ್ಣವಾಗಿ ಬಳಸಿಕೊಂಡು ಮಾದರೀ ಗ್ರಂಥಾಲಯಗಳನ್ನಾಗಿ ರೂಪಿಸಬೇಕಿದೆ. ಶೇಷಾದ್ರಿಪುರಂ ಸಂಜೆ ಕಾಲೇಜು ನ್ಯಾಕ್ ಎ ಶ್ರೇಯಾಂಕ ಮಾನ್ಯತೆ ಪಡೆದಿದ್ದು 100 ಅಂತಾರಾಷ್ಟ್ರೀಯ ಅಂತರ್ಜಾಲ ವಿಚಾರ ಸಂಕಿರಣಗಳನ್ನು ಆಯೋಜಿಸಿ ಯಶಸ್ವಿಯಾಗಿದೆ ಎಂದರು.

ಪ್ರಾಂಶುಪಾಲ ಡಾ.ಎನ್.ಎಸ್. ಸತೀಶ್ ಮಾತನಾಡಿ, ಶೇಷಾದ್ರಿಪುರಂ ಸಂಜೆ ಕಾಲೇಜು ಕರ್ನಾಟಕ ರಾಜ್ಯದ ಸಂಜೆ ಕಾಲೇಜುಗಳಿಗೆ ಮಾದರಿ ಸಂಜೆ ಕಾಲೇಜು ಎನಿಸಿಕೊಂಡಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಧರ್ಮದರ್ಶಿ ಡಬ್ಲ್ಯೂ. ಡಿ ಅಶೋಕ್, ರಾಯ್‌ಪುರದ ಕಳಿಂಗ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಡಾ.ಚಂದ್ರಪ್ಪ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂನ ಉಪಕುಲಪತಿಗಳಾದ ಡಾ.ದೊರೈಸ್ವಾಮಿ, ಶೇಷಾದ್ರಿಪುರಂ ಸಂಜೆ ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಪಿ.ಸಿ. ನಾರಾಯಣ, ಪ್ರಾಂಶುಪಾಲರಾದ ಡಾ.ಎನ್.ಎಸ್. ಸತೀಶ್ ಹಾಗೂ ಆಂತರಿಕ ಗುಣಮಟ್ಟ ಭರವಸಾ ಸಮಿತಿ ಸಂಚಾಲಕರಾದ ನಾಗಸುಧ.ಆರ್, ಗ್ರಂಥಪಾಲಕರಾದ ಯೋಗಾನಂದ. ಎಸ್.ವಿ, ಗುಲ್ಬರ್ಗ ವಿಶ್ವವಿದ್ಯಾಲಯದ ಗ್ರಂಥಪಾಲಕರಾದ ಡಾ.ಸುರೇಶ್ ಜಂಗೆ ಮತ್ತಿತರರು ಉಪಸ್ಥಿತರಿದ್ದರು.

# ಈ ಸಂಜೆ

Sep 02, 2024



ಕರ್ನಾಟಕ ಗಾಂಧಿ ಸ್ಮಾರಕನಿಧಿ, ರಾಷ್ಟ್ರೀಯ ಸೇವಾ ಯೋಜನೆ ಹಾಗೂ ಯುವ ಸಬಲೀಕರಣ ಇಲಾಖೆ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಡಾ.ಕೆ.ನಾಗಪ್ಪ ಆಳ್ವ ಮತ್ತು ಕಲ್ಯಾಣಿ ನಾಗಪ್ಪ ಆಳ್ವ ದತ್ತಿ ಉಪನ್ಯಾಸ ಕಾರ್ಯಕ್ರಮವನ್ನು ವಿಶ್ರಾಂತ ಲೋಕಾಯುಕ್ತ ನ್ಯಾಯಮೂರ್ತಿ ಎನ್.ಸಂತೋಷ್ ಹೆಗ್ಡೆ ಉದ್ಘಾಟಿಸಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಸರ್ವೋದಯ ಸೇವಾಕರ್ತರಾದ ಇಪಿ ಮೆನನ್, ಸಂಸ್ಕೃತಿ ಚಿಂತಕ ಮೋಹನ್‌ದೇವ್ ಆಳ್ವ, ಎನ್.ಆರ್.ವಿಜಯಕುಮಾರ್ ನರೇಂದ್ರ ಮತ್ತಿತರರು ಇದ್ದರು.

ಸಂಯುಕ್ತ ಕರ್ನಾಟಕ Sep 01, 2024

# ಜ್ಞಾನಾರ್ಜನೆಗೆ ಗ್ರಂಥಾಲಯಗಳು ಸಹಕಾರಿ

ಬೆಂಗಳೂರು: ಶಿಕ್ಷಣ ಸಂಸ್ಥೆಗಳ ಗ್ರಂಥಾಲಯಗಳಲ್ಲಿ ಸೂಪರ್ ಆರ್ಟಿಫಿಶಿಯಲ್ ಇಂಟೆಲಿಜೆನ್ಸ್ (ಕೃತಕ ಬುದ್ಧಿಮತ್ತೆ) ಅನ್ನು ಪರಿಣಾಮಕಾರಿಯಾಗಿ ಅಳವಡಿಸಿಕೊಂಡಲ್ಲಿ ಶೈಕ್ಷಣಿಕವಾಗಿ ಹೆಚ್ಚಿನ ಬೆಳವಣಿಗೆ ಸಾಧಿಸಬಹುದಾಗಿದೆ ಎಂದು ಶ್ರೀಲಂಕಾ ಕೊಲಂಬೊ ವಿಶ್ವವಿದ್ಯಾಲಯದ ಗ್ರಂಥಾಲಯ ವಿಭಾಗದ ಪ್ರಾಧ್ಯಾಪಕ ಡಾ.ಆರ್.ಸಿ.ಜಿ.ಗಾಮಗೆ ತಿಳಿಸಿದರು.

ಶೇಷಾದ್ರಿಪುರಂ ಸಂಜೆ ಕಾಲೇಜು ಹಾಗೂ ಭಾರತ, ಶ್ರೀಲಂಕಾ ಗ್ರಂಥಾಲಯ ಸಂಘಗಳ ಸಹಯೋಗದಲ್ಲಿ ಆಯೋಜಿಸಲಾಗಿದ್ದ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಅವರು, ಶೈಕ್ಷಣಿಕ ಸಂಸ್ಥೆಗಳಲ್ಲಿ ಗ್ರಂಥಾಲಯಗಳನ್ನು ಬಳಸಿಕೊಂಡು ಹೆಚ್ಚು ಜ್ಞಾನಾರ್ಜನೆ ಪಡೆಯಬಹುದು. ಹಾಗಾಗಿ ಸೂಪರ್ ಆರ್ಟಿಫಿಶಿಯಲ್ ಇಂಟೆಲಿಜೆನ್ಸ್ ಬಳಕೆ ಅವಶ್ಯ ಎಂದರು.

ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಓದುವ ಹವ್ಯಾಸವೇ ಗ್ರಂಥಾಲಯ ಉಳಿವಿಗೆ ದಾರಿಯಾಗಬೇಕಾಗಿದೆ. ಗ್ರಂಥಾಲಯಗಳು ನಮಗೆ ದಾರಿದೀಪ ಎಂಬುದನ್ನು ಅರಿತುಕೊಳ್ಳಬೇಕಾಗಿದೆ ಎಂದರು.

ಈ ಸಂಜೆ

Sep 01, 2024



ಕರ್ನಾಟಕ ವಚನ ಸಾಹಿತ್ಯ ಪರಿಷತ್, ಸುಮಂಗಲಿ ಸೇವಾಶ್ರಮ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಶಿಕ್ಷಣ ತಜ್ಞ ಪ್ರೊ. ವೂಡೇ ಪಿ. ಕೃಷ್ಣ ಅವರಿಗೆ ಶಿಕ್ಷಣ ತಜ್ಞ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಪರಿಷತ್ ಅಧ್ಯಕ್ಷ ಎಂ.ಎ. ತ್ಯಾಗರಾಜ್, ಸುಮಂಗಲಿ ಸೇವಾಶ್ರಮದ ಎಸ್.ಜಿ. ಸುಶೀಲಮ್ಮ, ಡಾ. ಸಿ. ಸೋಮಶೇಖರ್ ಮತ್ತಿತರರು ಪಾಲ್ಗೊಂಡಿದ್ದರು.

ಪ್ರಜಾವಾಣಿ · ಶುಕ್ರವಾರ • ಆಗಸ್ಟ್ 30, 2024

# ‘ಬದಲಾವಣೆ ಬಗ್ಗೆ ತೇಜಸ್ವಿ ಹೆಚ್ಚು ಮಾತು’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರು ಒಬ್ಬ ಸಾಹಿತ್ಯದ ಬಗ್ಗೆ ಮಾತನಾಡುವುದಕ್ಕಿಂತ ಸಮಾಜದಲ್ಲಿ ಆಗಬೇಕಾದ ಬದಲಾವಣೆ ಕುರಿತು ಹೆಚ್ಚು ಮಾತನಾಡುತ್ತಿದ್ದರು’ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಮುಖ್ಯಮಂತ್ರಿ ಗೃಹ ಕಚೇರಿಯಲ್ಲಿ ಮುನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಬೆಂಗಳೂರು ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ ಬುಧವಾರ ಆಯೋಜಿಸಲಾಗಿದ್ದ ಕಾರ್ಯಕ್ರಮದಲ್ಲಿ ‘ಶ್ರೀ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು’-ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿ ಅವರು ಮಾತನಾಡಿದರು.



ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು, ‘ಶ್ರೀ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು’ ಹದಿನಾಲ್ಕು ಸಂಪುಟಗಳನ್ನು ಬೆಂಗಳೂರಿನಲ್ಲಿ ಬುಧವಾರ ಲೋಕಾರ್ಪಣೆ ಮಾಡಿದರು. ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ತೇಜಸ್ವಿ ಅವರ ಪುತ್ರಿ ಸುಸ್ಮಿತಾ ಇದ್ದರು

‘ತೇಜಸ್ವಿಗೆ ಮೈಸೂರಿನಲ್ಲಿ ರಾಮದಾಸ್ ಎಂಬ ಪ್ರಾಧ್ಯಾಪಕ ಸ್ನೇಹಿತರಿದ್ದರು. ಅವರ ಮನೆಗೆ ತೇಜಸ್ವಿ ಬಂದಾಗಲೆಲ್ಲಾ ನಾನೂ ಹೋಗುತ್ತಿದ್ದೆ. ಹಲವು ಬಾರಿ ದೇವನೂರ ಮಹಾದೇವ ಬರುತ್ತಿದ್ದರು. ಸಾಮಾಜಿಕ ಬದಲಾವಣೆ ಬಗ್ಗೆ ಅಲ್ಲಿ ಚರ್ಚೆಯಾಗುತ್ತಿತ್ತು. ತೇಜಸ್ವಿ ಅವರ ಮಾತು ಕೇಳಲು ನಾನು ಉತ್ಸುಕನಾಗಿರುತ್ತಿದ್ದೆ’ ಎಂದು ನೆನಪಿಸಿಕೊಂಡರು.

‘ತಮ್ಮ ತೋಟಕ್ಕೆ ಬಂದು ಒಂದು ದಿನ ಕಳೆಯಿರಿ ಎಂದು ತೇಜಸ್ವಿ ಹಲವು ಬಾರಿ ಹೇಳಿದ್ದರು. ಅದು ಸಾಧ್ಯವೇ ಆಗಲಿಲ್ಲ. ಅವರ ಕಾಲಾನಂತರದಲ್ಲಿ ಅವರ ಮನೆಗೆ ಹೋಗಿ ಊಟ ಮಾಡಿ ಬಂದೆ’ ಎಂದು ಸ್ಮರಿಸಿದರು.

ಕಾರ್ಯಕ್ರಮದಲ್ಲಿ ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ ನರೇಂದ್ರ, ಪ್ರೊ.ರವಿವರ್ಮ ಕುಮಾರ್, ಸಮಗ್ರ ಸಂಪುಟದ ಸಂಪಾದಕ ಕೆ.ಸಿ. ಶಿವಾರೆಡ್ಡಿ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣ ಇದ್ದರು.

# ಸ್ವಂತ ಆಲೋಚನೆ ಬೆಳೆಸಿಕೊಂಡವರು ಪೂರ್ಣಚಂದ್ರ ತೇಜಸ್ವಿ

## ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದ ತೇಜಸ್ವಿ । ಸಮಗ್ರ ಕೃತಿ ಜಗತ್ತು - ಹದಿನಾಲ್ಕು ಸಂಪುಟಗಳ ಲೋಕಾರ್ಪಣೆಗೊಳಿಸಿದ ಸಿಎಂ

**ಬೆಂಗಳೂರು:** ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರ ಬಂದು ಅವರದ್ದೇ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಕೆ.ಪಿ ಪೂರ್ಣಚಂದ್ರ ತೇಜಸ್ವಿಯವರು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ಗೃಹ ಕಚೇರಿ ಕೃಷ್ಣಾದಲ್ಲಿ ಮುನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ ಪ್ರತಿಷ್ಠಾನ ಬೆಂಗಳೂರು ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು - ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿ, ಕುವೆಂಪು ಅವರು ಒಬ್ಬ ಮಹಾನ್ ಕವಿಯಾದರೂ ತೇಜಸ್ವಿಯವರು ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು. ತೇಜಸ್ವಿಯವರೊಂದಿಗಿನ ತಮ್ಮ ಹಲವು ವರ್ಷಗಳ ಸಂಬಂಧವನ್ನು ಮೆಲಕು ಹಾಕಿದ ಮುಖ್ಯಮಂತ್ರಿಗಳು, ರಾಮದಾಸ್ ಎಂಬ ಕನ್ನಡ ಪ್ರಾಧ್ಯಾಪಕರಿಗೆ ಸ್ನೇಹಿತರಾಗಿದ್ದ ತೇಜಸ್ವಿಯವರು ಮೈಸೂರಿಗೆ ಬಂದಾಗ ರಾಮದಾಸ್ ಅವರ ಮನೆಯಲ್ಲಿ ಭೇಟಿ ಮಾಡುತ್ತಿದ್ದ ದಿನಗಳನ್ನು ಸ್ಮರಿಸಿದರು.



ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು .ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು - ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿದರು. ಚಿತ್ರ ಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್,ಪ್ರೊ.ರವಿವರ್ಮ ಕುಮಾರ್, ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ ನರೇಂದ್ರ, ತೇಜಸ್ವಿ ಅವರ ಪುತ್ರಿಯರಾದ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣಾಇದ್ದರು.

### ಸಮಯ ದೊರೆತಾಗ ಪುಸ್ತಕ ಓದುವೆ

ತೇಜಸ್ವಿ ಕನ್ನಡನಾಡು ಕಂಡ ಅದ್ಭುತ ಲೇಖಕ. ಅವರ ಕೃತಿ ಜಗತ್ತು ಪುಸ್ತಕಗಳನ್ನು 14 ಸಂಪುಟಗಳಲ್ಲಿ ಶಿವಾರೆಡ್ಡಿಯವರ ಸಂಪಾದಕತ್ವದಲ್ಲಿ ಲೋಕಾರ್ಪಣೆ ಮಾಡಲಾಗಿದೆ. ಸಮಯ ದೊರೆತಾಗ ಪುಸ್ತಕ ಓದಲು ಪ್ರಯತ್ನ ಮಾಡಲಾಗುವುದು. ಕೃತಿಗಳನ್ನು ಹೊರತರುವಲ್ಲಿ ಉತ್ತಮ ಕೆಲಸ ಮಾಡಲಾಗಿದೆ. ಕೃತಿಗಳನ್ನು ಸಂಪಾದಿಸಲು ಕೂಡ ಅಪಾರವಾದ ಕೆಲಸ ಮಾಡಲಾಗಿದೆ ಎಂದು ಮುಖ್ಯಮಂತ್ರಿಗಳು ಮೆಚ್ಚುಗೆ ವ್ಯಕ್ತಪಡಿಸಿದರು.

ತೇಜಸ್ವಿಯವರು ಸಾಹಿತಿಯಾಗಿ ಮಾತನಾಡುವುಕ್ಕಿಂತಲೂ ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು. ತೇಜಸ್ವಿ ಅವರ ಮಾತುಗಳನ್ನು ಕೇಳಲು ನಾನು ಬಹಳ ಉತ್ಸುಕನಾಗಿರುತ್ತಿದ್ದೆ. ತೇಜಸ್ವಿ ಅವರ ತೋಟದಲ್ಲಿ ಉಳಿಯಬೇಕು ಎಂದು ನನಗೆ ಬಹಳ ಸಾರಿ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ.

-ಸಿದ್ದರಾಮಯ್ಯ ಸಿಎಂ

ವಿಜಯವಾಣಿ
VIJAYAVANI » BENGALURU

ಬೆಂಗಳೂರು ಸಿಟಿ ಎಕ್ಸ್‌ಪ್ರೆಸ್

ಗುರುವಾರ 29 ಆಗಸ್ಟ್ 2024
29 AUGUST 2024



## ಸ್ವಂತ ಆಲೋಚನೆ ಬೆಳೆಸಿಕೊಂಡಿದ್ದ ಅಪರೂಪದ ಸಾಹಿತಿ । ಮುಖ್ಯಮಂತ್ರಿ ಸಿದ್ದರಾಮಯ್ಯ ಬಣ್ಣನೆ

# ತೇಜಸ್ವಿ ತೋಟದಲ್ಲಿ ಉಳಿಯುವ ಅವಕಾಶ ಒದಗಲಿಲ್ಲ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸಾಹಿತಿ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರು ರಾಷ್ಟ್ರಕವಿ ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರಬಂದು ತಮ್ಮದೇ ಸ್ವಂತ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಎಂದು ಸಿಎಂ ಸಿದ್ದರಾಮಯ್ಯ ವ್ಯಾಖ್ಯಾನಿಸಿದ್ದಾರೆ.

ಬುಧವಾರ \ ಗೃಹ ಕಚೇರಿ 'ಕೃಷ್ಣಾ'ದಲ್ಲಿ ಮುನಿಸ್ವಾಮಿ ಆ್ಯಂಡ್ ಸನ್ಸ್, ಬೆಂಗಳೂರಿನ ಎಂ. ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ವತಿಯಿಂದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ 14 ಸಂಪುಟಗಳ ಸಮಗ್ರ ಕೃತಿ ಜಗತ್ತು ಲೋಕಾರ್ಪಣೆ ಮಾಡಿ ಮಾತನಾಡಿದರು. ಕುವೆಂಪು ಒಬ್ಬ ಮಹಾನ್ ಕವಿಯಾದರೂ ಅವರ ಪುತ್ರ ತೇಜಸ್ವಿ ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು ಎಂದರು.

ತೇಜಸ್ವಿ ಸಾಹಿತಿಯಾಗಿ ಮಾತನಾಡುವುಕ್ಕಿಂತಲೂ ಸಮಾಜದ ಬದಲಾವಣೆ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು. ತೇಜಸ್ವಿ ಮಾತುಗಳನ್ನು ಕೇಳಲು ನಾನು ಬಹಳ ಉತ್ಸುಕನಾಗಿರುತ್ತಿದ್ದೆ ಎಂದ ಸಿಎಂ, ತೇಜಸ್ವಿ ಅವರೊಂದಿಗಿನ ತಮ್ಮ ಹಲವು ವರ್ಷಗಳ ಸಂಬಂಧವನ್ನು ಮೆಲುಕು ಹಾಕಿದರು. ಕೆ. ರಾಮದಾಸ್‌ಗೆ ಸ್ನೇಹಿತರಾಗಿದ್ದ ತೇಜಸ್ವಿ ಮೈಸೂರಿಗೆ ಬಂದಾಗ ಭೇಟಿ ಮಾಡುತ್ತಿದ್ದ ಧಿನಗಳನ್ನು ಸ್ಮರಿಸಿದರು.



ಕೆ.ಪಿ. ಪೂರ್ಣಚಂದ್ರ ತೇಜಸ್ವಿ ರಚನೆಯ 14 ಸಂಪುಟಗಳ ಬಿಡುಗಡೆ ವೇಳೆ ಮುಖ್ಯಮಂತ್ರಿ ಸಿದ್ದರಾಮಯ್ಯ, ಸಿಕೆಪಿ ಅಧ್ಯಕ್ಷ ಬಿ.ಎಲ್. ಶಂಕರ್, ತೇಜಸ್ವಿ ಪುತ್ರಿಯರಾದ ಸುಸ್ಮಿತಾ, ಈಶಾನ್ಯೆ ಉಪಸ್ಥಿತರಿದ್ದರು.

ತೇಜಸ್ವಿ ತಮ್ಮ ತೋಟದಲ್ಲಿ ಉಳಿಯಬೇಕೆಂದು ನನಗೆ ಬಹಳ ಸಲ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿಬರಲಿಲ್ಲ ಎಂದು ಸಿದ್ದರಾಮಯ್ಯ ತಿಳಿಸಿದರು.

ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್. ಶಂಕರ್, ಪ್ರೊ. ರವಿವರ್ಮಕುಮಾರ್, ಕುವೆಂಪು ವಿಚಾರ ವೇದಿಕೆ ಅಧ್ಯಕ್ಷ ಎಂ.ಸಿ. ನರೇಂದ್ರ, ತೇಜಸ್ವಿ ಪುತ್ರಿಯರಾದ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.

## ಸಮಯ ದೊರೆತಾಗ ಪುಸ್ತಕ ಓದುವೆ

ತೇಜಸ್ವಿ ಕನ್ನಡನಾಡು ಕಂಡ ಅದ್ಭುತ ಲೇಖಕ. ಅವರ ಕೃತಿ ಜಗತ್ತು ಪುಸ್ತಕಗಳನ್ನು 14 ಸಂಪುಟಗಳಲ್ಲಿ ಶಿವಾರೆಡ್ಡಿ ಸಂಪಾದಕತ್ವದಲ್ಲಿ ಲೋಕಾರ್ಪಣೆ ಮಾಡಲಾಗಿದೆ. ಸಮಯ ದೊರೆತಾಗ ಈ ಪುಸ್ತಕಗಳನ್ನು ಓದಲು ಪ್ರಯತ್ನ ಮಾಡುವೆ ಎಂದು ಸಿದ್ದರಾಮಯ್ಯ ಹೇಳಿದರು. ಕೃತಿಗಳನ್ನು ಹೊರತರುವಲ್ಲಿ ಉತ್ತಮ ಕೆಲಸ ಮಾಡಲಾಗಿದೆ. ಕೃತಿಗಳನ್ನು ಸಂಪಾದಿಸಲು ಕೂಡ ಅಪಾರವಾದ ಕೆಲಸ ಮಾಡಲಾಗಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸಂಯುಕ್ತ ಕರ್ನಾಟಕ

ಗುರುವಾರ 29 ಆಗಸ್ಟ್ 2024

ಬೆಂಗಳೂರು | BENGALURU

03

# ತೇಜಸ್ವಿ ವಿಭಿನ್ನ ಆಲೋಚನೆಗಳ ವಿಶಿಷ್ಟ ಸಾಹಿತಿ

ಬೆಂಗಳೂರು: ಕೆ.ಪಿ ಪೂರ್ಣಚಂದ್ರ ತೇಜಸ್ವಿಯವರು ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರಬಂದು ಅವರದ್ದೇ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಬಣ್ಣಿಸಿದ್ದಾರೆ.

ಗೃಹ ಕಚೇರಿ ಕೃಷ್ಣಾದಲ್ಲಿ ಬುಧವಾರ ಮುನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಬೆಂಗಳೂರು ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ ಹೊರತರಲಾಗಿರುವ 'ಶ್ರೀ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು'–ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿ ಅವರು ಮಾತನಾಡಿದರು.

ಕುವೆಂಪು ಅವರು ಒಬ್ಬ ಮಹಾನ್ ಕವಿಯಾದರೂ ತೇಜಸ್ವಿಯವರು ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು. ತೇಜಸ್ವಿಯವರು ಸಾಹಿತಿಯಾಗಿ ಮಾತನಾಡುವುಕ್ಕಿಂತಲೂ ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು ಎಂದರು.

ತೇಜಸ್ವಿಯವರೊಂದಿಗಿನ ತಮ್ಮ ಹಲವು ವರ್ಷಗಳ ಸಂಬಂಧವನ್ನು ಮೆಲುಕು ಹಾಕಿದ ಸಿದ್ದರಾಮಯ್ಯ, ರಾಮದಾಸ್‌ಗೆ ಸ್ನೇಹಿತರಾಗಿದ್ದ ತೇಜಸ್ವಿಯವರು ಮೈಸೂರಿಗೆ ಬಂದಾಗ ರಾಮದಾಸ್ ಮನೆಯಲ್ಲಿ ಅವರನ್ನು ಭೇಟಿ ಮಾಡುತ್ತಿದ್ದೆ. ಅವರ ಮಾತುಗಳನ್ನು ಕೇಳಲು ನಾನು ಬಹಳ ಉತ್ಸುಕನಾಗಿರುತ್ತಿದ್ದೆ. ತೇಜಸ್ವಿ ಅವರ ತೋಟದಲ್ಲಿ ಉಳಿಯಬೇಕು ಎಂದು ನನಗೆ ಬಹಳ ಸಾರಿ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ ಎಂದು ತಿಳಿಸಿದರು.

ತೇಜಸ್ವಿ ಕನ್ನಡನಾಡು ಕಂಡ ಅದ್ಭುತ ಲೇಖಕ. ಅವರ ಕೃತಿ ಜಗತ್ತು ಪುಸ್ತಕಗಳನ್ನು 14 ಸಂಪುಟಗಳಲ್ಲಿ ಶಿವಾರೆಡ್ಡಿಯವರ ಸಂಪಾದಕತ್ವದಲ್ಲಿ ಲೋಕಾರ್ಪಣೆ ಮಾಡಲಾಗಿದೆ. ಕೃತಿಗಳನ್ನು ಹೊರತರುವಲ್ಲಿ ಉತ್ತಮ ಕೆಲಸ ಮಾಡಲಾಗಿದೆ. ಕೃತಿಗಳನ್ನು ಸಂಪಾದಿಸಲು ಕೂಡ ಅಪಾರವಾದ ಕೆಲಸ ಮಾಡಲಾಗಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದ ಮುಖ್ಯಮಂತ್ರಿಗಳು, ಸಮಯ ದೊರೆತಾಗ ಪುಸ್ತಕಗಳನ್ನು ಓದಲು ಪ್ರಯತ್ನ ಮಾಡಲಾಗುವುದು ಎಂದರು.

ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ಪ್ರೊ. ರವಿವರ್ಮ ಕುಮಾರ್ ಮಾತನಾಡಿದರು. ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ ನರೇಂದ್ರ, ತೇಜಸ್ವಿ ಅವರ ಪುತ್ರಿಯರಾದ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣಾ, ವಿಶುಕುಮಾರ್ ಮೊದಲಾದವರು ಉಪಸ್ಥಿತರಿದ್ದರು.



ಬೆಂಗಳೂರಿನಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಬುಧವಾರ ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು ಕೃತಿಯನ್ನು ಲೋಕಾರ್ಪಣೆ ಮಾಡಿದರು. ತೇಜಸ್ವಿ ಪುತ್ರಿಯರಾದ ಈಶಾನ್ಯೆ, ಸುಸ್ಮಿತಾ, ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ವಿಶುಕುಮಾರ್, ಪ್ರೊ. ರವಿವರ್ಮಕುಮಾರ್ ಮತ್ತಿತರರಿದ್ದರು.

ಸುದ್ದಿಮೂಲ
PAGE 3
29 Aug 2024
www.epaper.suddimoola.in

# ತೇಜಸ್ವಿ ತಂದೆಯ ನೆರಳಿನಿಂದ ಹೊರಬಂದು ಸ್ವಂತ ಆಲೋಚನೆಗಳನ್ನು ಬೆಳೆಸಿಕೊಂಡರು: ಸಿಎಂ



●ಸುದ್ದಿಮೂಲ ವಾರ್ತೆ, ಬೆಂಗಳೂರು, ಆ.28: ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರಬಂದು ಅವರದ್ದೇ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ಗೃಹ ಕಚೇರಿ ಕೃಷ್ಣಾದಲ್ಲಿ ಮುನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಬೆಂಗಳೂರು ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ 'ಶ್ರೀ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು'-ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿದರು.

ವಿಭಿನ್ನ ಚಿಂತಕ: ಕುವೆಂಪು ಅವರು ಒಬ್ಬ ಮಹಾನ್ ಕವಿಯಾದರೂ ತೇಜಸ್ವಿಯವರು ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು.

ತೇಜಸ್ವಿಯವರೊಂದಿಗಿನ ತಮ್ಮ ಹಲವು ವರ್ಷಗಳ ಸಂಬಂಧವನ್ನು ಮೆಲಕು ಹಾಕಿದ ಮುಖ್ಯಮಂತ್ರಿಗಳು ರಾಮದಾಸ್ ಎಂಬ ಕನ್ನಡ ಪ್ರಾಧ್ಯಾಪಕರಿಗೆ ಸ್ನೇಹಿತರಾಗಿದ್ದ ತೇಜಸ್ವಿಯವರು ಮೈಸೂರಿಗೆ ಬಂದಾಗ ರಾಮದಾಸ್ ಅವರ ಮನೆಯಲ್ಲಿ ಭೇಟಿ ಮಾಡುತ್ತಿದ್ದ ದಿನಗಳನ್ನು ಸ್ಮರಿಸಿದರು. ತೇಜಸ್ವಿ ಅವರ ತೋಟದಲ್ಲಿ ಉಳಿಯಬೇಕು ಎಂದು ನನಗೆ ಬಹಳ ಸಾರಿ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ ಎಂದು ತಿಳಿಸಿದರು.

ತೇಜಸ್ವಿಯವರು ಸಾಹಿತಿಯಾಗಿ ಮಾತನಾಡುವುಕ್ಕಿಂತಲೂ ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು. ತೇಜಸ್ವಿ ಅವರ ಮಾತುಗಳನ್ನು ಕೇಳಲು ನಾನು ಬಹಳ ಉತ್ಸುಕನಾಗಿರುತ್ತಿದ್ದೆ ಎಂದರು.

ಸಮಯ ದೊರೆತಾಗ ಪುಸ್ತಕ ಓದುವೆ: ತೇಜಸ್ವಿ ಕನ್ನಡನಾಡು ಕಂಡ ಅದ್ಭುತ ಲೇಖಕ. ಅವರ ಕೃತಿ ಜಗತ್ತು ಪುಸ್ತಕಗಳನ್ನು 14 ಸಂಪುಟಗಳಲ್ಲಿ ಶಿವಾರೆಡ್ಡಿಯವರ ಸಂಪಾದಕತ್ವದಲ್ಲಿ ಇಂದು ಲೋಕಾರ್ಪಣೆ ಮಾಡಲಾಗಿದೆ. ಸಮಯ ದೊರೆತಾಗ ಪುಸ್ತಕಗಳನ್ನು ಓದಲು ಪ್ರಯತ್ನ ಮಾಡಲಾಗುವುದು ಎಂದರು.

ಚಿತ್ರ ಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ಪ್ರೊ.ರವಿವರ್ಮ ಕುಮಾರ್. ಈ ಸಂದರ್ಭದಲ್ಲಿ ಮಾತನಾಡಿದರು. ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ ನರೇಂದ್ರ, ತೇಜಸ್ವಿ ಅವರ ಪುತ್ರಿಯರಾದ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣಾ ಮೊದಲಾದವರು ಉಪಸ್ಥಿತರಿದ್ದರು.

ಉದಯಕಾಲ
ಕನ್ನಡಿಗರ ದನಿ
Aug 29, 2024

## ಸ್ವಂತ ಆಲೋಚನೆಗಳನ್ನು ಬೆಳೆಸಿಕೊಂಡವ ಅದ್ಭುತ ಸಾಹಿತಿ | ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು ಹೆಸರಿನ 14 ಸಂಪುಟ ಲೋಕಾರ್ಪಣೆ

# ತಂದೆ ನೆರಳಿನಿಂದ ಹೊರಬಂದು ಪೂಚಂತೇ ಸಾಧನೆ

ಉದಯಕಾಲ ನ್ಯೂಸ್

ಬೆಂಗಳೂರು: ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರಬಂದು ಅವರದ್ದೇ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ಬೆಂಗಳೂರಿನಲ್ಲಿ ಬುಧವಾರ ಮುನಿಸ್ವಾಮಿ ಅಂಡ್ ಸನ್ಸ್ , ಎಂ.ಚಂದ್ರಶೇಖರ್ ಪ್ರತಿಷ್ಠಾನ ಬೆಂಗಳೂರು ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು- ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿದರು.

**ವಿಭಿನ್ನ ಚಿಂತಕ:** ಕುವೆಂಪು ಅವರು ಒಬ್ಬ ಮಹಾನ್ ಕವಿಯಾದರೂ ತೇಜಸ್ವಿಯವರು ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು.



ತೇಜಸ್ವಿಯವರೊಂದಿಗಿನ ತಮ್ಮ ಹಲವು ವರ್ಷಗಳ ಸಂಬಂಧವನ್ನು ಮೆಲಕು ಹಾಕಿದ ಮುಖ್ಯಮಂತ್ರಿಗಳು, ರಾಮದಾಸ್ ಎಂಬ ಕನ್ನಡ ಪ್ರಾಧ್ಯಾಪಕರಿಗೆ ಸ್ನೇಹಿತರಾಗಿದ್ದ ತೇಜಸ್ವಿಯವರು ಮೈಸೂರಿಗೆ ಬಂದಾಗ ರಾಮದಾಸ್ ಅವರ ಮನೆಯಲ್ಲಿ ಭೇಟಿ ಮಾಡುತ್ತಿದ್ದ ದಿನಗಳನ್ನು ಸ್ಮರಿಸಿದರು.

**ಸಾಮಾಜಿಕ ಬದಲಾವಣೆ ಬಗ್ಗೆ ಕಾಳಜಿ:** ತೇಜಸ್ವಿಯವರು ಸಾಹಿತಿಯಾಗಿ ಮಾತನಾಡುವುಕ್ಕಿಂತಲೂ ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು. ತೇಜಸ್ವಿ ಅವರ ಮಾತುಗಳನ್ನು ಕೇಳಲು ನಾನು ಬಹಳ ಉತ್ಸುಕನಾಗಿರುತ್ತಿದ್ದೆ ಎಂದರು.

ತೇಜಸ್ವಿ ಅವರ ತೋಟದಲ್ಲಿ ಉಳಿಯಬೇಕು ಎಂದು ನನಗೆ ಬಹಳ ಸಾರಿ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ ಎಂದು ತಿಳಿಸಿದರು.

**ಸಮಯ ದೊರೆತಾಗ ಪುಸ್ತಕ ಓದುವೆ:** ತೇಜಸ್ವಿ ಕನ್ನಡನಾಡು ಕಂಡ ಅದ್ಭುತ ಲೇಖಕ. ಅವರ ಕೃತಿ ಜಗತ್ತು ಪುಸ್ತಕಗಳನ್ನು 14 ಸಂಪುಟಗಳಲ್ಲಿ ಶಿವಾರೆಡ್ಡಿಯವರ ಸಂಪಾದಕತ್ವದಲ್ಲಿ ಲೋಕಾರ್ಪಣೆ ಮಾಡಲಾಗಿದೆ. ಸಮಯ ದೊರೆತಾಗ ಪುಸ್ತಕಗಳನ್ನು ಓದಲು ಪ್ರಯತ್ನ ಮಾಡಲಾಗುವುದು ಎಂದರು.

ಕೃತಿಗಳನ್ನು ಹೊರತರುವಲ್ಲಿ ಉತ್ತಮ ಕೆಲಸ ಮಾಡಲಾಗಿದೆ. ಕೃತಿಗಳನ್ನು ಸಂಪಾದಿಸಲು ಕೂಡ ಅಪಾರವಾದ ಕೆಲಸ ಮಾಡಲಾಗಿದೆ ಎಂದು ಮುಖ್ಯಮಂತ್ರಿಗಳು ಮೆಚ್ಚುಗೆ ವ್ಯಕ್ತಪಡಿಸಿದರು.

ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ಪ್ರೊ.ರವಿವರ್ಮ ಕುಮಾರ್ ಈ ಸಂದರ್ಭದಲ್ಲಿ ಮಾತನಾಡಿದರು.

ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ ನರೇಂದ್ರ, ತೇಜಸ್ವಿ ಅವರ ಪುತ್ರಿಯರಾದ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣಾ ಮೊದಲಾದವರು ಉಪಸ್ಥಿತರಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ

Aug 29, 2024

# ತೇಜಸ್ವಿ ತಂದೆಯ ನೆರಳಿನಿಂದ ಹೊರಬಂದು ಸ್ವಂತ ಆಲೋಚನೆಗಳನ್ನು ಬೆಳೆಸಿಕೊಂಡರು: ಸಿದ್ದರಾಮಯ್ಯ



ಬೆಂಗಳೂರು, ಆಗಸ್ಟ್.28: ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಕುವೆಂಪು ಅವರ ಚಿಂತನೆ ಹಾಗೂ ನೆರಳಿನಿಂದ ಹೊರಬಂದು ಅವರದ್ದೇ ಚಿಂತನೆಗಳನ್ನು ರೂಢಿಸಿಕೊಂಡ ವಿಶಿಷ್ಟ ಹಾಗೂ ಅದ್ಭುತ ಸಾಹಿತಿ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅಭಿಪ್ರಾಯಪಟ್ಟಿದ್ದಾರೆ.

ಬುಧವಾರ ನಗರದ ಗೃಹ ಕಚೇರಿ ಕೃಷ್ಣಾದಲ್ಲಿ ಎಂ.ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ವತಿಯಿಂದ ಹಮ್ಮಿಕೊಂಡಿದ್ದ 'ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು' ಹದಿನಾಲ್ಕು ಸಂಪುಟಗಳನ್ನು ಲೋಕಾರ್ಪಣೆ ಮಾಡಿದ ಬಳಿಕ ಮಾತನಾಡಿದ ಅವರು, ಕುವೆಂಪು ಜ್ಞಾನಪೀಠ ಪುರಸ್ಕೃತ ಕವಿಯಾದರೂ, ತೇಜಸ್ವಿಯವರು ಅವರದ್ದೇ ವಿಭಿನ್ನ ಆಲೋಚನೆಗಳನ್ನು ಬೆಳೆಸಿಕೊಂಡು ಒಬ್ಬ ಪರಿಸರವಾದಿ, ಸಾಹಿತಿಯಾಗಿ ಬೆಳೆದರು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಚಿತ್ರ ಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್, ಪ್ರೊ.ರವಿವರ್ಮ ಕುಮಾರ್, ಕುವೆಂಪು ವಿಚಾರ ವೇದಿಕೆಯ ಅಧ್ಯಕ್ಷ ಎಂ.ಸಿ.ನರೇಂದ್ರ, ತೇಜಸ್ವಿ ಅವರ ಪುತ್ರಿ ಸುಸ್ಮಿತಾ ಹಾಗೂ ಈಶಾನ್ಯೆ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣಾ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

> ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಸಾಹಿತಿಯಾಗಿ ಮಾತನಾಡುವುದಕ್ಕಿಂತಲೂ, ಸಮಾಜದ ಬದಲಾವಣೆಯ ಬಗ್ಗೆ ಹೆಚ್ಚು ಮಾತನಾಡುತ್ತಿದ್ದರು. ಅವರಲ್ಲಿ ಹೊಸ ಚಿಂತನೆಗಳಿದ್ದವು. ಸ್ನೇಹಜೀವಿ ಹಾಗೂ ಸ್ನೇಹಿತರ ಬಗ್ಗೆ ಅಪಾರ ಪ್ರೀತಿ ಅಭಿಮಾನ ಹೊಂದಿದ್ದರು. ತೇಜಸ್ವಿ ಅವರ ಮಾತುಗಳನ್ನು ಕೇಳಲು ಬಹಳ ಉತ್ಸುಕನಾಗಿರುತ್ತಿದ್ದೆ. ತೇಜಸ್ವಿ ಅವರ ತೋಟದಲ್ಲಿ ಉಳಿಯಬೇಕು ಎಂದು ನನಗೆ ಹಲವು ಬಾರಿ ಕೇಳಿದ್ದರು. ಆದರೆ ಉಳಿದುಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ.
>
> -ಸಿದ್ದರಾಮಯ್ಯ, ಮುಖ್ಯಮಂತ್ರಿ

ವಿಜಯ ಕರ್ನಾಟಕ

02 | ಮಂಗಳವಾರ,27 ಆಗಸ್ಟ್ 2024,
ಬೆಂಗಳೂರು

# ಬಿಎನ್‌ಎಸ್ ಸೆಕ್ಷನ್ 226 ತೆಗೆದು ಹಾಕಲು ಗಾಂಧಿ ಸ್ಮಾರಕ ನಿಧಿ ಆಗ್ರಹ

■ **ವಿಕ ಸುದ್ದಿಲೋಕ** ಬೆಂಗಳೂರು

ಸರಕಾರದ ವಿರುದ್ಧ ಉಪವಾಸ ಮುಷ್ಕರ ಕೈಗೊಳ್ಳುವವರ ಮೇಲೆ ಪ್ರಕರಣ ದಾಖಲಿಸಲು ಭಾರತೀಯ ನ್ಯಾಯ ಸಂಹಿತೆಯ ಸೆಕ್ಷನ್ 226ರಡಿ ಅವಕಾಶ ಕಲ್ಪಿಸಲಾಗಿದ್ದು, ಅದನ್ನು ತೆಗೆದು ಹಾಕುವಂತೆ ಗಾಂಧಿ ಸ್ಮಾರಕ ನಿಧಿ ಕೇಂದ್ರ ಸರಕಾರವನ್ನು ಆಗ್ರಹಿಸಿದೆ.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷಾಚರಣೆ ಹಿನ್ನೆಲೆಯಲ್ಲಿ ಆ.24 ಮತ್ತು 25ರಂದು ಬೆಂಗಳೂರಿನಲ್ಲಿ ನಡೆದ ಎರಡು ದಿನಗಳ ಅಂತಾರಾಷ್ಟ್ರೀಯ ವಿಚಾರ ಸಂಕಿರಣದ ವೇಳೆ ಈ ಕುರಿತು ನಿರ್ಣಯ ಕೈಗೊಳ್ಳಲಾಗಿದೆ ಎಂದು ಹೊಸದಿಲ್ಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಹಿ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೆ ಪಿ.ಕೃಷ್ಣ ಪ್ರಕಟಣೆಯಲ್ಲಿ ತಿಳಿಸಿದ್ದಾರೆ. ರಾಷ್ಟ್ರಪಿತ ಮಹಾತ್ಮ ಗಾಂಧಿಜಿ ಬಗ್ಗೆ ಯಾವುದೇ ವ್ಯಕ್ತಿ ಲಿಖಿತವಾಗಿ ಅಥವಾ ಮೌಖಿಕ ಹೇಳಿಕೆಗಳ ಮೂಲಕ ಅವಹೇಳನ ಮಾಡಿದರೆ ಅಂತಹವರಿಗೆ ಕನಿಷ್ಠ 5 ವರ್ಷ ಜೈಲು ಮತ್ತು ದಂಡ ವಿಧಿಸುವ ಅಂಶವನ್ನು ಭಾರತೀಯ ನ್ಯಾಯ ಸಂಹಿತೆ 2023ರಲ್ಲಿ ಸೇರ್ಪಡೆ ಮಾಡಬೇಕು ಎಂದೂ ಅವರು ಕೇಂದ್ರ ಸರಕಾರವನ್ನು ಒತ್ತಾಯಿಸಿದ್ದಾರೆ.

ಪ್ರಜಾವಾಣಿ
ಸೋಮವಾರ • ಆಗಸ್ಟ್ 26, 2024

## ಗಾಂಧಿ ಸ್ಮಾರಕ ನಿಧಿ ಕಾರ್ಯಕ್ರಮದಲ್ಲಿ ಸಚಿವ ಎಚ್‌.ಕೆ. ಪಾಟೀಲ ಕಳವಳ

# 'ಸರ್ಕಾರಿ ಬ್ಯಾಂಕ್‌ಗಳ ಹಣವೂ ದರೋಡೆ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಭ್ರಷ್ಟಾಚಾರದ ಸ್ವರೂಪ ಇತ್ತೀಚೆಗೆ ಬದಲಾಗಿದ್ದು, ಸರ್ಕಾರಿ ಬ್ಯಾಂಕ್‌ಗಳ ಖಾತೆಗಳಲ್ಲಿರುವ ಹಣವೂ ನೇರವಾಗಿ ವಂಚಕರಿಗೆ ವರ್ಗಾವಣೆ ಯಾಗುತ್ತಿದೆ. ಇದು ಅಪಾಯಕಾರಿ ಬೆಳವಣಿಗೆ' ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್‌.ಕೆ. ಪಾಟೀಲ ಕಳವಳ ವ್ಯಕ್ತಪಡಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ 75ನೇ ವರ್ಷದ ಸಂಸ್ಮರಣೆಗಾಗಿ ಭಾನುವಾರ ಹಮ್ಮಿಕೊಂಡಿದ್ದ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ವಿಚಾರ ಸಂಕಿರಣದ ಸಮಾರೋಪ ಸಮಾರಂಭದಲ್ಲಿ ಅವರು ಮಾತನಾಡಿದರು.

'ಇತ್ತೀಚೆಗೆ ಗಾಂಧೀಜಿಯನ್ನು ದುರ್ಬಳಕೆ ಮಾಡಿಕೊಳ್ಳಲಾಗುತ್ತಿದೆ. ಗಾಂಧೀಜಿ ಫೋಟೊ ಹೆಚ್ಚೆಚ್ಚು ಹಾಕುತ್ತಿರುವ ಕಡೆಯೇ ದರೋಡೆ-ಕೋರರಿದ್ದಾರೆ. ಆಡಳಿತ ವ್ಯವಸ್ಥೆಯಲ್ಲಿ ಭ್ರಷ್ಟಾಚಾರವು ದರೋಡೆ ಸ್ವರೂಪ ಪಡೆದಿದೆ. ಹಿಂದೆ ಯಾವುದೇ ಒಂದು



ಕಾರ್ಯಕ್ರಮದಲ್ಲಿ ನ್ಯಾ. ಎನ್‌. ಸಂತೋಷ್ ಹೆಗ್ಡೆ, ಎಚ್‌.ಕೆ. ಪಾಟೀಲ ಹಾಗೂ ಪ್ರೊಫೆಸರ್ ಪಿ. ಕೃಷ್ಣ ಸಮಾಲೋಚನೆ ನಡೆಸಿದರು – ಪ್ರಜಾವಾಣಿ ಚಿತ್ರ

ನಿರ್ದಿಷ್ಟ ಕೆಲಸ ಮಾಡಿಕೊಡಲು ಅಧಿಕಾರಿಗಳು ಲಂಚ ಪಡೆಯುತ್ತಿದ್ದರು. ಆ ಹಣದಿಂದ ಕಾರು, ಮನೆ ಖರೀದಿಸುತ್ತಿದ್ದರು. ಈಗ ದರೋಡೆಯ ಸ್ವರೂಪ ಕಲ್ಪನೆಗೂ ಮೀರಿ ಬದಲಾಗಿದೆ. ಇಂತಹ ಸಮಾಜದಲ್ಲಿ ಬದಲಾವಣೆ ತರಲು ಗಾಂಧಿ ಸ್ಮಾರಕ ನಿಧಿ ಮುಂದಾಗಬೇಕು' ಎಂದು ಹೇಳಿದರು.

'ಗಾಂಧೀಜಿ ಅವರು ಬುದ್ಧಿವಂತಿಕೆಯಿಂದ ಬ್ರಿಟಿಷರ ವಿರುದ್ಧ ಸತ್ಯಾಗ್ರಹ ಮಾಡಿದ್ದರು. ಈ ಮೂಲಕ ಸ್ವಾತಂತ್ರ್ಯ ಕೊಡಿಸಲು ಶ್ರಮಿಸಿದ್ದರು. ಈಗ ಸತ್ಯಾಗ್ರಹ ಅಪಾಯದಲ್ಲಿದೆ. ಅನ್ಯಾಯದ ವಿರುದ್ಧ ಸತ್ಯಾಗ್ರಹ ಕೈಗೊಂಡರೆ ಪೊಲೀಸರು ಬಂಧಿಸುತ್ತಾರೆ. ಕೇಂದ್ರ ಸರ್ಕಾರವು ಕಾನೂನು ತಿದ್ದುಪಡಿಯ ಮೂಲಕ ಸತ್ಯಾಗ್ರಹದ ಸತ್ವವನ್ನು ಕಿತ್ತೊಗೆಯುವ ಪ್ರಯತ್ನ ಮಾಡಿದೆ. ಗಾಂಧಿ ಸಂಸ್ಥೆಗಳ ಆಸ್ತಿ ಸಂರಕ್ಷಣೆಗೆ ವಿಶೇಷ ಕಾನೂನು ರೂಪಿಸಬೇಕಿದೆ' ಎಂದು ತಿಳಿಸಿದರು.

ದುರಾಸೆಗೆ ಮದ್ದಿಲ್ಲ: ನಿವೃತ್ತ ಲೋಕಾಯುಕ್ತ, ನ್ಯಾಯಮೂರ್ತಿ ಎನ್‌. ಸಂತೋಷ್ ಹೆಗ್ಡೆ ಮಾತನಾಡಿ, 'ಅಪರಾಧಗಳು ಹಾಗೂ ಭ್ರಷ್ಟಾಚಾರವನ್ನು ಹತ್ತಿರದಿಂದ ಕಂಡಿದ್ದೇನೆ. ಅಧಿಕಾರದಲ್ಲಿರುವವರ ಸ್ವಾರ್ಥ ಮತ್ತು ದುರಾಸೆಯು ಭ್ರಷ್ಟಾಚಾರವನ್ನು ಪೋಷಿಸುತ್ತಿದೆ. ಪ್ರಸ್ತುತ ಸನ್ನಿವೇಶಕ್ಕೆ ಸಮಾಜದ ಸ್ಥಿತಿಯೇ ಕಾರಣ. ಎಲ್ಲ ಕಾಯಿಲೆಗಳಿಗೂ ಮದ್ದಿದೆ. ಆದರೆ, ದುರಾಸೆಗೆ ಇಲ್ಲ' ಎಂದರು.

'ಜೀಪ್ ಹಗರಣ, ಬೊಫೋರ್ಸ್ ಹಗರಣ, ಕಾಮನ್‌ವೆಲ್ತ್ ಹಗರಣ, 2ಜಿ ಹಗರಣ, ಕಲ್ಲಿದ್ದಲು ಹಗರಣ ಸೇರಿ ವಿವಿಧ ಹಗರಣಗಳಲ್ಲಿ ಸಾವಿರಾರು ಕೋಟಿ ರೂಪಾಯಿ ಲೂಟಿ ಹೊಡೆಯಲಾಗಿದೆ. ಆಡಳಿತದಲ್ಲಿ ರುವವರ ಸ್ವಾರ್ಥ-ದುರಾಸೆ ಇವುಗಳಿಗೆಲ್ಲಾ ಕಾರಣ' ಎಂದು ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಪ್ರೊ. ಪಿ. ಕೃಷ್ಣ ವಿಚಾರ ಸಂಕಿರಣದ ಎರಡು ದಿನಗಳ ವರದಿ ಮಂಡಿಸಿದರು.

ಕನ್ನಡಪ್ರಭ

Aug 26, 2024

# ಸರ್ಕಾರದ ಖಾತೆಯಿಂದ ನೇರವಾಗಿ ಹಣ ಲೂಟಿ ಹೊಡೆಯುವ ಕಾಲವಿದು: ಎಚ್‌ಕೆ

## ಗಾಂಧಿ ಫೋಟೋ ಹೆಚ್ಚಿರುವೆಡೆ ದರೋಡೆಕೋರರು ಇದ್ದಾರೆ ಎಂದು ಭಾವಿಸುವಂತಾಗಿದೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಸರ್ಕಾರದ ಖಾತೆಯಿಂದ ನೇರವಾಗಿ ಹಣವನ್ನು ಲೂಟಿ ಹೊಡೆಯುವ ಕಾಲದಲ್ಲಿ ನಾವಿದ್ದೇವೆ. ಆಡಳಿತ ವ್ಯವಸ್ಥೆಯಲ್ಲಿನ ದರೋಡೆಯ ಸ್ವರೂಪದ ಬಗ್ಗೆ ಜನರಿಗೆ ಅರಿವಿಲ್ಲ ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್ ಬೇಸರ ವ್ಯಕ್ತಪಡಿಸಿದರು.

ಭಾನುವಾರ ನಗರದ ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ '21ನೇ ಶತಮಾನದಲ್ಲಿ ಗಾಂಧೀಜಿ' 2 ದಿನಗಳ ವಿಚಾರ ಸಂಕಿರಣ ಸಮಾರೋಪ ಸಮಾರಂಭದಲ್ಲಿ ಮಾತನಾಡಿದ ಅವರು, ಒಂದು ಕಾಲದಲ್ಲಿ ಲಂಚ ತೆಗೆದುಕೊಂಡಾದರೂ ಕೆಲಸ ಮಾಡಿ ಕೊಡುತ್ತಿದ್ದರು. ಆದರೆ, ಇಂದು ಅದರ ಸ್ವರೂಪವೇ ಬದಲಾಗಿದೆ. ಸರ್ಕಾರದ ಖಾತೆಯಿಂದ ಲೂಟಿಕೋರರ ಮಕ್ಕಳು, ಕುಟುಂಬದವರು, ಸಂಬಂಧಿಕರ ಖಾತೆಗೆ ನೇರವಾಗಿ ಹಣ ಹೋಗುತ್ತದೆ. ಇಂತಹ ಲೂಟಿಯನ್ನು ನಾನು ಎಂದೂ ಕೇಳಿರಲಿಲ್ಲ, ಈಗ ಕೇಳುತ್ತಿದ್ದೇವೆ. ಆದರೆ, ಜನರಿಗೆ ಈ ಮಾದರಿಯ ದರೋಡೆಯ ಸ್ವರೂಪದ ಅರಿವು ಇಲ್ಲ ಎಂದರು.

ಗೋಡೆಗೆ ಮಹಾತ್ಮ ಗಾಂಧಿಯ ಫೋಟೋಗಳನ್ನು ಹಾಕೊಂಡು ಭ್ರಷ್ಟಾಚಾರ ಮಾಡಲಾಗುತ್ತದೆ. ಗಾಂಧಿ ಫೋಟೋಗಳು ಹೆಚ್ಚಾಗಿ ಕಾಣಿಸುತ್ತಿವೆ ಎಂದರೆ ಅಲ್ಲಿ ದರೋಡೆಕೋರರು ಇದ್ದಾರೆ ಎಂದು ಭಾವಿಸುವ ಪರಿಸ್ಥಿತಿ ಇದೆ. ರಾಜ್ಯ ಮತ್ತು ಕೇಂದ್ರದಲ್ಲಿ ಯಾವ ರೀತಿಯ ಆಡಳಿತ ನೀಡಲಾಗುತ್ತಿದೆ? ಏನಾಗುತ್ತಿದೆ? ಎಂಬುದು ಎಲ್ಲರಿಗೂ ಗೊತ್ತಿದೆ. ಅಪಾಯಕಾರಿ ಸಮಾಜವನ್ನು ನಾವು ನೋಡುತ್ತಿದ್ದೇವೆ. ಆದರೆ, ಗಾಂಧೀಜಿಯವರ ತತ್ವಗಳಿಂದ ಸಮಾಜದಲ್ಲಿ ಕ್ರಾಂತಿಯನ್ನು ಮಾಡಿ ಬದಲಾವಣೆ ತರಬೇಕು ಎಂದು ಸಚಿವರು ಹೇಳಿದರು.




ಗಾಂಧೀಜಿ ಕುರಿತ ವಿಚಾರ ಸಂಕಿರಣ ಸಮಾರೋಪ ಸಮಾರಂಭದಲ್ಲಿ ಸಚಿವ ಎಚ್.ಕೆ. ಪಾಟೀಲ್, ನ್ಯಾ। ಸಂತೋಷ ಹೆಗ್ಡೆ, ಗಾಂಧಿ ಸ್ಮಾರಕ ನಿಧಿಯ ಸಂಜಯ್ ಸಿಂಗಾ, ರಾಮಚಂದ್ರ ರಾಹಿ, ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಭ್ರಷ್ಟಾಚಾರದ ವಿರುದ್ಧ ದೊಡ್ಡ ಚಳವಳಿಯೇನೋ ಆರಂಭವಾಯ್ತು. ಆದರೆ, ತಕ್ಷಣ ಸತ್ತು ಹೋಯ್ತು. ಇಂದು ಕೆಟ್ಟ ವ್ಯವಸ್ಥೆ ಇದೆ. ಒಂದು ರಾಜಕೀಯ ಪಕ್ಷಕ್ಕೆ 6,000 ಕೋಟಿ ರು. ದೇಣಿಗೆ ನೀಡಿರುವ ವಿಚಾರವನ್ನು ನ್ಯಾಯಾಂಗವೇ ಬಹಿರಂಗಪಡಿಸಿತು. ಅದಕ್ಕಾಗಿ ನ್ಯಾಯಾಂಗಕ್ಕೆ ಧನ್ಯವಾದಗಳು. ಆದರೆ, ಅದೇ ನ್ಯಾಯಾಲಯ ಮತ್ತೊಂದು ದಿನ 'ಆಗಿದ್ದು ಆಗಿದೆ ಬಿಡಿ' ಎನ್ನುವಂತೆ ಸುಮ್ಮನಾಯಿತು. ಇದು ಹೇಗೆ ಎಂದರೆ, 'ಮರ್ಡರ್ ಆಗಿದೆ. ಕೊಲೆಯಾದವ ಸತ್ತು ಹೋದ. ಹೋಗಲಿ ಬಿಡಿ' ಎಂಬಂತಾಗಿದೆ. ನ್ಯಾಯಾಂಗದಲ್ಲಿ, ಆಡಳಿತದಲ್ಲಿ ಲೋಪಗಳು ಆಗುತ್ತಿವೆ. ಈ ಬಗ್ಗೆ ಗಂಭೀರ ಆಲೋಚನೆ ಮಾಡಬೇಕು ಎಂದು ಸಚಿವ ಪಾಟೀಲ್ ಅಭಿಪ್ರಾಯಪಟ್ಟರು.

ನಿವೃತ್ತ ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ್ ಹೆಗ್ಡೆ ಮಾತನಾಡಿ, ಇಂದಿನ ಸಮಾಜದಲ್ಲಿ ಮೌಲ್ಯಗಳು ಕಾಣೆಯಾಗಿವೆ. ಹಣ, ಅಧಿಕಾರ, ಹಣಗಳಿಸುವ ಅತಿ ಆಸೆಯ ಹಿಂದೆ ಬಿದ್ದಿದ್ದಾರೆ. ನ್ಯಾಯ ಮಾರ್ಗದಲ್ಲಿ ಹಣ ಗಳಿಸುವುದು ತಪ್ಪಲ್ಲ. ಆದರೆ, ಮತ್ತೊಬ್ಬರ ಜೇಬು ಹೊಡೆದು, ಕನ್ನ ಹಾಕಿ ಹಣ ಮಾಡುವುದು ತಪ್ಪು. ಹೀಗಾಗಿ, ನಮ್ಮ ಮಕ್ಕಳಿಗೆ, ಯುವ ಜನತೆಗೆ ನೈತಿಕ ಮೌಲ್ಯಗಳನ್ನು ನೀಡಬೇಕು. ಮೌಲ್ಯದಿಂದ ಮಾತ್ರ ಸಮಾಜದಲ್ಲಿ ಬದಲಾವಣೆ ಸಾಧ್ಯ ಎಂದು ಹೇಳಿದರು.

ಗಾಂಧಿ ಸ್ಮಾರಕ ನಿಧಿಯ ಸಂಜಯ್ ಸಿಂಗಾ, ರಾಮಚಂದ್ರ ರಾಹಿ, ಡಾ. ವೂಡೇ ಪಿ. ಕೃಷ್ಣ ಸೇರಿ ಇತರರು ಇದ್ದರು.

ಹೊಸದಿಗಂತ

ಸೋಮವಾರ, 26 ಆಗಸ್ಟ್ 2024, ಬೆಂಗಳೂರು

# ಭ್ರಷ್ಟಾಚಾರಿಗಳಿಗೆ ದುರಾಸೆಯೇ ಮೂಲ

ಬೆಂಗಳೂರು: ಸಮಾಜದಲ್ಲಿ ನಡೆಯುತ್ತಿರುವ ಭ್ರಷ್ಟಾಚಾರಗಳಿಗೆ ದುರಾಸೆಯೇ ಮೂಲ ಕಾರಣವಾಗಿದ್ದು, ಮಹಾತ್ಮ ಗಾಂಧಿ ಹೇಳಿದಂತೆ ತೃಪ್ತಿಯಿಂದ ದುರಾಸೆ ಹೋಗಲಾಡಿಸಬಹುದು ಎಂದು ನಿವೃತ್ತ ಲೋಕಾಯುಕ್ತ ನ್ಯಾ. ಎನ್.ಸಂತೋಷ್ ಹೆಗ್ಡೆ ಹೇಳಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣದ ಸಮಾರೋಪದಲ್ಲಿ ಮಾತನಾಡಿದ ಅವರು, ಇಂದಿನ ದಿನಗಳಲ್ಲಿ ಹಣ ಮತ್ತು ಅಧಿಕಾರಕ್ಕೆ ಸಿಗುತ್ತಿರುವ ಗೌರವ ಯಾವ ವ್ಯಕ್ತಿತ್ವಕ್ಕೂ ಸಿಗುತ್ತಿಲ್ಲ. ಸಮಾಜದಲ್ಲಿ ಯಾವ ಕಾಯಿಲೆಗೆ ಔಷಧಿಯಿದ್ದರೂ, ದುರಾಸೆಗೆ ಔಷಧಿಯಿಲ್ಲ. ದುರಾಸೆ ಇದ್ದರೆ ಸಮಾಜದಲ್ಲಿ ಶಾಂತಿ ನೆಲೆಯೂರಲು ಸಾಧ್ಯವಿಲ್ಲ. ಬದಲಾವಣೆಯನ್ನು ಆಂತರಿಕವಾಗಿ ತರಬೇಕಾಗಿದೆ. ಇದಕ್ಕೆ ಇಂದು ಗಾಂಧಿ ಅವರ ತತ್ವಗಳನ್ನು ಪಾಲಿಸಬೇಕಾಗಿದೆ ಎಂದರು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ಕಾನೂನು ಸಚಿವ ಎಚ್.ಕೆ.ಪಾಟೀಲ್, ದೆಹಲಿಯ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕಾರ್ಯದರ್ಶಿ ಡಾ.ಸಂಜಯ್ ಸಿಂಗ್ ಮತ್ತಿತರರು ಉಪಸ್ಥಿತರಿದ್ದರು.




## ಹಣಕ್ಕಿಂತ ಸಾಮಾಜಿಕ ಮೌಲ್ಯ ಮುಖ್ಯ

ಸಮಾಜದಲ್ಲಿ ಬದಲಾವಣೆ ಹಾಗೂ ಶಾಂತಿ ನೆಲೆಸಲು ಸಾಮಾಜಿಕ ಮೌಲ್ಯಗಳನ್ನು ಮೊದಲು ನಾವು ಮೈಗೂಡಿಸಿಕೊಳ್ಳಬೇಕು. ಜೀವನದಲ್ಲಿ ದುರಾಸೆ ಪಡದೆ ಇರುವುದರಲ್ಲಿ ಸಂತೋಷವನ್ನು ಕಂಡುಕೊಳ್ಳಬೇಕು. ಮನುಷ್ಯನಿಗೆ ಹಣಕ್ಕಿಂತ ಸಾಮಾಜಿಕ ಮೌಲ್ಯಗಳು ಬಹಳ ಮುಖ್ಯವಾಗುತ್ತವೆ. ಭವಿಷ್ಯದಲ್ಲಿ ಬದಲಾವಣೆ ತರಬೇಕಾದರೆ ಇಂದಿನ ಮಕ್ಕಳಲ್ಲಿ ಈ ಕುರಿತು ಅರಿವು ಮೂಡಿಸಬೇಕು ಎಂದು ನ್ಯಾ. ಎನ್. ಸಂತೋಷ್ ಹೆಗ್ಡೆ ತಿಳಿಸಿದರು.

ಪ್ರಜಾವಾಣಿ
ಭಾನುವಾರ ● ಆಗಸ್ಟ್ 25, 2024

### ಮಣಿಪುರ ಹೊತ್ತಿ ಉರಿದರೂ ಮೌನವಾಗಿದ್ದ ಪ್ರಧಾನಿ: ತುಷಾರ್ ಗಾಂಧಿ ಟೀಕೆ

# 'ವಿದೇಶದಲ್ಲಿ ಮಾತ್ರ ಶಾಂತಿ ಜಪ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಯುದ್ಧ ಪೀಡಿತ ಉಕ್ರೇನ್ ಪ್ರವಾಸದಲ್ಲಿರುವ ಪ್ರಧಾನಿ ನರೇಂದ್ರ ಮೋದಿ ಅವರಿಗೆ ಗಾಂಧೀಜಿಯ ಶಾಂತಿ ಸಂದೇಶ ನೆನಪಾಗಿದೆ. ಆದರೆ, ಮಣಿಪುರ ಹೊತ್ತಿ ಉರಿದರೂ ಅವರು ಮೌನವಾಗಿದ್ದರು' ಎಂದು ಮಹಾತ್ಮ ಗಾಂಧಿ ಅವರ ಮರಿ ಮೊಮ್ಮಗ ತುಷಾರ್ ಗಾಂಧಿ ಅಸಮಾಧಾನ ವ್ಯಕ್ತಪಡಿಸಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆ ನಿಮಿತ್ತ ಗಾಂಧಿ ಭವನದಲ್ಲಿಶನಿವಾರ'21ನೇಶತಮಾನಕ್ಕೆ ಗಾಂಧೀಜಿ' ವಿಷಯದ ಕುರಿತು ಅಂತರರಾಷ್ಟ್ರೀಯ ವಿಚಾರ ಸಂಕಿರಣ ದಲ್ಲಿ ದಿಕ್ಸೂಚಿ ಭಾಷಣ ಮಾಡಿದರು.

'ವಿದೇಶಗಳಲ್ಲಿ ಗಾಂಧಿ ಮತ್ತು ಅವರ ವಿಚಾರಧಾರೆ ಬಗ್ಗೆ ಮಾತನಾಡುವವರು ತಮ್ಮ ದೇಶದಲ್ಲಿ ಅವುಗಳ ಹತ್ಯೆ ಮಾಡುತ್ತಿದ್ದಾರೆ. ದೇಶದಲ್ಲಿ ಗೋಡ್ಸೆ, ಸಾವರ್ಕರ್ ವಿಚಾರಧಾರೆಗಳ ತಾಂಡವ 'ಟ್ಯಾಗಿದ್ದರಿಂದ ಮಹಾತ್ಮನ ವಿಚಾರ ಧಾರೆಗಳು ರೋಗಗ್ರಸ್ತವಾಗಿವೆ. ಗೋಡ್ಸೆ ಆಡಳಿತ ನಡೆಸುತ್ತಿರುವುದರಿಂದ ಗಾಂಧೀಜಿ ಸ್ಥಾಪಿಸಿದ ಸಂಸ್ಥೆಗಳು, ಅವರ ತತ್ವಗಳನ್ನು ಮುನ್ನಡೆಸುತ್ತಿರುವ ಸಂಸ್ಥೆಗಳನ್ನು ಕಸಿದುಕೊಳ್ಳಲಾಗುತ್ತಿದೆ' ಎಂದು ಹೇಳಿದರು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ.ಪಾಟೀಲ, ರಾಜ್ಯದ 25 ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಪೂರ್ಣಗೊಂಡಿವೆ. ಗಾಂಧಿ ಭವನ ಗ್ರಂಥಾಲಯದ 11,720 ಪುಸ್ತಕಗಳನ್ನು ಡಿಜಿಟಲೀಕರಣ ಗೊಳಿಸ ಲಾಗಿದೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕಾರ್ಯಾಧ್ಯಕ್ಷ ವಿಶುಕುಮಾರ್, ಗೌರವ ಕಾರ್ಯದರ್ಶಿ ಎಂ. ಸಿ. ನರೇಂದ್ರ, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷ ಸಂಜೋಯ್ ಸಿಂಗ್, ಶಿವರಾಜ್ ಪಾಲ್ಗೊಂಡಿದ್ದರು.



ಬೆಂಗಳೂರಿನಲ್ಲಿ ಶನಿವಾರ ನಡೆದ ಅಂತರರಾಷ್ಟ್ರೀಯ ವಿಚಾರ ಸಂಕಿರಣವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಚರಕದಿಂದ ನೂಲು ತೆಗೆಯುವ ಮೂಲಕ ಉದ್ಘಾಟಿಸಿದರು. ರಾಮಚಂದ್ರ ರಾಹಿ, ಎಚ್.ಕೆ.ಪಾಟೀಲ, ವೂಡೇ ಪಿ.ಕೃಷ್ಣ, ಎಸ್. ಆರ್. ವಿಶುಕುಮಾರ್ ಪಾಲ್ಗೊಂಡಿದ್ದರು

– ಪ್ರಜಾವಾಣಿ ಚಿತ್ರ

## ಗಾಂಧೀಜಿ ಕೊಂದವರು ಅಸಮಾನತೆ ಪೋಷಕರು: ಸಿ.ಎಂ

'ಧರ್ಮ-ಜಾತಿ ಹೆಸರಲ್ಲಿ ಸಮಾಜ ಒಡೆದಂತೆ ಅಸಮಾನತೆ ಹೆಚ್ಚುತ್ತದೆ. ಜಾತಿ, ಅಸಮಾನತೆ ಪೋಷಕರೇ ಗಾಂಧೀಜಿ ಅವರನ್ನು ಕೊಂದರು' ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಆಕ್ರೋಶ ವ್ಯಕ್ತಪಡಿಸಿದರು.

ವಿಚಾರ ಸಂಕಿರಣ ಉದ್ಘಾಟಿಸಿದ ಅವರು, 'ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವ ಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದರು.

ಗಾಂಧೀಜಿ ಅಧ್ಯಕ್ಷತೆ ವಹಿಸಿದ್ದ ಕಾಂಗ್ರೆಸ್‌ನ ಬೆಳಗಾವಿ ಅಧಿವೇಶನದ ಶತಮಾನೋತ್ಸವವನ್ನು ಹೆಚ್ಚು ಅರ್ಥಪೂರ್ಣವಾಗಿ ಆಚರಿಸಲಾಗುವುದು ಎಂದರು.

### 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ವಿಚಾರಸಂಕಿರಣ ಉದ್ಘಾಟಿಸಿ ಸಿಎಂ ಹೇಳಿಕೆ

# ಸಹಿಷ್ಣುತೆ ಮೂಡದಿದ್ದರೆ ಸಮಾಜ ಸರ್ವನಾಶ

● ಪ್ರಜಾಪ್ರಗತಿ.ಕಾಂ

ಬೆಂಗಳೂರು: ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಡಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದು ಸಿಎಂ ಸಿದ್ದರಾಮಯ್ಯ ಕಳವಳ ವ್ಯಕ್ತಪಡಿಸಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ [illegible]ರಣೆಗಾಗಿ ಗಾಂಧಿ ಭವನದಲ್ಲಿ [illegible]ಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿ, ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮಾನಕ್ಕೆ ಮಾತ್ರ ಸೀಮಿತವಾಗಿಲ್ಲ, ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಧರ್ಮ-ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ.ಗಾಂಧೀಜಿಯವರು ಪ್ರತಿಪಾದಿಸಿದಂತೆ ಶಾಂತಿ ಭಾತೃತ್ವ, ಪರಸ್ಪರ ಪ್ರೀತಿಸುವ ಗುಣವನ್ನು ಇಡೀ ವಿಶ್ವವೇ ರೂಡಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.

ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾಗಿ ಅಸಮಾನತೆಯೂ ಹೆಚ್ಚಾಯಿತು. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದ ಸಿಎಂ ಅವರು ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹಗಳನ್ನು [illegible]ಕಿಕೊಂಡು ಹೋಗುವಂತಾಗಬಾರದು [illegible]ವ ಸ್ಟೀಫನ್ ಹಾಕಿಂಗ್ ಅವರ ಮಾತನ್ನು ಪ್ರಸ್ತಾಪಿಸಿ, ಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು, ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದರು.

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾದರೆ ಅವರ ಕಾಲಗುಣದಿಂದ ರಾಜ್ಯಕ್ಕೆ ಬರಗಾಲ ಬರುತ್ತದೆ ಎಂದು ಸಾರ್ವಜನಿಕ ವ್ಯಕ್ತಿಗಳೇ ಮೌಢ್ಯ ಬಿತ್ತುವ ಕುಟಿಲ ಪ್ರಯತ್ನ ಮಾಡಿದ್ದರು. ಆದರೆ ಈಗ ಸಿಕ್ಕಾಪಟ್ಟೆ ಮಳೆ ಬರುತ್ತಿದೆ. ಬಹಳ ಮಂದಿ ಶಿಕ್ಷಿತರೇ ಕಂದಾಚಾರ, ಮೌಢ್ಯವನ್ನು ಬಿತ್ತುತ್ತಿದ್ದಾರೆ. 850 ವರ್ಷಗಳ ಹಿಂದೆಯೇ ಬಸವಾದಿ ಶರಣರು ಮೌಢ್ಯಾಚರಣೆವಿರುದ್ಧ ಕ್ರಾಂತಿ ಮಾಡಿದ್ದರು. ಮೊದಲ ಪ್ರಧಾನಿ ನೆಹರೂ ಅವರು ವೈಜ್ಞಾನಿಕ ಮತ್ತು ವೈಚಾರಿಕ ಮಾರ್ಗದಲ್ಲಿ ದೇಶವನ್ನು ಮುನ್ನೆಡೆಸಿದರು ಎಂದು ಸ್ಮರಿಸಿದರು.

ಮಹಾತ್ಮಗಾಂಧಿಯವರು ಅಧ್ಯಕ್ಷತೆ ವಹಿಸಿದ್ದ ಕಾಂಗ್ರೆಸ್ ನ ಬೆಳಗಾವಿ ಅಧಿವೇಶನದ ಶತಮಾನೋತ್ಸವವನ್ನು ಹೆಚ್ಚು ಅರ್ಥಪೂರ್ಣವಾಗಿ ಆಚರಿಸುತ್ತೇವೆ ಎಂದ ಅವರು ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸನ್ನು ಈಡೇರಿಸಬೇಕಾಗಿದೆ. ಗಾಂಧಿಯವರ ಆಶಯದಂತೆ ರಾತ್ರಿ 12 ಗಂಟೆಗೂ ನಮ್ಮ ಹೆಣ್ಣು ಮಕ್ಕಳು ನಿರ್ಭಯದಿಂದ ಓಡಾಡುವಂತಾಗಬೇಕಿದೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರ ರಾಹಿ ಅವರು ಅಧ್ಯಕ್ಷತೆ ವಹಿಸಿದ್ದ ಕಾರ್ಯಕ್ರಮದಲ್ಲಿ ಕಾನೂನು ಸಚಿವರಾದ ಹೆಚ್.ಕೆ.ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೂಡೆ.ಪಿ.ಕೃಷ್ಣ, ಕಾರ್ಯಾಧ್ಯಕ್ಷರಾದ ವಿಶುಕುಮಾರ್ , ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಸೇರಿ ಹಲವು ಪ್ರಮುಖರು ಉಪಸ್ಥಿತರಿದ್ದರು.



> ಸದನದಲ್ಲಿ ಅಂಗೀಕಾರವಾದ 11 ಬಿಲ್ ಗಳನ್ನು ರಾಜ್ಯಪಾಲರು ವಾಪಸ್ ಕಳುಹಿಸಿದ್ದಾರೆ. ಈ ಬಗ್ಗೆ ಕ್ಯಾಬಿನೆಟ್‌ನಲ್ಲಿ ಚರ್ಚೆ ಮಾಡಿ ತೀರ್ಮಾನ ಮಾಡುತ್ತೇವೆ. ನಾನು, ಡಿಸಿಎಂ, ಕೆಲವು ಸಚಿವರುಗಳು ದೆಹಲಿಗೆ ಹೋಗಿದ್ದೆವು. ರಾಜ್ಯದ ಬೆಳವಣಿಗೆಯನ್ನು ಹೈಕಮಾಂಡ್ ಗಮನಕ್ಕೆ ತಂದಿದ್ದೇವೆ. ಮುಡಾ ಪ್ರಕರಣದ ಪಾದಯಾತ್ರೆ ಬಗ್ಗೆ ಚರ್ಚೆ ಮಾಡಿದ್ದೇವೆ. ಪ್ರಾಸಿಕ್ಯೂಷನ್ ಸಂವಿಧಾನ ಮತ್ತು ಕಾನೂನು ಬಾಹಿರ. ಸಚಿವ ಸಂಪುಟ ನಿರ್ಣಯವನ್ನು ರಾಜ್ಯಪಾಲರಿಗೆ ಕಳುಹಿಸಲಾಗಿದೆ. ಕೋರ್ಟ್‌ನಲ್ಲಿ ಪ್ರಶ್ನಿಸಿ ಅರ್ಜಿ ಹಾಕಲಾಗಿದೆ. ಆ.29ಕ್ಕೆ ವಿಚಾರಣೆ ಮುಂದೂಡಲಾಗಿದೆ.
>
> **- ಸಿದ್ದರಾಮಯ್ಯ, ಸಿಎಂ**



## ಕೆಪಿಎಸ್‌ಸಿ : ಒಂದು ಪತ್ರಿಕೆ ಮಾತ್ರ ಮುಂದಕ್ಕೆ

ಕಾರ್ಯಕ್ರಮದ ಬಳಿಕ ಸುದ್ದಿಗಾರರೊಂದಿಗೆ ಕೆಪಿಎಸ್‌ಸಿ ಗೆಜೆಟೆಡ್ ಪ್ರೊಬೆಷನರಿ ಪರೀಕ್ಷೆ ಗೊಂದಲ ವಿಚಾರವಾಗಿ ಪ್ರತಿಕ್ರಿಯಿಸಿ, ಗೊಂದಲ ಏನೂ ಇಲ್ಲ. ಕೆಲವು ಜನ ಪರೀಕ್ಷೆ ಮುಂದಕ್ಕೆ ಹಾಕಬೇಕು ಅಂತ ಹೇಳುತ್ತಿದ್ದಾರೆ. ಈಗ ಮುಂದಕ್ಕೆ ಹಾಕಲು ಸಾಧ್ಯವಿಲ್ಲ. ಒಂದು ಪತ್ರಿಕೆ ಮಾತ್ರ ಮುಂದೂಡಿಕೆ ಮಾಡುತ್ತೇವೆ ಎಂದು ಸ್ಪಷ್ಟಪಡಿಸಿದರು.

ಸುದ್ದಿಮೂಲ
ಭಾನುವಾರ
25 ಆಗಸ್ಟ್ 2024

## ಪ್ರಸ್ತುತ ಕಾಲಘಟ್ಟದಲ್ಲೂ ಗಾಂಧೀಜಿ ಮಾರ್ಗದರ್ಶನಗಳು ಪ್ರಸ್ತುತ

# ಧರ್ಮ-ಜಾತಿ ಹೆಸರಲ್ಲಿ ಅಸಮಾನತೆ : ಸಿದ್ದರಾಮಯ್ಯ ಬೇಸರ

**● ಸುದ್ದಿಮೂಲ ವಾರ್ತೆ** ಬೆಂಗಳೂರು, ಆ.24:
ಧರ್ಮ-ಜಾತಿ ಹೆಸರಲ್ಲಿ ಸಮಾಜ ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಸಿ.ಎಂ.ಸಿದ್ದರಾಮಯ್ಯ ನುಡಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮಗಾಂಧಿಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡಿದ ಅವರು, ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.



● 2ನೇ ಪುಟಕ್ಕೆ

# ಧರ್ಮ-ಜಾತಿ ಹೆಸರಲ್ಲಿ ಅಸಮಾನತೆ

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಲೂ ಪ್ರಸ್ತುತವಾಗಿವೆ. ಗಾಂಧಿಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವ ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣ ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದು ಅಭಿಪ್ರಾಯಪಟ್ಟರು.

ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹ ಹುಡುಕಿಕೊಂಡು ಹೋಗುವಂತಾಗಬಾರದು ಎನ್ನುವ ಸ್ಟೀಫನ್ ಹಾಕಿಂಗ್ ಅವರ ಮಾತು ಪ್ರಸ್ತಾಪಿಸಿ, ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವ ಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದರು.

ಪ್ರಕೃತಿ ನಮ್ಮ ಅಗತ್ಯ ಈಡೇರಿಸುತ್ತದೆಯೇ ಹೊರತು; ದುರಾಸೆ ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾದರೆ ಅವರ ಕಾಲಗುಣದಿಂದ ರಾಜ್ಯಕ್ಕೆ ಬರಗಾಲ ಬರುತ್ತದೆ ಎಂದು ಸಾರ್ವಜನಿಕ ವ್ಯಕ್ತಿಗಳೇ ಮೌಢ್ಯ ಬಿತ್ತುವ ಕುಟಿಲ ಪ್ರಯತ್ನ ಮಾಡಿದ್ದರು. ಆದರೆ ಈಗ ರಾಜ್ಯದಲ್ಲಿ ಹೆಚ್ಚು ಮಳೆಯಾಗುತ್ತಿರುವುದು ಯಾರ ಕಾಲಗುಣದಿಂದ ಎಂದು ಪ್ರಶ್ನಿಸಿದರು.

ಬಹಳ ಮಂದಿ ಶಿಕ್ಷಿತರೇ ಕಂದಾಚಾರ, ಕರ್ಮ ಸಿದ್ಧಾಂತ, ಮೌಢ್ಯ ಆಚರಿಸುತ್ತಾರೆ. ಇದಕ್ಕೆ ಸರಿಯಾದ ವೈಜ್ಞಾನಿಕ ಶಿಕ್ಷಣದ ಕೊರತೆಯೇ ಕಾರಣ. 850 ವರ್ಷಗಳ ಹಿಂದೆಯೇ ಬಸವಾದಿ ಶರಣರು ಕರ್ಮ ಸಿದ್ಧಾಂತ ಸಾರಾಸಗಟಾಗಿ ತಿರಸ್ಕರಿಸಿದ್ದರು. ಆದರೆ ಈಗಿನ ಕೆಲವು ಶಿಕ್ಷಿತರೇ ಕರ್ಮ ಸಿದ್ಧಾಂತದಲ್ಲಿ ನಂಬಿಕೆ ಇಟ್ಟಿದ್ದಾರೆ ಎಂದು ಕಳವಳ ವ್ಯಕ್ತಪಡಿಸಿದರು.

ನೆಹರೂ ಅವರು ವೈಜ್ಞಾನಿಕ ಮತ್ತು ವೈಚಾರಿಕ ಮಾರ್ಗದಲ್ಲಿ ಸಮಾಜವನ್ನು ಸನ್ನದ್ಧಗೊಳಿಸಿ ದೇಶ ಮುನ್ನಡೆಸುತ್ತಿದ್ದರು ಎಂದ ಅವರು, ಸರ್ವರನ್ನೂ ಒಳಗೊಳ್ಳುವ ಮತ್ತು ಅಹಿಂಸೆ ಗಾಂಧಿಯವರ ಮಾರ್ಗವಾಗಿತ್ತು. ಇದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದೆ ಎಂದು ಸಲಹೆ ಮಾಡಿದರು.

ದೇಶದ ಶೇ85 ರಷ್ಟು ಆಸ್ತಿ ಶೇ1 ಶ್ರೀಮಂತರ ಕೈಗೆ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರು ವಿಚಾರಗಳಲ್ಲಿ ಮಾರ್ಗಗಳಿವೆ ಎಂದರು.

ಮಹಾತ್ಮಗಾಂಧಿಯವರು ಅಧ್ಯಕ್ಷತೆ ವಹಿಸಿದ್ದ ಕಾಂಗ್ರೆಸ್ ನ ಬೆಳಗಾವಿ ಅಧಿವೇಶನದ ಶತಮಾನೋತ್ಸವ ಹೆಚ್ಚು ಅರ್ಥಪೂರ್ಣವಾಗಿ ಆಚರಿಸುತ್ತೇವೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರ ರಾಹಿ ಅವರು ಅಧ್ಯಕ್ಷತೆ ವಹಿಸಿದ್ದ ಕಾರ್ಯಕ್ರಮದಲ್ಲಿ ಕಾನೂನು ಸಚಿವರಾದ ಹೆಚ್.ಕೆ.ಪಾಟೀಲ್, ಕಾರ್ಯಾಧ್ಯಕ್ಷರಾದ ವಿಶುಕುಮಾರ್ , ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಸೇರಿ ಹಲವು ಪ್ರಮುಖರು ಉಪಸ್ಥಿತರಿದ್ದರು.

ವಿಶ್ವ ವಾರಿಧಿ
25-08-2024, SUNDAY

# 'ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ'

ವಿಶ್ವ ವಾರಿಧಿ | ಬೆಂಗಳೂರು

ಧರ್ಮ–ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಸಿ.ಎಂ.ಸಿದ್ದರಾಮಯ್ಯ ನುಡಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ "21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ" ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು.

ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಬ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.



ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹಗಳನ್ನು ಹುಡುಕಿಕೊಂಡು ಹೋಗುವಂತಾಗಬಾರದು ಎನ್ನುವ ಸ್ಟೀಫನ್ ಹಾಕಿಂಗ್ ಅವರ ಮಾತನ್ನು ಪ್ರಸ್ತಾಪಿಸಿ, ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವ ಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದರು.

ಪ್ರಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು, ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದರು.

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾದರೆ ಅವರ ಕಾಲ್ಗುಣದಿಂದ ರಾಜ್ಯಕ್ಕೆ ಬರಗಾಲ ಬರುತ್ತದೆ ಎಂದು ಸಾರ್ವಜನಿಕ ವ್ಯಕ್ತಿಗಳೇ ಮೌಢ್ಯ ಬಿತ್ತುವ ಕುಟಿಲ ಪ್ರಯತ್ನ ಮಾಡಿದ್ದರು. ಆದರೆ ಈಗ ಸಿಕ್ಕಾಪಟ್ಟೆ ಮಳೆ ಬರುತ್ತಿದೆ. ದೇಶದ ಶೇ85 ರಷ್ಟು ಆಸ್ತಿ ಶೇ1 ಶ್ರೀಮಂತರ ಕೈಗೆ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರು ವಿಚಾರಗಳಲ್ಲಿ ಮಾರ್ಗಗಳಿವೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರ ರಾಹಿ ಅವರು ಅಧ್ಯಕ್ಷತೆ ವಹಿಸಿದ್ದ ಕಾರ್ಯಕ್ರಮದಲ್ಲಿ ಕಾನೂನು ಸಚಿವರಾದ ಹೆಚ್.ಕೆ.ಪಾಟೀಲ್, ಕಾರ್ಯಾಧ್ಯಕ್ಷರಾದ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಸೇರಿ ಹಲವು ಪ್ರಮುಖರು ಉಪಸ್ಥಿತರಿದ್ದರು.

ಕನ್ನಡಪ್ರಭ

ಭಾನುವಾರ 25.08.2024

# ಶಿಕ್ಷಿತರಲ್ಲೇ ವೈಜ್ಞಾನಿಕ ಶಿಕ್ಷಣದ ಕೊರತೆ: ಸಿಎಂ

## ಗಾಂಧೀ ಭವನದಲ್ಲಿ 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ವಿಚಾರ ಸಂಕೀರಣ ಆಯೋಜನೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಬಹುಸಂಖ್ಯಾತ ಶಿಕ್ಷಿತರೇ ಕಂದಾಚಾರ, ಕರ್ಮ ಸಿದ್ಧಾಂತ, ಮೌಢ್ಯವನ್ನು ಆಚರಿಸುತ್ತಿದ್ದಾರೆ. ಇದಕ್ಕೆ ವೈಜ್ಞಾನಿಕ ಶಿಕ್ಷಣದ ಕೊರತೆಯೇ ಕಾರಣ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಬೇಸರ ವ್ಯಕ್ತಪಡಿಸಿದರು.

ಶನಿವಾರ ಅವರು, ಕುಮಾರಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಅಂಗವಾಗಿಆಯೋಜಿಸಲಾಗಿದ್ದ '21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ' ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡಿದರು..

850 ವರ್ಷಗಳ ಹಿಂದೆಯೇ ಬಸವಾದಿ ಶರಣರು ಕರ್ಮ ಸಿದ್ಧಾಂತವನ್ನು ಸಾರಾಸಗಟಾಗಿ ತಿರಸ್ಕರಿಸಿದ್ದರು. ಆದರೆ ಈಗಿನ ಕೆಲವು ಶಿಕ್ಷಿತರೇ ಕರ್ಮ ಸಿದ್ಧಾಂತದಲ್ಲಿ ನಂಬಿಕೆ ಇಟ್ಟಿದ್ದಾರೆ. ಧರ್ಮ-ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ. ಮನುಷ್ಯರಾಗಿ ಬಾಳುವಂತ ವ್ಯವಸ್ಥೆ ಮಾಡದಿದ್ದರೆ ಸಮಾಜದಲ್ಲಿ ಅಸಮಾನತೆ ಹೋಗಲು ಸಾಧ್ಯವಿಲ್ಲ ಎಂದು ಹೇಳಿದರು.



ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆ ಕಾರ್ಯಕ್ರಮವನ್ನು ಚರಕ ತಿರುಗಿಸುವ ಮೂಲಕ ಸಿಎಂ ಸಿದ್ದರಾಮಯ್ಯ ಉದ್ಘಾಟಿಸಿದರು.

ಜಾತಿ ವ್ಯವಸ್ಥೆ ಕಾರಣದಿಂದ ಬಹುಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿ ಅವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮಾನ ಮಾತ್ರವಲ್ಲ ಇಂದಿಗೂ, ಮುಂದೆಯೂ ಪ್ರಸ್ತುತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಸಹೋದರತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ: ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಭೂಮಿ ಸರ್ವ ನಾಶವಾಗುತ್ತದೆ ಎಂದ ಅವರು, ದೇಶದ ಶೇ.85 ರಷ್ಟು ಆಸ್ತಿ ಶೇ.1ರಷ್ಟಿರುವ ಶ್ರೀಮಂತರ ಕೈಗೆ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರು ವಿಚಾರಗಳಲ್ಲಿ ಮಾರ್ಗಗಳಿವೆ ಎಂದರು.

**ಶತಮಾನೋತ್ಸವ ಆಚರಣೆ:** ಮಹಾತ್ಮ ಗಾಂಧಿ ಅವರು ಅಧ್ಯಕ್ಷತೆಯಲ್ಲಿ ನಡೆದ ಏಕೈಕಸಭೆ1924 ಡಿಸೆಂಬರ್26,27ರಂದು ಬೆಳಗಾವಿ ಕಾಂಗ್ರೆಸ್ ಅಧಿವೇಶನ ನಡೆದಿತ್ತು. ಮಹಾತ್ಮಗಾಂಧಿಯವರು ಈ ಅಧಿವೇಶನದಲ್ಲಿ ಭಾಷಣ ಮಾಡಿದ ನೂರು ವರ್ಷಗಳು ಆಗುತ್ತಿರುವ ಹಿನ್ನೆಲೆಯಲ್ಲಿ ಶತಮಾನೋತ್ಸವವನ್ನು ಡಿಸೆಂಬರ್‌ನಲ್ಲಿ ಹೆಚ್ಚು ಅರ್ಥಪೂರ್ಣವಾಗಿ ಆಚರಿಸುತ್ತೇವೆ. ಅದಕ್ಕಾಗಿ ಸಚಿವ ಎಚ್.ಕೆ.ಪಾಟೀಲ್ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಗಿದ್ದು ರೂಪುರೇಷೆಗಳನ್ನು ಮಾಡಲಾಗುತ್ತಿದೆ ಎಂದರು. ಕಾರ್ಯಕ್ರಮದಲ್ಲಿ ದೆಹಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ ಅಧ್ಯಕ್ಷತೆ ವಹಿಸಿದ್ದರು. ಕಾನೂನು ಸಚಿವರಾದ ಎಚ್.ಕೆ. ಪಾಟೀಲ್, ಗಾಂಧಿ ಸ್ಮಾರಕ ನಿಧಿ ಕಾರ್ಯಾಧ್ಯಕ್ಷ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಕಾರ್ಯದರ್ಶಿ ಸಂಜೋಯ್ ಸಿಂಘ ಸೇರಿದಂತೆ ಹಲವು ಉಪಸ್ಥಿತರಿದ್ದರು.

# ಬಲಪಂಥೀಯರೇ ಗಾಂಧಿ ಕೊಂದರು: ಸಿಎಂ

## ಗಾಂಧಿಯನ್ನು ಮರೆತರೆ ವಿಶ್ವವನ್ನೇ ಮರೆತಂತೆ । ಬಾಪು ಕುರಿತ ವಿಚಾರ ಸಂಕಿರಣದಲ್ಲಿ ಸಿದ್ದರಾಮಯ್ಯ ಆತಂಕ

■ **ಉದಯವಾಣಿ ಸಮಾಚಾರ**

**ಬೆಂಗಳೂರು:** ಬಲಪಂಥಿಯರೇ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರನ್ನು ಕೊಂದಿದ್ದಾರೆ. ಅವರಂತಹವರೇ ಈಗ ಗೋಡ್ಸೆಯನ್ನು ಪೂಜೆ ಮಾಡುತ್ತಾರೆ. ಈ ಬಗ್ಗೆ ಎಚ್ಚರಿಗೆ ವಹಿಸದೇ ಹೋದರೆ ಮುಂದೆ ಕಷ್ಟವಾಗಲಿದೆ. ಪ್ರಜ್ಞಾವಂತರು ಇಂತಹ ವಿಚಾರಗಳ ಬಗ್ಗೆ ಹೆಚ್ಚು ಗಮನ ಹರಿಸಬೇಕು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆ ಪ್ರಯುಕ್ತ ಗಾಂಧಿ ಭವನದಲ್ಲಿ ಶನಿವಾರ ಆಯೋಜಿಸಿದ್ದ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ಕುರಿತ 2 ದಿನಗಳ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡಿದರು.

ಬಹಳ ಜನ ತಮ್ಮ ಸ್ವಾರ್ಥಕ್ಕಾಗಿ ಧರ್ಮ-ಧರ್ಮದ ನಡುವೆ, ಜಾತಿ-ಜಾತಿಗಳ ನಡುವೆ ವಿಷ ಬೀಜ ಬಿತ್ತುವ ಕೆಲಸ ಮಾಡುತ್ತಿದ್ದಾರೆ. ಬಲಪಂಥೀಯರೇ, ಧರ್ಮ ಮತ್ತು ಜಾತಿಯ ಹೆಸರಿನಲ್ಲಿ ರಾಜಕಾರಣ ಮಾಡುವವರೇ ಗಾಂಧೀಜಿ ಹತ್ಯೆಗೆ ಕಾರಣರಾಗಿದ್ದಾರೆ ಎಂದು ವಾಗ್ದಾಳಿ ನಡೆಸಿದರು.

**ಎಲ್ಲಕಾಲಕ್ಕೂ ಪ್ರಸ್ತುತ:** ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶಗಳು, ಇವತ್ತಿಗೂ ಕೂಡ ಪ್ರಸ್ತುತ ಅನ್ನುವುದನ್ನು ನಾವು ಮರೆಯಲು ಸಾಧ್ಯವಿಲ್ಲ, ಗಾಂಧೀಜಿಯನ್ನು ಮರೆತರೆ ಇಡೀ ಸಮಾಜವನ್ನು, ಇಡೀ ವಿಶ್ವವನ್ನು ಮರೆತಂತಾಗುತ್ತದೆ. ಆದರಿಂದ ಗಾಂಧೀಜಿ ಅವರ ವಿಚಾರಗಳನ್ನು ಸದಾ ಸ್ಮರಿಸಬೇಕಿದೆ ಎಂದರು.

ಕಾನೂನು ಸಚಿವ ಎಚ್.ಕೆ.ಪಾಟೀಲ್ ಮಾತನಾಡಿ, ಗಾಂಧೀಜಿ ಕೊಂದ ಗೋಡ್ಸೆ ಅವರನ್ನೇ ಗುಡಿಕಟ್ಟಿ ಪೂಜೆ ಮಾಡ ಹೊರಟಿರುವುದು ಅತ್ಯಂತ ಅಪಾಯಕಾರಿ ಬೆಳವಣಿಗೆ ಎಂದರು.

ಈ ವೇಳೆ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಕಾರ್ಯಾಧ್ಯಕ್ಷರಾದ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಸೇರಿ ಹಲವು ಪ್ರಮುಖರು ಉಪಸ್ಥಿತರಿದ್ದರು.




ಗಾಂಧಿ ಭವನದಲ್ಲಿ ನಡೆದ ಮಹಾತ್ಮ ಗಾಂಧೀಜಿ' ಕುರಿತ ವಿಚಾರ ಸಂಕಿರಣವನ್ನು ಸಿಎಂ ಸಿದ್ದರಾಮಯ್ಯ ಉದ್ಘಾಟಿಸಿದರು. ಕಾನೂನು ಸಚಿವ ಎಚ್.ಕೆ.ಪಾಟೀಲ್ ಉಪಸ್ಥಿತರಿದ್ದರು.

### ನನ್ನ ಕಾಲ್ಗುಣ ಸರಿಯಿಲ್ಲ ಎಂದು ಮೌಢ್ಯ ಬಿತ್ತಿದರು: ಸಿಎಂ ಬೇಸರ

ಸಿದ್ದರಾಮಯ್ಯ ಸಿಎಂ ಆದರೆ ಅವರ ಕಾಲಗುಣದಿಂದ ರಾಜ್ಯಕ್ಕೆ ಬರಗಾಲ ಬರುತ್ತದೆ ಎಂದು ಸಾರ್ವಜನಿಕ ವ್ಯಕ್ತಿಗಳೇ ಮೌಢ್ಯ ಬಿತ್ತುವ ಕುಟಿಲ ಪ್ರಯತ್ನ ಮಾಡಿದ್ದರು. ಹಾಗಾದರೆ ಈಗ ಏಕೆ ಮಳೆಯಾಗಿದೆ, ನಾನೇ ಈಗ ಮುಖ್ಯಮಂತ್ರಿ ಆಗಿದ್ದೀನಿ ಅಲ್ವಾ, ನಾನೇ ಸಿಎಂ ಆಗಿರಲಿ, ಬೇರೆಯವರೇ ಸಿಎಂ ಆಗಿರಲಿ ಪ್ರಕೃತಿ ವಿಕೋಪದಿಂದ ಮಳೆ ಬಾರದೆ ಹೋದರೆ ನಾವು ಯಾರೋ ವ್ಯಕ್ತಿ ಜವಾಬ್ದಾರರು ಎಂದು ಹೇಳುವುದು, ಜನರ ಮನಸಿನಲ್ಲಿ ಮೌಢ್ಯ ಬಿತ್ತುವ ಕೆಲಸ ಮಾಡಬಾರದು. ವೈಜ್ಞಾನಿಕವಾಗಿ ಆಲೋಚನೆ ಮಾಡುವ ಕೆಲಸ ಮಾಡಬೇಕು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

**ಗೋಡ್ಸೆ ಸರ್ಕಾರ ಈಗ ಗಾಂಧೀ ಸಂಸ್ಥೆಗಳ ಮೇಲೆ ದಾಳಿ ಮಾಡುತ್ತಿದೆ. ಗಾಂಧೀ ಸಂಸ್ಥೆಗಳ ವಿಚಾರವಾಗಿ ಈಗ ಕೋರ್ಟ್, ಕಚೇರಿ ಅಲೆಯುವ ಪರಿಸ್ಥಿತಿ ಬಂದಿದೆ.**

**ತುಷಾರ್ ಗಾಂಧಿ, ಗಾಂಧೀಜಿ ಮರಿ ಮೊಮ್ಮಗ**

ವಿಜಯವಾಣಿ
VIJAYAVANI » BENGALURU
ಭಾನುವಾರ 25 ಆಗಸ್ಟ್ 2024
25 AUGUST 2024

## ಸಿದ್ದರಾಮಯ್ಯ ಕಳವಳ | '21ನೇ ಶತಮಾನಕ್ಕೆ ಗಾಂಧಿ' ವಿಚಾರಸಂಕಿರಣ

# ವಿದ್ಯಾವಂತರಲ್ಲಿ ಹೆಚ್ಚಿದ ಜಾತಿವಾದ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಜಾತಿ ವ್ಯವಸ್ಥೆಯಿಂದಾಗಿ ಹಲವು ಸಮುದಾಯಗಳು ಶಿಕ್ಷಣದಿಂದ ವಂಚಿತರಾಗಿದ್ದರಿಂದ ಅಸಮಾನತೆ ಹೆಚ್ಚಾಯಿತು. ಆದರೆ, ಶಿಕ್ಷಣ ಪಡೆದಂತಹ ವಿದ್ಯಾವಂತರೇ ಇಂದು ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದ್ದಾರೆ.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಿರುವ ಎರಡು ದಿನಗಳ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ಅಂತಾರಾಷ್ಟ್ರೀಯ ವಿಚಾರಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು.

**ಗಾಂಧಿ ಸ್ಮಾರಕ ನಿಧಿ 75ನೇ ಸಂಸ್ಮರಣೆ**

ಧರ್ಮ, ಜಾತಿ ಹೆಸರಿನಲ್ಲಿ ರಾಜಕೀಯ ಮಾಡುವಂತಹ ಬಲಪಂಥೀಯರೇ ಗಾಂಧೀಜಿ ಅವರನ್ನು ಕೊಂದುಹಾಕಿ ಗೋಡ್ಸೆಯನ್ನು ಪೂಜಿಸುತ್ತಾರೆ. ಇಂತಹ ವಿಚಾರಗಳ ಬಗ್ಗೆ ಎಲ್ಲ ಪ್ರಜ್ಞಾವಂತರು ಗಮನಹರಿಸಬೇಕು ಎಂದರು.

ಸರ್ವರನ್ನೂ ಒಳಗೊಳ್ಳುವ ಮತ್ತು ಅಹಿಂಸೆ ಗಾಂಧಿಯವರ ಮಾರ್ಗವಾಗಿತ್ತು. ಇದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದೆ. 'ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹಗಳನ್ನು ಹುಡುಕಿಕೊಂಡು ಹೋಗುವಂತಾಗಬಾರದು' ಎಂದಿದ್ದರು ಸ್ಟೀಫನ್ ಹಾಕಿಂಗ್. ಮನುಷ್ಯ- ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಂಡಾಗ ನೆಮ್ಮದಿಯ ಬದುಕು ಸಾಧ್ಯ ಎಂದು ಹೇಳಿದರು.

**ಪಾಟೀಲ್ ನೇತೃತ್ವದ ಸಮಿತಿ ರಚನೆ:** ಮಹಾತ್ಮ ಗಾಂಧಿ ಅಧ್ಯಕ್ಷತೆ ವಹಿಸಿದ್ದ 1924ರ ಕಾಂಗ್ರೆಸ್ ಬೆಳಗಾವಿ ಅಧಿವೇಶನದ ಶತಮಾನೋತ್ಸವವನ್ನು ಹೆಚ್ಚು ಅರ್ಥಪೂರ್ಣವಾಗಿ ಆಚರಿಸಲಾಗುತ್ತದೆ. ಸಚಿವ ಎಚ್.ಕೆ. ಪಾಟೀಲ್ ನೇತೃತ್ವದಲ್ಲಿ ಸಮಿತಿ ರಚನೆ ಮಾಡಲಾಗಿದೆ ಎಂದು ತಿಳಿಸಿದರು.

ಕಾನೂನು ಮತ್ತ ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ ಕೃಷ್ಣ, ಕಾರ್ಯಾಧ್ಯಕ್ಷ ವಿಶುಕುಮಾರ್ ಇತರರಿದ್ದರು.

ವಿಜಯವಾಣಿ ಚಿತ್ರ



ಗಾಂಧಿ ಭವನದಲ್ಲಿ ಆಯೋಜಿಸಿರುವ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ಅಂತಾರಾಷ್ಟ್ರೀಯ ವಿಚಾರಸಂಕಿರಣದ ಉದ್ಘಾಟನೆ ಸಂದರ್ಭದಲ್ಲಿ ಸಿಎಂ ಸಿದ್ದರಾಮಯ್ಯ, ಸಚಿವ ಎಚ್.ಕೆ. ಪಾಟೀಲ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕಾರ್ಯಾಧ್ಯಕ್ಷ ವಿಶುಕುಮಾರ್ ಉಪಸ್ಥಿತರಿದ್ದರು.

## ಗಾಂಧಿ ತತ್ವಗಳ ಮೇಲೆ ಸಂಘ ಪರಿವಾರದ ಹಿಡಿತ

ಗಾಂಧೀಜಿ ಸ್ಥಾಪಿಸಿದ ಸಂಸ್ಥೆಗಳು ಮತ್ತು ಅವರ ತತ್ವಗಳನ್ನು ಮುನ್ನಡೆಸುತ್ತಿರುವ ಒಂದೊಂದೇ ಸಂಸ್ಥೆಗಳ ಮೇಲೆ ಸಂಘ ಪರಿವಾರದವರ ಹಿಡಿತ ಹೆಚ್ಚುತ್ತಿದೆ. ಪರಿಸ್ಥಿತಿ ಹೀಗೆಯೇ ಮುಂದುವರಿದರೆ ಮುಂದೊಂದು ದಿನ ಗಾಂಧಿ ಕುರಿತು ವಿದೇಶಗಳಿಂದ ಅಧ್ಯಯನ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾದರೂ ಅಚ್ಚರಿಯಿಲ್ಲ ಎಂದು ಗಾಂಧೀಜಿ ಮರಿಮೊಮ್ಮಗ ತುಷಾರ್ ಗಾಂಧಿ ಕಳವಳ ವ್ಯಕ್ತಪಡಿಸಿದರು.



ಈಗಾಗಲೇ ಸಾಬರಮತಿ ಆಶ್ರಮ, ಗುಜರಾತ್ ವಿದ್ಯಾಪೀಠ ಕಳೆದುಕೊಂಡಿದ್ದೇವೆ. ಸಾಬರಮತಿ ಆಶ್ರಮದ ಜಮೀನನ್ನು ಗುಜರಾತ್ ಮಾಜಿ ಮುಖ್ಯಮಂತ್ರಿ ಆನಂದಿಬೆನ್ ಪಟೇಲ್ ಅವರ ಅಳಿಯನ ಸಂಸ್ಥೆಗೆ ನೀಡಲು ಅಲ್ಲಿನ ಸರ್ಕಾರ ಮುಂದಾಗಿದೆ. ಜಯಚಂದ್, ಮೀರ್ ಜಾಫರ್‌ನಂತ ವ್ಯಕ್ತಿಗಳು ಗಾಂಧಿ ಸ್ಥಾಪಿಸಿದ ಸಂಸ್ಥೆಗಳನ್ನು ಒಳಗಿನಿಂದಲೇ ಪೊಳ್ಳಾಗಿಸಿ, ಸರ್ಕಾರದ ವಶಕ್ಕೆ ನೀಡುತ್ತಿದ್ದಾರೆ ಎಂದು ವಿಷಾದ ವ್ಯಕ್ತಪಡಿಸಿದರು.

ಯೂಕ್ರೇನ್ ಮತ್ತು ರಷ್ಯಾದಲ್ಲಿ ಗಾಂಧಿಯವರ ಶಾಂತಿ ಜಪ ಮಾಡುವ ನಮ್ಮ ಪ್ರಧಾನಿಯವರು ಮಣಿಪುರ ಹೊತ್ತಿ ಉರಿದರೂ ಸುಮ್ಮನಿದ್ದರು. ಹೀಗೆ, ಹೊರದೇಶಗಳಲ್ಲಿ ಗಾಂಧಿ ಮತ್ತು ಅವರ ವಿಚಾರಧಾರೆ ಬಗ್ಗೆ ಮಾತನಾಡುವವರು ನಮ್ಮ ದೇಶದಲ್ಲಿ ಅವುಗಳ ಅನುಷ್ಠಾನ ಮಾಡುತ್ತಿಲ್ಲ. ಹಾಗೆಯೇ, 'ಭಾರತ ಜೋಡೋ' ಯಾತ್ರೆ ಗಾಂಧಿ ವಿಚಾರಧಾರೆಯಿಂದ ಕೂಡಿದ್ದರೂ, ಅದೊಂದು ಕಾಂಗ್ರೆಸ್‌ನ ರಾಜಕೀಯ ಲಾಭದ ನಡೆಯಾಗಿತ್ತು ಎಂದು ತುಷಾರ್ ಗಾಂಧಿ ಟೀಕಿಸಿದರು.

## ಮಹಾತ್ಮ ಗಾಂಧಿ ಮರಿಮೊಮ್ಮಗ ತುಷಾರ್ ಗಾಂಧಿ ವಿಷಾದ | ಸಬರಮತಿ ಆಶ್ರಮ ಪರಭಾರೆ

# ರೋಗಗ್ರಸ್ಥವಾದ ಗಾಂಧೀಜಿ ವಿಚಾರಧಾರೆ

**ವಿಕ ಸುದ್ದಿಲೋಕ** ಬೆಂಗಳೂರು

ಭಾರತದಲ್ಲಿ ಗೋಡ್ಸೆ ಸಾವರ್ಕರ್ ವಿಚಾರಧಾರೆಯೇ ಹೆಚ್ಚು ತಾಂಡವವಾಡುತ್ತಿವೆ. ಮಹಾತ್ಮಗಾಂಧಿ ವಿಚಾರಧಾರೆಗಳು ರೋಗಗ್ರಸ್ಥವಾಗಿವೆ. ಅದಕ್ಕೆ ಚಿಕಿತ್ಸೆ ನೀಡಬೇಕಾದ ಅಗತ್ಯವಿದೆ ಎಂದು ಗಾಂಧೀಜಿ ಅವರ ಮರಿಮೊಮ್ಮಗ ತುಷಾರ್ ಗಾಂಧಿ ಹೇಳಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆ ಹಿನ್ನೆಲೆಯಲ್ಲಿ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ವಿಷಯ ಕುರಿತು ಗಾಂಧಿ ಭವನದಲ್ಲಿ ಶನಿವಾರದಿಂದ ಆರಂಭವಾದ ಎರಡು ದಿನಗಳ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ಮಾತನಾಡಿದರು.

''ದೇಶದಲ್ಲಿ ಗೋಡ್ಸೆ ವಿಚಾರಧಾರೆಯ ಸರಕಾರದಿಂದಾಗಿ, ಗಾಂಧಿ ಸ್ಥಾಪಿಸಿದ ಮತ್ತು ಅವರ ತತ್ವಗಳನ್ನು ಮುನ್ನಡೆಸುತ್ತಿರುವ ಸಂಸ್ಥೆಗಳ ಮೇಲೆ ಸಂಘ ಪರಿವಾರದವರ ಹಿಡಿತ ಹೆಚ್ಚಾಗಿದೆ. ಈ ಪರಿಸ್ಥಿತಿ ಮುಂದುವರಿದರೆ ಗಾಂಧೀಜಿಯವರ ಬಗ್ಗೆ ವಿದೇಶಗಳಲ್ಲಿ ಅಧ್ಯಯನ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಬಹುದು. ಆದ್ದರಿಂದ ಗಾಂಧೀಜಿ ಹಾಗೂ ಅವರ ವಿಚಾರಗಳ ನಡುವೆ ಇಷ್ಟು ದೊಡ್ಡ ಕಂದಕ ನಿರ್ಮಾಣವಾಗಿದ್ದೇಕೆ ಎಂಬ ಬಗ್ಗೆ ನಾವೆಲ್ಲ ಆತ್ಮವಿಮರ್ಶೆ ಮಾಡಿಕೊಳ್ಳಬೇಕಿದೆ,'' ಎಂದು ಹೇಳಿದರು.



ನಗರದಲ್ಲಿ ಶನಿವಾರದಿಂದ ಆರಂಭವಾದ ಎರಡು ದಿನಗಳ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಗಣ್ಯರು ಉದ್ಘಾಟಿಸಿದರು.

''ಈಗಾಗಲೇ ಸಬರಮತಿ ಆಶ್ರಮ, ಗುಜರಾತ್ ವಿದ್ಯಾಪೀಠ ಕಳೆದುಕೊಂಡಿದ್ದೇವೆ. ಈಗ ಸಬರಮತಿ ಆಶ್ರಮದ ಭೂಮಿಯನ್ನು ಗುಜರಾತ್ ಮಾಜಿ ಮುಖ್ಯಮಂತ್ರಿ ಆನಂದಿಬೆನ್ ಪಟೇಲ್ ಅವರ ಅಳಿಯನ ಸಂಸ್ಥೆಗೆ ನೀಡಲು ಅಲ್ಲಿನ ಸರಕಾರ ಮುಂದಾಗಿದೆ,'' ಎಂದು ವಿಷಾದಿಸಿದರು.

**ವಿದೇಶದಲ್ಲಿ ಮಾತ್ರ ಜಪ:** 'ಯುದ್ಧ ಪ್ರದೇಶಗಳಾದ ಉಕ್ರೇನ್ ಮತ್ತು ರಷ್ಯಾದಲ್ಲಿ ಮಹಾತ್ಮ ಗಾಂಧಿ ಅವರ ಶಾಂತಿ ಜಪ ಮಾಡುವ ನಮ್ಮ ಪ್ರಧಾನಿಯು ಮಣಿಪುರ ಹೊತ್ತಿ ಉರಿದರೂ ಸುಮ್ಮನಿದ್ದರು. ಇನ್ನು ಭಾರತ ಜೋಡೊ ಯಾತ್ರೆ ಗಾಂಧೀಜಿಯ ವಿಚಾರಧಾರೆಯಿಂದ ಕೂಡಿದ್ದರೂ, ಅದೊಂದು ಕಾಂಗ್ರೆಸ್ ಹುಡುಗನೊಬ್ಬನ ರಾಜಕೀಯ ಲಾಭದ ನಡೆಯಾಗಿತ್ತು,'' ಎಂದು ಟೀಕಿಸಿದರು.

ಕಾನೂನು ಸಚಿವ ಎಚ್.ಕೆ. ಪಾಟೀಲ್, ಹೊಸದಿಲ್ಲಿಯ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕಾರ್ಯದರ್ಶಿ ಸಂಜೋಯ್ ಸಿಂಗ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಗೌರವ ಕಾರ್ಯದರ್ಶಿ ಎಂ.ಸಿ. ನರೇಂದ್ರ, ಕಾರ್ಯಾಧ್ಯಕ್ಷ ವಿಶುಕುಮಾರ್ ಇದ್ದರು.

### ಬಲಪಂಥೀಯ ಮನಃಸ್ಥಿತಿಯಿಂದ ಹತ್ಯೆ

''ಧರ್ಮ-ಜಾತಿ ಹೆಸರಿನಲ್ಲಿ ರಾಜಕಾರಣ ಮಾಡುತ್ತಾ ಅಸಮಾನತೆಯನ್ನು ಪೋಷಿಸುತ್ತಿರುವ ಬಲಪಂಥೀಯ ಮನಃಸ್ಥಿತಿಯವರೇ ಮಹಾತ್ಮ ಗಾಂಧಿಯನ್ನು ಕೊಂದರು,'' ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಆರೋಪಿಸಿದರು. ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ''ಜಗತ್ತಿನ ಎಲ್ಲ ಧಾರ್ಮಿಕ ಸಂಘಟನೆಗಳು, ಧರ್ಮಧ ಆಧಾರದ ಮೇಲೆ ನಡೆಯುತ್ತಿರುವ ರಾಜಕೀಯ ಪಕ್ಷಗಳು ಮನುಷ್ಯ ಕುಲಕ್ಕೆ ಕಂಟಕವಾಗಿವೆ. ಇವುಗಳನ್ನು ತಿರಸ್ಕರಿಸದಿದ್ದರೆ ಮನುಷ್ಯ ಕುಲಕ್ಕೆ ಅಪಾಯ ತಪ್ಪಿದ್ದಲ್ಲ, ಆದ್ದರಿಂದ ಗಾಂಧೀಜಿ ಮೊದಲಿಗಿಂತಲೂ ಈಗ ಹೆಚ್ಚು ಪ್ರಸ್ತುತವಾಗಿದ್ದಾರೆ,'' ಎಂದು ಪ್ರತಿಪಾದಿಸಿದರು.

ಸಂಯುಕ್ತ ಕರ್ನಾಟಕ
ಭಾನುವಾರ 25 ಆಗಸ್ಟ್ 2024
ಬೆಂಗಳೂರು | BENGALURU

# ಗಾಂಧೀಜಿ ವಿಚಾರಧಾರೆ ಇಂದಿಗೂ ಪ್ರಸ್ತುತ



ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಶನಿವಾರ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಉದ್ಘಾಟಿಸಿದರು. ಕಾನೂನು ಸಚಿವ ಎಚ್.ಕೆ. ಪಾಟೀಲ್, ನವದೆಹಲಿಯ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಾಹಿ ಸೇರಿದಂತೆ ಇನ್ನಿತರರು ಭಾಗಿಯಾಗಿದ್ದರು.

ಬೆಂಗಳೂರು: ಧರ್ಮ-ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಶನಿವಾರ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಅವರು ಜಾತಿ ವ್ಯವಸ್ಥೆ ಕಾರಣದಿಂದ ಬಹುಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮಾನಕ್ಕೆ ಮಾತ್ರ ಸೀಮಿತವಾಗಿಲ್ಲ, ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.

ಪ್ರಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು, ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದರು.

ಕಾನೂನು ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ ಅಹಿಂಸೆ, ಸತ್ಯ, ಕೋಮು ಸೌಹಾರ್ದತೆಯನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದರಿಂದ ಸಮಾಜದಲ್ಲಿ ಶಾಂತಿಯುತವಾಗಿ ಬದುಕಬಹುದು. ಗಾಂಧಿ ವಿಚಾರ ಧಾರೆಗಳು ಸಮಾಜದ ನಡವಳಿಕೆ ಗಳ ಮೇಲೆ ಬೆಳಕು ಚೆಲ್ಲುವಂತ ಕೆಲಸವಾಗಬೇಕಿದೆ. ದೇಶದ ಪ್ರತಿ ಜಿಲ್ಲೆಯಲ್ಲೂ ಒಂದೊಂದು ಗಾಂಧಿ ಭವನವನ್ನು ನಿರ್ಮಿಸಲಾಗಿದ್ದು, ಈ ಮೂಲಕ ಗಾಂಧಿ ತತ್ವಗಳನ್ನು ಜೀವಂತಗೊಳಿಸಲಾಗಿದೆ. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸನ್ನು ನಾವೆಲ್ಲರೂ ಒಗ್ಗಟ್ಟಾಗಿ ಈಡೇರಿಸಬೇಕಾಗಿದೆ ಎಂದು ಅಭಿಪ್ರಾಯ ಪಟ್ಟರು.ನವದೆಹಲಿಯ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಾಹಿ ಮಾತನಾಡಿ ಭಾರತದ ವಿಪರೀತ ಸ್ಥಿತಿಯಲ್ಲೂ ಗಾಂಧಿ ಸ್ಮಾರಕ ನಿಧಿ ನಿರಂತರವಾಗಿ ಜನಪರ ಕಾಳಜಿ ಕೆಲಸಗಳನ್ನು ಮಾಡಿದೆ. ಸಮಾಜದಲ್ಲಿ ಹೊಸ ಮೌಲ್ಯಗಳನ್ನು ಸ್ಥಾಪಿಸುವ ನಿಟ್ಟಿನಲ್ಲಿ ಸರ್ವೋದಯ ಸಮಾಜ ನಿರ್ಮಾಣವಾಗಬೇಕಾಗಿದೆ ಎಂದು ತಿಳಿಸಿದರು. ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷ ಸಂಜೋಯ್ ಸಿಂಗ್, ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಎಂ.ಸಿ. ನರೇಂದ್ರ, ಸೇರಿದಂತೆ ಎನ್‌ಎಸ್‌ಎಸ್ ಕಾರ್ಯಕರ್ತರು, ಅಂತಾರಾಷ್ಟ್ರೀಯ ಮಟ್ಟದ ಗಾಂಧಿ ವಿಚಾರಧಾರಿಗಳು ಭಾಗಿಯಾಗಿದ್ದರು. ಶಿವರಾಜ್ ನಿರೂಪಿಸಿದರು, ಡಾ. ವೂಡ್ಕೆ ಕೃಷ್ಣ ಸ್ವಾಗತಿಸಿದರು, ವಿಶು ಕುಮಾರ್ ವಂದಿಸಿದರು.

ಹೊಸದಿಗಂತ
ಭಾನುವಾರ, 25 ಆಗಸ್ಟ್ 2024, ಬೆಂಗಳೂರು

## 21ನೇ ಶತಮಾನಕ್ಕೆ ಮಹಾತ್ಮ ಗಾಂಧಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣ

# ಜಾತಿ -ಧರ್ಮ ಹೆಸರಲ್ಲಿ ಅಸಮಾನತೆ ಹೆಚ್ಚು



**ಬೆಂಗಳೂರು:** ಜಾತಿ -ಧರ್ಮ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚಾಗುತ್ತದೆ. ಇಂದಿನ ದಿನಗಳಲ್ಲಿ ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ ಎಂದು ಮುಖ್ಯ ಮಂತ್ರಿ ಸಿದ್ದರಾಮಯ್ಯ ಬೇಸರ ವ್ಯಕ್ತಪಡಿಸಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮ ಗಾಂಧಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಅವರು, ಗಾಂಧಿ ವಿಚಾರಗಳು ಹಾಗೂ ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಗಾಂಧಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಬ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಜಾತಿ ವ್ಯವಸ್ಥೆಯನ್ನು ತೊರೆದು ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.

ಪ್ರಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು, ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದರು. ಸರ್ವರನ್ನೂ ಒಳಗೊಳ್ಳುವ ಮತ್ತು ಅಹಿಂಸೆ ಗಾಂಧಿಯವರ ಮಾರ್ಗವಾಗಿತ್ತು. ಇದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದ್ದು, ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸನ್ನು ಈಡೇರಿಸಬೇಕಾಗಿದೆ. ಗಾಂಧಿಯವರ ಆಶಯದಂತೆ ರಾತ್ರಿ 12 ಗಂಟೆಗೂ ನಮ್ಮ ಹೆಣ್ಣು ಮಕ್ಕಳು ನಿರ್ಭಯದಿಂದ ಓಡಾಡುವಂತಾಗಬೇಕಿದೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕಾನೂನು ಸಚಿವ ಎಚ್.ಕೆ.ಪಾಟೀಲ್, ಕಾರ್ಯಾಧ್ಯಕ್ಷ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷ ಸಂಜೋಯ್ ಸಿಂಗ್ ಸೇರಿದಂತೆ ಇತರರು ಉಪಸ್ಥಿತರಿದ್ದರು.

# ದ ಡೈಲಿ ನ್ಯೂಸ್

ಭಾನುವಾರ 25 ಆಗಸ್ಟ್ 2024
The Daily News



ಬೆಂಗಳೂರಿನ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ ಅಂತಾರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಸಿಎಂ ಸಿದ್ದರಾಮಯ್ಯ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಸಚಿವ ಎಚ್.ಕೆ.ಪಾಟೀಲ್, ಕಾರ್ಯಾಧ್ಯಕ್ಷ ವಿಶುಕುಮಾರ್, ಹೊಸದಿಲ್ಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಇತರರಿದ್ದರು.

# ಧರ್ಮದ ಹೆಸರಲ್ಲಿ ಸಮಾಜ ಒಡೆದರೆ ಅಸಮಾನತೆ ಹೆಚ್ಚಳ

## ಸಿಎಂ ಸಿದ್ದರಾಮಯ್ಯ

## '21ನೇ ಶತಮಾನಕ್ಕೆ ಮಹಾತ್ಮಾ ಗಾಂಧೀಜಿ' ಅಂತರ್‌ರಾಷ್ಟ್ರೀಯ ವಿಚಾರ ಸಂಕಿರಣ

ಬೆಂಗಳೂರು, ಆ.24: ಧರ್ಮ-ಜಾತಿಯ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದ್ದಾರೆ.

ಶನಿವಾರ ನಗರದ ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಆಯೋಜಿಸಲಾಗಿದ್ದ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ಅಂತರ್‌ರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮಾನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಿನ ಕಾಲಕ್ಕೂ ಪ್ರಸಕ್ತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದು ಅವರು ಹೇಳಿದರು.

ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹಗಳನ್ನು ಹುಡುಕಿಕೊಂಡು ಹೋಗುವಂತಾಗಬಾರದು ಎನ್ನುವ ಸ್ಟೀಫನ್ ಹಾಕಿಂಗ್ ಅವರ ಮಾತನ್ನು ಪ್ರಸ್ತಾಪಿಸಿ, ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವ ಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದು ಸಿದ್ದರಾಮಯ್ಯ ತಿಳಿಸಿದರು.

ಪ್ರಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು, ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧಿಯವರ ನಂಬಿಕೆಯಾಗಿತ್ತು. ಕೇರಳದ ವಯನಾಡ್ ಮತ್ತು ರಾಜ್ಯದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣವಾಗಿದೆ ಎಂದು ಸಿದ್ದರಾಮಯ್ಯ ಹೇಳಿದರು.



### 'ನನ್ನ ಬಗ್ಗೆಯೇ ಮೌಢ್ಯ ಬಿತ್ತಲಾಗಿತ್ತು'

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾದರೆ ಅವರ ಕಾಲಗುಣದಿಂದ ರಾಜ್ಯಕ್ಕೆ ಬರಗಾಲ ಬರುತ್ತದೆ ಎಂದು ಸಾರ್ವಜನಿಕ ವ್ಯಕ್ತಿಗಳೇ ಮೌಢ್ಯ ಬಿತ್ತುವ ಕುಟಿಲ ಪ್ರಯತ್ನ ಮಾಡಿದ್ದರು. ಆದರೆ, ಈಗ ಸಿಕ್ಕಾಪಟ್ಟೆ ಮಳೆ ಬರುತ್ತಿದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ, ಬಿಜೆಪಿ ನಾಯಕರಿಗೆ ಪರೋಕ್ಷವಾಗಿ ತಿರುಗೇಟು ಕೊಟ್ಟಿದ್ದಾರೆ.

ಬಹಳ ಮಂದಿ ಶಿಕ್ಷಿತರೇ ಕಂದಾಚಾರ, ಕರ್ಮ ಸಿದ್ಧಾಂತ, ಮೌಢ್ಯವನ್ನು ಆಚರಿಸುತ್ತಾರೆ. ಇದಕ್ಕೆ ಸರಿಯಾದ ವೈಜ್ಞಾನಿಕ ಶಿಕ್ಷಣದ ಕೊರತೆಯೇ ಕಾರಣ. 850 ವರ್ಷಗಳ ಹಿಂದೆಯೇ ಬಸವಾದಿ ಶರಣರು ಕರ್ಮ ಸಿದ್ಧಾಂತವನ್ನು ತಿರಸ್ಕರಿಸಿದ್ದರು. ಆದರೆ, ಈಗಿನ ಕೆಲವು ಶಿಕ್ಷಿತರೇ ಕರ್ಮ ಸಿದ್ಧಾಂತದಲ್ಲಿ ನಂಬಿಕೆ ಇಟ್ಟಿದ್ದಾರೆ ಎಂದು ಸಿದ್ದರಾಮಯ್ಯ ಬೇಸರ ವ್ಯಕ್ತಪಡಿಸಿದರು.

ನೆಹರೂ ಅವರು ವೈಜ್ಞಾನಿಕ ಮತ್ತು ವೈಚಾರಿಕ ಮಾರ್ಗದಲ್ಲಿ ಸಮಾಜವನ್ನು ಸನ್ನದ್ಧಗೊಳಿಸಿ ದೇಶವನ್ನು ಮುನ್ನಡೆಸುತ್ತಿದ್ದರು. ಸರ್ವರನ್ನೂ ಒಳಗೊಳ್ಳುವ ಮತ್ತು ಅಹಿಂಸೆ ಗಾಂಧಿಯವರ ಮಾರ್ಗವಾಗಿತ್ತು. ಇದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದೆ ಎಂದು ಸಿದ್ದರಾಮಯ್ಯ ಹೇಳಿದರು.

### 'ಅಸಮಾನತೆಯ ಪೋಷಕರೇ ಗಾಂಧಿಯನ್ನು ಕೊಂದರು'

ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯಿತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಆಕ್ರೋಶ ವ್ಯಕ್ತಪಡಿಸಿದ್ದಾರೆ.

ದೇಶದ ಶೇ.85ರಷ್ಟು ಆಸ್ತಿ ಶೇ.1 ಶ್ರೀಮಂತರ ಕೈಗೆ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರ ವಿಚಾರಗಳಲ್ಲಿ ಮಾರ್ಗಗಳಿವೆ. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸನ್ನು ಈಡೇರಿಸಬೇಕಾಗಿದೆ. ಗಾಂಧಿಯವರ ಆಶಯದಂತೆ ರಾತ್ರಿ 12 ಗಂಟೆಗೂ ನಮ್ಮ ಹೆಣ್ಣು ಮಕ್ಕಳು ನಿರ್ಭಯದಿಂದ ಓಡಾಡುವಂತಾಗಬೇಕಿದೆ ಎಂದು ಸಿದ್ದರಾಮಯ್ಯ ತಿಳಿಸಿದರು.

ಕಾರ್ಯಕ್ರಮದಲ್ಲಿ ಕಾನೂನು ಸಚಿವ ಎಚ್.ಕೆ.ಪಾಟೀಲ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ, ಕಾರ್ಯಾಧ್ಯಕ್ಷ ವಿಶುಕುಮಾರ್, ಹೊಸದಿಲ್ಲಿ ಸ್ಮಾರಕ ನಿಧಿ ಅಧ್ಯಕ್ಷ ಸಂಜೋಯ್ ಸಿಂಗ್ ಮತ್ತಿತರರು ಉಪಸ್ಥಿತರಿದ್ದರು.

25-08-2024 ಕೋಲಾರ ವಾಣಿ

# 'ಜಾತಿ ಅಸಮಾನತೆಯ ಪೋಷಕರೇ ಗಾಂಧಿಯನ್ನು ಕೊಂದರು'



ಬೆಂಗಳೂರು

ಧರ್ಮ–ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಸಿ.ಎಂ.ಸಿದ್ದರಾಮಯ್ಯ ನುಡಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ "21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ" ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು.

ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.

ನೆಹರೂ ಅವರು ವೈಜ್ಞಾನಿಕ ಮತ್ತು ವೈಚಾರಿಕ ಮಾರ್ಗದಲ್ಲಿ ಸಮಾಜವನ್ನು ಸನ್ನದ್ಧಗೊಳಿಸಿ ದೇಶವನ್ನು ಮುನ್ನಡೆಸುತ್ತಿದ್ದರು ಎಂದರು.

ಸರ್ವರನ್ನೂ ಒಳಗೊಳ್ಳುವ ಮತ್ತು ಅಹಿಂಸೆ ಗಾಂಧಿಯವರ ಮಾರ್ಗವಾಗಿತ್ತು. ಇದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದೆ. ದೇಶದ ಶೇ85 ರಷ್ಟು ಆಸ್ತಿ ಶೇ1 ಶ್ರೀಮಂತರ ಕೈಗೆ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರು ವಿಚಾರಗಳಲ್ಲಿ ಮಾರ್ಗಗಳಿವೆ ಎಂದರು.

ಮಹಾತ್ಮಗಾಂಧಿಯವರು ಅಧ್ಯಕ್ಷತೆ ವಹಿಸಿದ್ದ ಕಾಂಗ್ರೆಸ್‌ನ ಬೆಳಗಾವಿ ಅಧಿವೇಶನದ ಶತಮಾನೋತ್ಸವವನ್ನು ಹೆಚ್ಚು ಅರ್ಥಪೂರ್ಣವಾಗಿ ಆಚರಿಸುತ್ತೇವೆ ಎಂದರು.

ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸನ್ನು ಈಡೇರಿಸಬೇಕಾಗಿದೆ. ಗಾಂಧಿಯವರ ಆಶಯದಂತೆ ರಾತ್ರಿ 12 ಗಂಟೆಗೂ ನಮ್ಮ ಹೆಣ್ಣು ಮಕ್ಕಳು ನಿರ್ಭಯದಿಂದ ಓಡಾಡುವಂತಾಗಬೇಕಿದೆ. ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರ ರಾಹಿ, ನಾಡೋಜ ಡಾ.ವೂಡೆ.ಪಿ.ಕೃಷ್ಣ ಅವರು ಅಧ್ಯಕ್ಷತೆವಹಿಸಿದ್ದ ಕಾರ್ಯಕ್ರಮದಲ್ಲಿ ಕಾನೂನು ಸಚಿವರಾದ ಹೆಚ್.ಕೆ.ಪಾಟೀಲ್, ಕಾರ್ಯಾಧ್ಯಕ್ಷರಾದ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೋಯ್ ಸಿಂಗ್ ಸೇರಿ ಹಲವು ಪ್ರಮುಖರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಶನಿವಾರ 24 ಆಗಸ್ಟ್ 2024
ಬೆಂಗಳೂರು | BENGALURU

# ಭಾರತದ ವೈವಿಧ್ಯತೆಗೆ ಭಾಷೆಗಳ ಮೆರಗು

ಬೆಂಗಳೂರು: ಭಾಷಾ ರಂಗೋಲಿಯಿಂದ ಕೂಡಿದ ನಮ್ಮ ಭಾರತವು ಸಂಸ್ಕೃತಿ, ಸಾಹಿತ್ಯ, ಪರಂಪರೆಯಂತೆ ವಿವಿಧ ಬಣ್ಣಗಳನ್ನು ಕಂಗೊಳಿಸುತ್ತಿದೆ. ಈ ಬಣ್ಣಗಳನ್ನು ಉಳಿಸಿಕೊಂಡು ಹೋಗುವ ನಿಟ್ಟಿನಲ್ಲಿ ನಾವೆಲ್ಲರೂ ಶ್ರಮಿಸಬೇಕಾಗಿದೆ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ ಹೇಳಿದರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಮತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದಲ್ಲಿ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಕಾಲೇಜಿನಲ್ಲಿ ನಡೆದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಹಾಗೂ ಕನ್ನಡ ಜಾಗೃತಿ ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದ ಅವರು, ಭಾರತ ವಿವಿಧತೆಯಲ್ಲಿ ಏಕತೆ ಸಾರುವ ದೇಶ. ಹಲವಾರು ಕವಿಗಳು ದಾರ್ಶನಿಕರು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆಂದರು.

ಕವಿತೆ, ವಚನ, ದಾಸಸಾಹಿತ್ಯ, ಹರಿಕಥೆ, ಪುರಾಣ ಕಥೆಗಳನ್ನು ಇಂದಿನ ಮಕ್ಕಳಿಗೆ ಉಪನ್ಯಾಸಕರು ಹೇಳಿಕೊಡಬೇಕಾಗಿದೆ. ಇಂದಿನ ವಿದ್ಯಾರ್ಥಿಗಳೇ ನಾಳೆಯ ಭವಿಷ್ಯಕ್ಕೆ ಅಡಿಪಾಯ, ಹಾಗಾಗಿ ಮಕ್ಕಳಿಗೆ ನಮ್ಮ ಸಾಹಿತ್ಯ ಭಂಡಾರದ ಬಗ್ಗೆ ಅರಿವು ಮೂಡಿಸುವುದು ಅಗತ್ಯ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ.ಪಿ ಕೃಷ್ಣ ಮಾತನಾಡಿ, ಮಾತೃಭಾಷೆಯಲ್ಲಿ ಭಾವನೆಗಳನ್ನು ಸರಳವಾಗಿ ವ್ಯಕ್ತಪಡಿಸಬಹುದು ಮತ್ತು ನಮ್ಮ ಬರವಣಿಗೆಯಲ್ಲಿ ಸೃಜನಶೀಲತೆಯನ್ನು ಕಾಣಬಹುದು. ಒಂದು ಪುಸ್ತಕ ಓದುವುದರಿಂದ ಪಡೆದುಕೊಳ್ಳುವಂತ ಜ್ಞಾನವನ್ನು ಒಬ್ಬ ದಾರ್ಶನಿಕನಿಂದ ಕೇಳಿ ಪಡೆದುಕೊಳ್ಳಬಹುದು. ಹಾಗಾಗಿ ವಿದ್ಯಾರ್ಥಿಗಳು ಹೆಚ್ಚೆಚ್ಚು ಗೋಷ್ಠಿಗಳಲ್ಲಿ ಭಾಗವಹಿಸಿ ನಿಮ್ಮ ಜ್ಞಾನದ ಸಂಪತ್ತನ್ನು ಬೆಳೆಸಿಕೊಳ್ಳಬೇಕೆಂದು ಕಿವಿಮಾತು ಹೇಳಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಡಾ. ಸಂತೋಷ್ ಹಾನಗಲ್ 'ತಂತ್ರಜ್ಞಾನದ ಬಳಕೆಯಲ್ಲಿ ಭಾಷೆಯ ಪ್ರಾಮುಖ್ಯತೆ' ಬಗ್ಗೆ ಮಾತನಾಡಿದರು. ಎಸ್‌ಐಸಿಎಂ ಕಾಲೇಜಿನ ಪ್ರಾಂಶುಪಾಲರಾದ ವಿದ್ಯಾ ಶಿವಣ್ಣವರ್, ಜೆ.ಕೆ ಮಂಜುನಾಥ, ಟಿ ತಿಮ್ಮೇಶ್, ಆರ್.ವಿ ಸುಂದರಂ ಮತ್ತಿತರರಿದ್ದರು.



ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಕಾಲೇಜಿನಲ್ಲಿ ನಡೆದ 'ಶಾಸ್ತ್ರೀಯ ಕನ್ನಡ ಸ್ಥಾನಮಾನ ಹಾಗೂ ಕನ್ನಡ ಜಾಗೃತಿ ಕಾರ್ಯಾಗಾರ'ವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ ಉದ್ಘಾಟಿಸಿದರು.

ವಿಜಯ ಕರ್ನಾಟಕ
ಶನಿವಾರ, 24 ಆಗಸ್ಟ್ 2024

# ಗಾಂಧಿ ಕುರಿತ ವಿಚಾರಸಂಕಿರಣ ಇಂದಿನಿಂದ

**ಬೆಂಗಳೂರು:** ಗಾಂಧಿ ಸ್ಮಾರಕ ನಿಧಿ 75ನೇ ವರ್ಷದ ಸಂಸ್ಮರಣೆ ಹಿನ್ನೆಲೆಯಲ್ಲಿ '21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ' ವಿಷಯ ಕುರಿತು ಆ. 24, 25ರಂದು ಎರಡು ದಿನಗಳ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ಗಾಂಧಿ ಭವನದಲ್ಲಿ ನಡೆಯಲಿದೆ.

ಹೊಸದಿಲ್ಲಿಯ ಗಾಂಧಿ ಸ್ಮಾರಕ ನಿಧಿ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿರುವ ಈ ಕಾರ್ಯಕ್ರಮವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಉದ್ಘಾಟಿಸಲಿದ್ದಾರೆ. ಮುಖ್ಯ ಅತಿಥಿಯಾಗಿ ಕಾನೂನು ಸಚಿವ ಎಚ್.ಕೆ. ಪಾಟೀಲ್ ಭಾಗವಹಿಸಲಿದ್ದು, ನವದೆಹಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರ ರಾಹಿ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಲಿದ್ದಾರೆ. ನಂತರ ನಡೆಯುವ ಕಾರ್ಯಕ್ರಮದಲ್ಲಿ ಮಹಾತ್ಮ ಗಾಂಧಿ ಮೊಮ್ಮಗ ತುಷಾರ್ ಗಾಂಧಿ ಮಾತನಾಡಲಿದ್ದು, ಗಾಂಧಿ ಶಾಂತಿ ಸಂಸ್ಥೆಯ ಅಧ್ಯಕ್ಷ ಕುಮಾರ್ ಪ್ರಶಾಂತ್ ಅಧ್ಯಕ್ಷತೆ ವಹಿಸಲಿದ್ದಾರೆ.

2 ದಿನಗಳ ಕಾಲ 'ಗಾಂಧಿ ಸಂಘರ್ಷದ ಪರಿಹಾರ ಮತ್ತು ಶಾಂತಿ ಸ್ಥಾಪನೆ', 'ಸುಸ್ಥಿರ ಮತ್ತು ಇಕ್ವಿಟೇಬಲ್ ಅಭಿವೃದ್ಧಿಗೆ ಗಾಂಧಿ ಮಂತ್ರ', 'ಗಾಂಧಿ-ಪ್ರಜಾಪ್ರಭುತ್ವ ಮತ್ತು ಭಿನ್ನಾಭಿಪ್ರಾಯ', 'ಗಾಂಧಿ ಮೌಲ್ಯಗಳು ಮತ್ತು ತಂತ್ರಜ್ಞಾನದಲ್ಲಿ ಕ್ರಾಂತಿ,' ಸೇರಿದಂತೆ ವಿವಿಧ ವಿಷಯಗಳ ಕುರಿತು ಗೋಷ್ಠಿಗಳು ನಡೆಯಲಿದ್ದು, ದೇಶದ ವಿವಿಧ ಭಾಗಗಳಿಂದ ಭಾಗವಹಿಸಲಿರುವ ಚಿಂತಕರು, ನಿವೃತ್ತ ನ್ಯಾಯಮೂರ್ತಿಗಳು, ಬರಹಗಾರರು, ಲೇಖಕರು ವಿಷಯ ಮಂಡಿಸಲಿದ್ದಾರೆ. ಆ. 25ರಂದು ನಡೆಯುವ ಸಮಾರೋಪ ಸಮಾರಂಭದಲ್ಲಿ ನ್ಯಾ. ಎನ್. ಸಂತೋಷ್ ಹೆಗ್ಡೆ, ಕಾನೂನು ಸಚಿವ ಎಚ್.ಕೆ. ಪಾಟೀಲ್, ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿರಲಿದ್ದಾರೆ.



ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆ ದಿನದ ಅಂಗವಾಗಿ ಗಾಂಧಿಭವನದಲ್ಲಿ ಆಯೋಜಿಸಿದ್ದ 21ನೇ ಶತಮಾನಕ್ಕೆ ಮಹತ್ವಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಸಿಎಂ ಸಿದ್ದರಾಮಯ್ಯ ಉದ್ಘಾಟಿಸಿದರು. ಸಚಿವ ಎಚ್.ಕೆ.ಪಾಟೀಲ್, ಗಾಂಧಿಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರರಾಯಿ, ಕಾರ್ಯಾಧ್ಯಕ್ಷ ವಿಶುಕುಮಾರ್, ವೂಡೆಪಿ ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

## ಧರ್ಮ, ಜಾತಿ ಹೆಸರಲ್ಲಿ

# ಅಸಮಾನತೆ ಹೆಚ್ಚಳ..

ಬೆಂಗಳೂರು,ಆ.24 - ಧರ್ಮ-ಜಾತಿ ಹೆಸರಲ್ಲಿ ಸಮಾಜವನ್ನು ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದು ಸಿಎಂ ಸಿದ್ದರಾಮಯ್ಯ ನುಡಿದರು.

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ...ಪುಟ 2

## ಹೆಚ್ಚಳ..

ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು.

ಜಾತಿ ವ್ಯವಸ್ಥೆ ಕಾರಣದಿಂದ ಬಹು ಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯ್ತು. ವಿದ್ಯಾವಂತರೇ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನು ಕೊಂದರು ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗಾಂಧೀಜಿ ವಿಚಾರಗಳು, ಸಮಾಜಕ್ಕೆ ನೀಡಿದ ಮಾರ್ಗದರ್ಶನಗಳು 20ನೇ ಶತಮನಕ್ಕೆ ಮಾತ್ರ ಸೀಮಿತವಾಗಿಲ್ಲ. ಈಗಿನ ಕಾಲಕ್ಕೂ ಪ್ರಸ್ತುತವಾಗಿವೆ. ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಪ್ರೀತಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು. ಮನುಷ್ಯ ತನ್ನ ನೆಮ್ಮದಿಗಾಗಿ ಬೇರೆ ಗ್ರಹಗಳನ್ನು ಹುಡುಕಿಕೊಂಡು ಹೋಗುವಂತಾಗಬಾರದು ಎನ್ನುವ ಸ್ಟೀಫನ್ ಹಾಕಿಂಗ್ ಅವರ ಮಾತನ್ನು ಪ್ರಸ್ತಾಪಿಸಿ, ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೇ ಬೆಳೆದರೆ ಕುವೆಂಪು ಅವರ ವಿಶ್ವ ಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದು ಹೇಳಿದರು.

ಸಂಜೆವಾಣಿ

ಬೆಂಗಳೂರು | Sanjevani, Bangalore
ಶನಿವಾರ 24 ಆಗಸ್ಟ್ 2024

# ಗಾಂಧಿ ಹತ್ಯೆಗೆ ಬಲಪಂಥೀಯರೇ ಕಾರಣ

**ಬೆಂಗಳೂರು, ಆ. 24-** ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನುಕೊಂದಿದ್ದು ಎಂದು ಮುಖ್ಯಮಂತ್ರಿಸಿದ್ಧರಾಮಯ್ಯ ಅವರು ಹೇಳುವ ಮೂಲಕ ಗಾಂಧಿ ಹತ್ಯೆಗೆ ಬಲಪಂಥೀಯರೇ ಕಾರಣ ಎಂದು ಆಕ್ರೋಶ ಹೊರ ಹಾಕಿದರು.

## ಸಿಎಂ ಆಕ್ರೋಶ

ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಬೆಂಗಳೂರಿನ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನುಉದ್ಘಾಟಿಸಿ ಮಾತನಾಡಿದ ಅವರು, ಧರ್ಮ, ಜಾತಿ ಹೆಸರಿನಲ್ಲಿ ಸಮಾಜವನ್ನು ಪುಟ 7



ನಗರದ ಗಾಂಧಿಭವನದಲ್ಲಿ ಇಂದು ನಡೆದ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಏರ್ಪಡಿಸಿದ್ದ 21ನೇ ಶತಮಾನಕ್ಕೆ ಮಹಾತ್ಮಗಾಂಧೀಜಿ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯರವರು ಉದ್ಘಾಟಿಸಿದರು. ಸಚಿವ ಹೆಚ್. ಕೆ. ಪಾಟೀಲ್, ಅಧ್ಯಕ್ಷ ರಾಮಚಂದ್ರರಾಹಿ, ನಾಡೋಜ ವೂಡೇ ಪಿ. ಕೃಷ್ಣ, ಕಾರ್ಯಾಧ್ಯಕ್ಷ ವಿಶುಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷ ಸಂಜೋಯ್ ಸಿಂಗ್ ಉಪಸ್ಥಿತರಿದ್ದರು.

# ಗಾಂಧಿ ಹತ್ಯೆಗೆ ಬಲಪಂಥೀಯರೇ ಕಾರಣ

ಒಡೆಯುತ್ತಾ ಹೋದಂತೆ ಅಸಮಾನತೆ ಹೆಚ್ಚುತ್ತದೆ ಎಂದರು.

ಜಾತಿವ್ಯವಸ್ಥೆ ಕಾರಣದಿಂದ ಬಹುಜನರು ಶಿಕ್ಷಣದಿಂದ ವಂಚಿತರಾದರು. ಈ ಕಾರಣಕ್ಕೆ ಅಸಮಾನತೆ ಹೆಚ್ಚಾಯಿತು ಎಂದು ಅವರು ಹೇಳಿದರು.

ಪ್ರಸ್ತುತ ವಿದ್ಯಾವಂತರೆ ಹೆಚ್ಚೆಚ್ಚು ಜಾತಿವಾದಿಗಳಾಗುತ್ತಿರುವುದು ದುರಂತ. ಜಾತಿ ಅಸಮಾನತೆಯ ಪೋಷಕರೇ ಮಹಾತ್ಮಗಾಂಧಿಯವರನ್ನುಕೊಂದರು. ಗಾಂಧಿ ಕೊಂದ ಗೋಡ್ಸೆಯನ್ನು ಪೂಜೆ ಮಾಡುತ್ತಾರೆ ಎಂದು ಬಲಪಂಥೀಯರ ವಿರುದ್ಧ ವಾಗ್ದಾಳಿ ನಡೆಸಿದರು.

ಮಹಾತ್ಮಗಾಂಧೀಜಿಯವರು ಇಂದಿಗೂ ಪ್ರಸ್ತುತ. ಗಾಂಧಿಯವರನ್ನು ಮರೆತರೆ ಇಡೀ ಸಮಾಜವನ್ನು ಮರೆತ ಹಾಗೆ, ವಿಶ್ವವನ್ನು ಮರೆತಂತೆ. ಗಾಂಧೀಜಿಯವರ ವಿಚಾರಧಾರೆಯನ್ನು ನಡೆಯುವುದು ಅತಿ ಅವಶ್ಯ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ಗಾಂಧೀಜಿಯವರು ಶಾಂತಿ, ಸತ್ಯ, ನ್ಯಾಯ ಮತ್ತು ಭ್ರಾತೃತ್ವವನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದಿದ್ದಾರೆ. ಇಡೀ ವಿಶ್ವವೇ ಪರಸ್ಪರ ಟೀಕಿಸುವ ಗುಣವನ್ನು ರೂಢಿಸಿಕೊಂಡರೆ ಇಡೀ ಸಮಾಜ ನೆಮ್ಮದಿಯಿಂದ ಇರಬಹುದು ಎಂದರು.

ಮನುಷ್ಯ ಮನುಷ್ಯರ ನಡುವೆ ಸಹಿಷ್ಣುತೆ ರೂಢಿಸಿಕೊಳ್ಳದಿದ್ದರೆ ಬದುಕು ಸರ್ವನಾಶವಾಗುತ್ತದೆ. ಕೋಮು ಭಾವನೆ ಹೀಗೆ ಬೆಳೆದರೆ ಕುವೆಂಪುರವರ ವಿಶ್ವಮಾನವ ಆಶಯ ಈಡೇರುವುದು ಕಷ್ಟವಾಗುತ್ತದೆ ಎಂದರು.

ಪ್ರಕೃತಿ ನಮ್ಮ ಅಗತ್ಯಗಳನ್ನು ಈಡೇರಿಸುತ್ತದೆಯೇ ಹೊರತು ದುರಾಸೆಗಳನ್ನು ಅದು ಪೂರೈಸುವುದಿಲ್ಲ ಎನ್ನುವುದು ಗಾಂಧೀಜಿಯವರ ನಂಬಿಕೆ ಆಗಿತ್ತು. ಕೇರಳದ ವಯನಾಡು ಸೇರಿದಂತೆ ದೇಶದ ನಾನಾ ಕಡೆ ನಡೆಯುತ್ತಿರುವ ಪರಿಸರ ಅವಘಡಗಳಿಗೆ ಮನುಷ್ಯನ ದುರಾಸೆಗಳೇ ಕಾರಣ ಎಂದು ಅವರು ಹೇಳಿದರು.

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾದರೆ ರಾಜ್ಯಕ್ಕೆ ಬರ ಬರುತ್ತದೆ ಎಂದು ಮೌಢ್ಯ ಬಿತ್ತುವ ಕುಟಿಲ ಪ್ರಯತ್ನವನ್ನು ಕೆಲವರು ನಡೆಸಿದರು. ಈಗ ಸಿಕ್ಕಾಪಟ್ಟೆ ಮಳೆ ಬರುತ್ತಿದೆ ಎಂದ ಅವರು, ಶಿಕ್ಷಿತರೆ ಕಂದಾಚಾರ, ಕರ್ಮಸಿದ್ಧಾಂತ, ಮೌಢ್ಯವನ್ನು ಆಚರಿಸುತ್ತಾರೆ. 850 ವರ್ಷಗಳ ಹಿಂದೆಯೇ ಬಸವಾದಿ ಶರಣರು ಕರ್ಮಸಿದ್ಧಾಂತವನ್ನು ಸಾರಾಸಗಟಾಗಿ ತಿರಸ್ಕರಿಸಿದ್ದರು ಎಂದು ಅವರು ತಿಳಿಸಿದರು.

ದೇಶದ ಶೇ. 85 ರಷ್ಟು ಆಸ್ತಿ, ಶೇ. 1 ರಷ್ಟಿರುವ ಶ್ರೀಮಂತರ ಕೈ ಸೇರುತ್ತಿದೆ. ಇದು ಅಪಾಯಕಾರಿ. ಈ ಆರ್ಥಿಕ ಅಸಮಾನತೆ ಹೋಗಲಾಡಿಸಲು ಗಾಂಧಿಯವರು ಹಲವು ವಿಚಾರ ಮಾರ್ಗಗಳನ್ನು ಹಾಕಿಕೊಟ್ಟಿದ್ದಾರೆ. ಅದನ್ನು ಯುವಜನರಿಗೆ ತಲುಪಿಸುವ ಕೆಲಸ ಆಗಬೇಕಿದೆ ಎಂದರು.

ಗಾಂಧೀಜಿಯವರ ರಾಮಸ್ವರಾಜ್ಯ ಕನಸನ್ನು ಈಡೇರಿಸಬೇಕಿದೆ. ಗಾಂಧೀಜಿಯವರ ಆಶಯದಂತೆ ರಾತ್ರಿ 12 ಗಂಟೆಗೂ ನಮ್ಮ ಹೆಣ್ಣು ಮಕ್ಕಳು ನಿರ್ಭಯದಿಂದ ಓಡಾಡುವಂತಾಗಬೇಕಿದೆ ಎಂದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ರಾಮಚಂದ್ರರಾಹಿ, ಸಚಿವರಾದ ಹೆಚ್.ಕೆ. ಪಾಟೀಲ್, ಗಾಂಧಿ ಸ್ಮಾರಕ ನಿಧಿ ಕಾರ್ಯಾಧ್ಯಕ್ಷ ಕೃಷ್ಣಕುಮಾರ್, ನವದೆಹಲಿ ಸ್ಮಾರಕ ನಿಧಿ ಅಧ್ಯಕ್ಷರಾದ ಸಂಜೊಯ್ ಸಿಂಗ್ ಸೇರಿ ಹಲವು ಗಣ್ಯರು ಉಪಸ್ಥಿತರಿದ್ದರು.

ಕಲಾಪ್ರಿಯ 23-08-2024

# ಕನ್ನಡ ನಾಡಿಗೆ ಬದುಕಲು ಬಂದವರು ಮೊದಲು ಕನ್ನಡ ಕಲಿಯಿರಿ: ಪ್ರೊ.ಬಿಳಿಮಲೆ




ಬೆಂಗಳೂರು: ಕನ್ನಡ ನಾಡು ಸಂಪದ್ಭರಿತವಾದದ್ದು, ಈ ಸುಂದರ ನಾಡಿನಲ್ಲಿ ತಮ್ಮ ಜೀವನವನ್ನೂ ಬದುಕನ್ನು ಕಟ್ಟಿಕೊಳ್ಳಲು ಹೊರರಾಜ್ಯಗಳಿಂದ ಬಂದವರು ಇಲ್ಲಿನ ಅನ್ನ, ನೀರು, ಜೀವ, ಜೀವನ ಕಂಡುಕೊಂಡವರು ಮೊದಲು ಕನ್ನಡ ಕಲಿಯಿರಿ, ಓದಿರಿ, ಬರೆಯಿರಿ ನಮ್ಮ ಸಂಸ್ಕೃತಿಯನ್ನು ಅಳವಡಿಸಿಕೊಂಡು ಬದುಕಬೇಕು ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಪುರುಷೋತ್ತಮ ಬಿಳಿಮಲೆ ಅವರು ಅಭಿಪ್ರಾಯಪಟ್ಟರು. ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಶೇಷಾದ್ರಿಪುರಂ ಇನ್ಸಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್ಮೆಂಟ್ ಪದವಿ ಕಾಲೇಜಿನ ಸಹಯೋಗದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದರು. ವ್ಯಾಸ ಮಹರ್ಷಿಗಳು ಬರೆದಿರುವ ಮಹಾ ಭಾರತ ಕಥೆಯು ಭಾರತದ ನೂರಾರು ಭಾಷೆಯಲ್ಲಿ ರಾಜ್ಯದ ಭಾಷೆಯ,ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯವನ್ನು ಅಳವಡಿಸಿಕೊಂಡು ದೇಶದಾದ್ಯಂತ ವಿಭಿನ್ನ, ವೈಚಾರಿಕ, ವೈಜ್ಞಾನಿಕವಾಗಿ ಕಥೆ, ಕಾವ್ಯ, ಕಾದಂಬರಿ, ಯಕ್ಷಗಾನ, ಬುಡಕಟ್ಟು ಜನಾಂಗದವರು ಸೇರಿದಂತೆ ಅನೇಕಾನೇಕ ರೀತಿಗಳಲ್ಲಿ ತಮ್ಮದಾಗಿಸಿಕೊಂಡು ಹೊಸ ಹೊಸ ನಿಟ್ಟಿನಲ್ಲಿ ಲಕ್ಷಾಂತರ ಅಧ್ಯಾಯಗಳು ಸೃಷ್ಟಿಸಿಕೊಂಡು ತಮ್ಮವೇ ಎಂಬ ರೀತಿಯಲ್ಲಿ ರಾಮಾಯಣ, ಮಹಾಭಾರತ ಭಾಗವತ ಕಥೆಗಳು ಹರಳುಗಟ್ಟಿವೆ. ಹಾಗಾಗಿ ನಮ್ಮ ನೆಲದ ಭಾಷೆ ಸಾಹಿತ್ಯ ಸಂಸ್ಕೃತಿಯನ್ನು ಅಳವಡಿಸಿಕೊಂಡು ಜಾಗೃತಗೊಳಿಸಿಕೊಂಡು ನಮ್ಮದು ತಮ್ಮದೆಂದು ಮನಸ್ಸಿಗೆ ಹಚ್ಚಿಕೊಂಡರೆ ಮಾತ್ರ ಈ ಕನ್ನಡ ಭಾಷೆ ಉಳಿಯಲು ಸಾಧ್ಯ ಎಂದು ಪ್ರೊ.ಬಿಳಿಮಲೆಯವರು ತಮ್ಮ ಅನುಭವ ಹಂಚಿಕೊಂಡರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ ಕೃಷ್ಣ ಅವರು ಮಾತನಾಡಿ ಕನ್ನಡ ಕಾರ್ಯ, ಹೋರಾಟ ಕೇವಲ ಒಬ್ಬಿಬ್ಬರಿಂದ ಸಾಧ್ಯವಿಲ್ಲ.ಪ್ರತಿಯೊಬ್ಬರೂ ಟೊಂಕಕಟ್ಟಿ ನಿಲ್ಲಬೇಕು, ಕೈಜೋಡಿಸಿ ಕೊಂಡು ದುಡಿದರೆ ಕನ್ನಡ ಯಾವ ಕಾಲವಾದರೂ ಸದಾ ಅಚ್ಚಳಿಯದೆ ಉಳಿಯುತ್ತದೆ. ಮಹಾತ್ಮ ಗಾಂಧೀಜಿ, ವಿನೋಬಾ ಭಾವೆ, ಕುವೆಂಪು, ಬೇಂದ್ರೆ ಮುಂತಾದವರು ತಮ್ಮ ತಮ್ಮ ನಾಡಿನ ಭಾಷೆಯನ್ನು ಕಲಿತು, ಓದಿ ಬರೆದರು ಆಯಾ ನಾಡಿನ ಭಾಷೆಯಲ್ಲಿ ಶಾಶ್ವತವಾಗಿ ನೆಲೆನಿಂತಿದ್ದಾರೆ. ಆದಾಗಿ ಕನ್ನಡ ಕನ್ನಡತನ ನಮ್ಮ ಹೃದಯದ ಭಾಷೆಯಾಗಿ ಮನಸ್ಸಲ್ಲಿ ಉಳಿಸಿ ಬೆಳೆಸುವ ಕಾರ್ಯ ಎಲ್ಲರೂ ಕೂಡಿ ಮಾಡೋಣ ಎಂದರು. ವೇದಿಕೆಯಲ್ಲಿ ಪ್ರಾಧಿಕಾರದ ಕಾರ್ಯದರ್ಶಿ ಡಾ.ಸಂತೋಷ ಹಾನಗಲ್ ಅವರು ಪ್ರಾಧಿಕಾರವು ಕರ್ನಾಟಕದಾದ್ಯಂತ ಕನ್ನಡ ಭಾಷೆ, ಕನ್ನಡಿಗರ ಅಭಿವೃದ್ಧಿಗಾಗಿ ಕೊಂಕಣಿ ಬದ್ಧವಾಗಿ ದುಡಿಯುತ್ತಿದೆ. ಸದಾ ಸಲಹೆ ಸಹಕಾರ ತಮ್ಮಿಂದ ಬಯಸುತ್ತದೆ ಎಂದರು. ಪದವಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ವಿದ್ಯಾಶಿವಣ್ಣವರ್, ಬಿಬಿಜಿಎಸ್. ಟ್ರಸ್ಟ್ ನ ಅಧ್ಯಕ್ಷರಾದ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ), ಪ್ರಾಧಿಕಾರದ ಸಹಸದಸ್ಯರಾದ ಟಿ.ತಿಮ್ಮೇಶ್, ಪಿಯು ಕಾಲೇಜಿನ ಪ್ರಾಂಶುಪಾಲರಾದ ಪ್ರೊ ಜಿ.ಕೆ.ಮಂಜುನಾಥ್, ಭಾಷಾ ತಜ್ಞರಾದ ಡಾ. ಆರ್.ವಿ.ಎಸ್.ಸುಂದರಂ, ಎಸ್.ಐ.ಸಿ.ಎಂ. ಕನ್ನಡ ಪ್ರಾಧ್ಯಾಪಕರಾದ ಡಾ.ಎಸ್.ಪೂರ್ಣಿಮಾ, ಪ್ರೊ. ಲಕ್ಷ್ಮೀನಾರಾಯಣ ಮುಂತಾದವರಿದ್ದರು.

ಆರಂಭ

ಶುಕ್ರವಾರ ಆಗಸ್ಟ್ 23, 2024

# ಬದುಕು ಅರಸಿ ಬಂದವರು ಕನ್ನಡ ಕಲಿಯಿರಿ : ಪ್ರೊ.ಬಿಳಿಮಲೆ



ಬೆಂಗಳೂರು : ಕನ್ನಡ ನಾಡು ಸಂಪದ್ಭರಿತವಾದದ್ದು . ಈ ಸುಂದರ ನಾಡಿನಲ್ಲಿ ತಮ್ಮ ಜೀವನವನ್ನೋ, ಬದುಕನ್ನು ಕಟ್ಟಿಕೊಳ್ಳಲು ಹೊರರಾಜ್ಯಗಳಿಂದ ಬಂದವರು ಇಲ್ಲಿನ ಅನ್ನ, ನೀರು, ಜೀವ, ಜೀವನ ಕಂಡುಕೊಂಡವರು ಮೊದಲು ಕನ್ನಡ ಕಲಿಯಿರಿ. ಓದಿರಿ, ಬರೆಯಿರಿ ನಮ್ಮ ಸಂಸ್ಕೃತಿಯನ್ನು ಅಳವಡಿಸಿಕೊಂಡು ಬದುಕಬೇಕು ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಪುರುಷೋತ್ತಮ ಬಿಳಿಮಲೆ ಅವರು ಅಭಿಪ್ರಾಯಪಟ್ಟರು.

ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಶೇಷಾದ್ರಿಪುರಂ ಇನ್ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್ಮೆಂಟ್ ಪದವಿ ಕಾಲೇಜಿನ ಸಹಯೋಗದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ರಾಷ್ಟ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದರು.

ವ್ಯಾಸ ಮಹರ್ಷಿಗಳು ಬರೆದಿರುವ ಮಹಾಭಾರತ ಕಥೆಯು ಭಾರತದ ನೂರಾರು ಭಾಷೆಯಲ್ಲಿ ರಾಜ್ಯದ ಭಾಷೆಯ,ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯವನ್ನು ಅಳವಡಿಸಿಕೊಂಡು ದೇಶದಾದ್ಯಂತ ವಿಭಿನ್ನ, ವೈವಿಧ್ಯ ವೈವಿಧ್ಯಮಯವಾಗಿ ಕಥೆ, ಕಾವ್ಯ, ನಾಟಕ, ಯಕ್ಷಗಾನ, ಬಯಲಾಟ್ಟ ನಾಟಕದವರು ಸೇರಿದಂತೆ ಅನೇಕಾನೇಕ ರೀತಿಗಳಲ್ಲಿ ತಮ್ಮದಾಗಿಸಿಕೊಂಡು ಹೊಸ ಹೊಸ ನಿಟ್ಟಿನಲ್ಲಿ ಲಕ್ಷಾಂತರ ಅಧ್ಯಾಯಗಳು ಸೃಷ್ಟಿಸಿಕೊಂಡು ತಮ್ಮವೇ ಎಂಬ ರೀತಿಯಲ್ಲಿ ರಾಮಾಯಣ, ಮಹಾಭಾರತ ಭಾಗವತ ಕಥೆಗಳು ಹರಳುಗಟ್ಟಿವೆ. ಹಾಗಾಗಿ ನಮ್ಮ ನೆಲದ ಭಾಷೆ ಸಾಹಿತ್ಯ ಸಂಸ್ಕೃತಿಯನ್ನು ಅಳವಡಿಸಿಕೊಂಡು ಜಾಗೃತಗೊಳಿಸಿಕೊಂಡು ನಮ್ಮದು ತಮ್ಮದೆಂದು ಮನಸ್ಸಿಗೆ ಹಚ್ಚಿಕೊಂಡರೆ ಮಾತ್ರ ಈ ಕನ್ನಡ ಭಾಷೆ ಉಳಿಯಲು ಸಾಧ್ಯ ಎಂದು ಪ್ರೊ.ಬಿಳಿಮಲೆಯವರು ತಮ್ಮ ಅನುಭವ ಹಂಚಿಕೊಂಡರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ ಕೃಷ್ಣ ಅವರು ಮಾತನಾಡಿ ಕನ್ನಡ ಕಾರ್ಯ . ಹೋರಾಟ ಕೇವಲ ಒಬ್ಬಿಬ್ಬರಿಂದ ಸಾಧ್ಯವಿಲ್ಲ.ಪ್ರತಿಯೊಬ್ಬರೂ ಟೊಂಕಕಟ್ಟಿ ನಿಲ್ಲಬೇಕು, ಕೈಜೋಡಿಸಿ ಕೊಂಡು ದುಡಿದರೆ ಕನ್ನಡ ಯಾವ ಕಾಲವಾದರೂ ಸದಾ ಅಚ್ಚಳಿಯದೆ ಉಳಿಯುತ್ತದೆ. ಮಹಾತ್ಮ ಗಾಂಧೀಜಿ, ವಿನೋಬಾ ಭಾವೆ . ಕುವೆಂಪು . ಬೇಂದ್ರೆ ಮುಂತಾದವರು ತಮ್ಮ ತಮ್ಮ ನಾಡಿನ ಭಾಷೆಯನ್ನು ಕಲಿತು, ಓದಿ ಬರೆದರು ಆಯಾ ನಾಡಿನ ಭಾಷೆಯಲ್ಲಿ ಶಾಶ್ವತವಾಗಿ ನೆಲೆನಿಂತಿದ್ದಾರೆ. ಆದಾಗಿ ಕನ್ನಡ ಕನ್ನಡತನ ನಮ್ಮ ಹೃದಯದ ಭಾಷೆಯಾಗಿ ಮನಸ್ಸಲ್ಲಿ ಉಳಿಸಿ ಬೆಳೆಸುವ ಕಾರ್ಯ ಎಲ್ಲರೂ ಕೂಡಿ ಮಾಡೋಣ ಎಂದರು.

ವೇದಿಕೆಯಲ್ಲಿ ಪ್ರಾಧಿಕಾರದ ಕಾರ್ಯದರ್ಶಿ ಡಾ.ಸಂತೋಷ ಹಾನಗಲ್ ಅವರು ಪ್ರಾಧಿಕಾರವು ಕರ್ನಾಟಕದಾದ್ಯಂತ ಕನ್ನಡ ಭಾಷೆ, ಕನ್ನಡಿಗರ ಅಭಿವೃದ್ಧಿಗಾಗಿ ಕೊಂಕಣಿ ಬದ್ಧವಾಗಿ ದುಡಿಯುತ್ತಿದೆ.. ಸದಾ ಸಲಹೆ ಸಹಕಾರ ತಮ್ಮಿಂದ ಬಯಸುತ್ತದೆ ಎಂದರು. ಪದವಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ವಿದ್ಯಾಶಿವಣ್ಣವರ್, ಬಿಬಿಜಿಎಸ್. ಟ್ರಸ್ಟ್‌ನ ಅಧ್ಯಕ್ಷರಾದ ಡಾ.ಎಸ್. ರಾಮಲಿಂಗೇಶ್ವರ (ಸಿಸಿರಾ). ಪ್ರಾಧಿಕಾರದ ಸಹಸದಸ್ಯರಾದ ಟಿ.ತಿಮ್ಮೇಶ್ . ಪಿಯು ಕಾಲೇಜಿನ ಪ್ರಾಂಶುಪಾಲರಾದ ಪ್ರೊ ಜಿ.ಕೆ. ಮಂಜುನಾಥ್. ಭಾಷಾ ತಜ್ಞರಾದ ಡಾ. ಆರ್.ವಿ.ಎಸ್.ಸುಂದರಂ . ಎಸ್.ಐ.ಸಿ.ಎಂ. ಕನ್ನಡ ಪ್ರಾಧ್ಯಾಪಕರಾದ ಡಾ.ಎಸ್.ಪೂರ್ಣಿಮಾ. ಪ್ರೊ ಲಕ್ಷ್ಮೀನಾರಾಯಣ ಮುಂತಾದವರಿದ್ದರು.

ವಿಜಯ ಕರ್ನಾಟಕ ನಮ್ಮ ಬೆಂಗಳೂರು ಶುಕ್ರವಾರ,23 ಆಗಸ್ಟ್ 2024

# ಕರುನಾಡಲ್ಲಿ ಬದುಕಲು ಬಂದವರು ಕನ್ನಡ ಕಲಿಯಲಿ



■ **ವಿಕ ಸುದ್ದಿಲೋಕ** ಬೆಂಗಳೂರು

'ಸಂಪದ್ಭರಿತವಾಗಿರುವ ಕರುನಾಡಿನಲ್ಲಿ ಬದುಕು ಕಟ್ಟಿಕೊಳ್ಳಲು ಹೊರ ರಾಜ್ಯಗಳಿಂದ ಬಂದವರು ಮೊದಲು ಕನ್ನಡ ಕಲಿತು ನಮ್ಮ ಸಂಸ್ಕೃತಿ ಅನುಸರಿಸುವ ಮೂಲಕ ಬದುಕು ಸಾಗಿಸಬೇಕು,' ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ ಅಭಿಪ್ರಾಯಪಟ್ಟರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆಂಡ್ ಮ್ಯಾನೇಜ್‌ಮೆಂಟ್ ಪದವಿ ಕಾಲೇಜು ಸಹಯೋಗದಲ್ಲಿ ಗುರುವಾರ ಆಯೋಜಿಸಿದ್ದ ರಾಜ್ಯ ಮಟ್ಟದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ ಕಾರ್ಯಾಗಾರ ಉದ್ಘಾಟಿಸಿ ಅವರು ಮಾತನಾಡಿದರು.

''ನಮ್ಮ ನೆಲದ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಅಳವಡಿಸಿಕೊಂಡು ಜಾಗೃತಗೊಳ್ಳುವ ಮೂಲಕ ಇದು ನಮ್ಮ ರಾಜ್ಯ- ಭಾಷೆ ತಮ್ಮದೆಂದು ಮನಸ್ಸಿಗೆ ಹಚ್ಚಿಕೊಂಡರೆ ಮಾತ್ರ ಕನ್ನಡ ಭಾಷೆ ಉಳಿಯಲು ಸಾಧ್ಯ,'' ಎಂದು ಹೇಳಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ''ಹೋರಾಟ ಕೇವಲ ಒಬ್ಬಿಬ್ಬರಿಂದ ಸಾಧ್ಯವಿಲ್ಲ, ಪ್ರತಿಯೊಬ್ಬರೂ ಟೊಂಕಕಟ್ಟಿ ನಿಲ್ಲಬೇಕು. ಕೈಜೋಡಿಸಿ ದುಡಿದರೆ ಕನ್ನಡ ಯಾವ ಕಾಲದಲ್ಲಾದರೂ ಸದಾ ಅಚ್ಚಳಿಯದೆ ಉಳಿಯುತ್ತದೆ,'' ಎಂದರು.

ಪ್ರಾಧಿಕಾರದ ಕಾರ್ಯದರ್ಶಿ ಡಾ. ಸಂತೋಷ ಹಾನಗಲ್, ಪ್ರೊ. ವಿದ್ಯಾಶಿವಣ್ಣವರ್, ಡಾ.ಎಸ್. ರಾಮಲಿಂಗೇಶ್ವರ್, ಟಿ.ತಿಮ್ಮೇಶ್, ಪ್ರೊ ಜಿ.ಕೆ. ಮಂಜುನಾಥ್, ಡಾ. ಆರ್.ವಿ.ಎಸ್. ಸುಂದರಂ, ಡಾ. ಎಸ್.ಪೂರ್ಣಿಮಾ, ಪ್ರೊ. ಲಕ್ಷ್ಮೀ ನಾರಾಯಣ ಉಪಸ್ಥಿತರಿದ್ದರು.

ಕನ್ನಡಪ್ರಭ ಶುಕ್ರವಾರ 23.08.2024

# ‘ಕನ್ನಡ ನಾಡಿಗೆ ಬಂದವರು ಕನ್ನಡ ಕಲೀಬೇಕು’

## ನೆರೆರಾಜ್ಯದಿಂದ ಬಂದವರು ಕರ್ನಾಟಕದ ಸಂಸ್ಕೃತಿ ಅಳವಡಿಸಿಕೊಳ್ಳಿ: ಬಿಳಿಮಲೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಹೊರ ರಾಜ್ಯಗಳಿಂದ ಕರ್ನಾಟಕಕ್ಕೆ ಬಂದರು ನಮ್ಮ ನೆಲದ ಭಾಷೆ, ಸಂಸ್ಕೃತಿ ಕಲಿತು ಗೌರವ ಕೊಡುವುದನ್ನು ಮೈಗೂಡಿಸಿಕೊಳ್ಳಬೇಕು ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಪುರುಷೋತ್ತಮ ಬಿಳಿಮಲೆ ಹೇಳಿದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ರಾಜ್ಯ ಮಟ್ಟದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ ಕಾರ್ಯಾಗಾರವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಪುರುಷೋತ್ತಮ ಬಿಳಿಮಲೆ ಉದ್ಘಾಟಿಸಿದರು.

ಗುರುವಾರ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಪದವಿ ಕಾಲೇಜು ಸಹಯೋಗದಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ ‘ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ’ ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದರು.

ಕನ್ನಡ ನಾಡಿನಲ್ಲಿ ಬದುಕು ಕಟ್ಟಿಕೊಳ್ಳಲು ಬಂದವರು ಕನ್ನಡ ಕಲಿತುಕೊಳ್ಳಲೇಬೇಕು. ಇಲ್ಲಿನ ಅನ್ನ, ನೀರು, ಜೀವ, ಜೀವನ ಕಂಡುಕೊಂಡವರು ಮೊದಲು ಕನ್ನಡ ಕಲಿಯಿರಿ, ಓದಿರಿ, ಬರೆಯಿರಿ. ನಮ್ಮ ಸಂಸ್ಕೃತಿಯನ್ನು ಅಳವಡಿಕೊಂಡು ರಾಜ್ಯದ ಅಭಿವೃದ್ಧಿಯಲ್ಲಿ ಕೈಜೋಡಿಸಿರಿ ಎಂದು ಸಲಹೆ ನೀಡಿದರು.

ಮಹಾಭಾರತ, ರಾಮಾಯಣ, ಭಾಗವತ ಕಥೆಗಳು ದೇಶದ ನೂರಾರು ಭಾಷೆಗಳಿಗೆ ಅನುವಾದಗೊಂಡಿವೆ. ಸ್ಥಳೀಯ ಭಾಷೆ, ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಹೊಸ ಪ್ರಯೋಗಗಳಾಗಿ, ಲಕ್ಷಾಂತರ ಅಧ್ಯಾಯಗಳನ್ನು ಸೃಷ್ಟಿಸಿಕೊಂಡು ಹರಳುಗಟ್ಟಿವೆ. ಅಂತೆಯೇ ಕನ್ನಡವನ್ನು ತಮ್ಮದೆಂದಾಗ ಮಾತ್ರ ಕನ್ನಡ ಬೆಳೆದು ಅಭಿವೃದ್ಧಿ ಹೊಂದುತ್ತದೆ ಎಂದು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಕನ್ನಡ ಕಾರ್ಯ, ಹೋರಾಟ ಕೇವಲ ಒಬ್ಬಿಬ್ಬರಿಂದ ಸಾಧ್ಯವಿಲ್ಲ. ಪ್ರತಿಯೊಬ್ಬರೂ ಟೊಂಕಕಟ್ಟಿ ನಿಲ್ಲಬೇಕು. ಆಗ ಮಾತ್ರ ಕನ್ನಡ ಅಭಿವೃದ್ಧಿ ಸಾಧ್ಯ ಎಂದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಡಾ.ಸಂತೋಷ ಹಾನಗಲ್, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ವಿದ್ಯಾ ಶಿವಣ್ಣವರ್, ಬಿಬಿಜಿಎಸ್ ಟ್ರಸ್ಟ್ ಅಧ್ಯಕ್ಷ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ), ಪ್ರಾಧಿಕಾರದ ಸಹ ಸದಸ್ಯರಾದ ಟಿ.ತಿಮ್ಮೇಶ್, ಪ್ರಾಂಶುಪಾಲ ಪ್ರೊ.ಜಿ.ಕೆ.ಮಂಜುನಾಥ್, ಭಾಷಾ ತಜ್ಞ ಡಾ. ಆರ್.ವಿ.ಎಸ್.ಸುಂದರಂ, ಎಸ್ಐಸಿಎಂ ಕನ್ನಡ ಪ್ರಾಧ್ಯಾಪಕಿ ಡಾ.ಎಸ್.ಪೂರ್ಣಿಮಾ, ಪ್ರೊ.ಲಕ್ಷ್ಮೀನಾರಾಯಣ ಇದ್ದರು.

ಉದಯವಾಣಿ ಶುಕ್ರವಾರ, ಆಗಸ್ಟ್ 23, 2024

# ‘ಭಾರತ ಅನೇಕ ಭಾಷೆಗಳ ರಂಗೋಲಿ’

## ‘ಶಾಸ್ತ್ರೀಯ ಕನ್ನಡ ಸ್ಥಾನಮಾನ’ ಕುರಿತ ವಿಚಾರ ಸಂಕಿರಣದಲ್ಲಿ ಬಿಳಿಮಲೆ



**‘ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ’ ಕುರಿತ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪ್ರೊ.ಪುರುಷೋತ್ತಮ ಬಿಳಿಮಲೆ ಉದ್ಘಾಟಿಸಿದರು.**

■ **ಉದಯವಾಣಿ ಸಮಾಚಾರ**

**ಬೆಂಗಳೂರು:** ಭಾರತ ಅನೇಕ ಭಾಷೆಗಳ ರಂಗೋಲಿ. ಆ ರಂಗೋಲಿಯೊಳಗಿನ ಎಲ್ಲಾ ಬಣ್ಣಗಳು ಹಾಗೆಯೇ ಉಳಿಯುವಂತೆ ನೋಡಿಕೊಳ್ಳಬೇಕಾದ ದೊಡ್ಡ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ.ಪುರುಷೋತ್ತಮ ಬಿಳಿಮಲೆ ಹೇಳಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಗುರುವಾರ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಪದವಿ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ‘ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ’ ಕುರಿತ ರಾಜ್ಯಮಟ್ಟದ ವಿಚಾರ ಸಂಕಿರಣ ಉದ್ಘಾಟಿಸಿ ಅವರು ಮಾತನಾಡಿದರು. ಭಾರತ ಹಲವು ಭಾಷೆಗಳ ತವರೂರು ಆಗಿದೆ. ಆ ಎಲ್ಲ ಭಾಷೆಗಳು ನಶಿಸಿ ಹೋಗದ ರೀತಿಯಲ್ಲಿ ಕಾಪಿಟ್ಟುಕೊಳ್ಳಬೇಕಾಗಿದೆ ಎಂದು ತಿಳಿಸಿದರು.

ಕನ್ನಡ ನನ್ನ ತಾಯಿ ಭಾಷೆ, ಅದಕ್ಕೆ ಮೊದಲ ಆದ್ಯತೆಯನ್ನು ನಾವು ನೀಡಬೇಕು. ಕರ್ನಾಟಕದಲ್ಲಿ ಕನ್ನಡ ಫಲಕಗಳು ಕಾಣಲೇಬೇಕು. ಕನ್ನಡ ಭಾಷೆಯನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಪ್ರಾಧಿಕಾರ ಎಲ್ಲರೊಟ್ಟಿಗೂ ಸೇರಿ ಕಾರ್ಯನಿರ್ವಹಿಸಲಿದೆ ಎಂದು ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ ಕೃಷ್ಣ ಮಾತನಾಡಿ, ಕನ್ನಡ ಉಳಿಸಿ ಬೆಳೆಸುವ ಕಾರ್ಯ ಕೇವಲ ಒಬ್ಬಿಬ್ಬರಿಂದ ಸಾಧ್ಯವಿಲ್ಲ. ಪ್ರತಿಯೊಬ್ಬರೂ ಕನ್ನಡ ಕೈಂಕರ್ಯದಲ್ಲಿ ಕೈ ಜೋಡಿಸಬೇಕು. ಗಾಂಧೀಜಿ, ವಿನೋಬಾ ಭಾವೆ, ಕುವೆಂಪು, ಬೇಂದ್ರೆ ಸೇರಿದಂತೆ ಹಲವು ಸಾಧಕರು ಮಾತೃ ಭಾಷೆಯಲ್ಲೇ ಕಲಿತು ದೊಡ್ಡ ಸಾಧನೆ ಮಾಡಿದ್ದಾರೆ. ಆ ಹಿನ್ನೆಲೆಯಲ್ಲಿ ಕನ್ನಡ ನಮ್ಮ ಹೃದಯದ ಭಾಷೆಯಾಗಿ ಮನಸ್ಸಿನಲ್ಲಿ ಉಳಿಸಿ ಬೆಳೆಸುವ ಕಾರ್ಯ ಎಲ್ಲರೂ ಮಾಡೋಣ ಎಂದರು.

ಈ ವೇಳೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಸಂತೋಷ ಹಾನಗಲ್, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ವಿದ್ಯಾಶಿವಣ್ಣವರ್, ಬಿಬಿಜಿಎಸ್ ಟ್ರಸ್ಟ್ ಅಧ್ಯಕ್ಷ ಎಸ್. ರಾಮಲಿಂಗೇಶ್ವರ, ಪಿಯು ಕಾಲೇಜಿನ ಪ್ರಾಂಶುಪಾಲ ಪ್ರೊ ಜಿ.ಕೆ.ಮಂಜುನಾಥ್, ಭಾಷಾ ತಜ್ಞರಾದ ಡಾ. ಆರ್ .ವಿ.ಎಸ್.ಸುಂದರಂ ಇತರರಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ

Aug 23, 2024

# ಭಾರತ ಅನೇಕ ಭಾಷೆಗಳ ರಂಗೋಲಿ: ಬಿಳಿಮಲೆ



> ಭಾಷೆಯ ಶ್ರೀಮಂತಿಕೆಯನ್ನು ಅರ್ಥಮಾಡಿಕೊಳ್ಳಬೇಕಾದ ಕಾರ್ಯಕ್ರಮಗಳಿಗೆ ಪ್ರಾಧಿಕಾರ ಸಹಕಾರ ನೀಡುತ್ತದೆ. ನಮ್ಮ ದೇಶದ ಸಾಹಿತ್ಯ, ಭಾಷೆಯನ್ನು ಪ್ರೀತಿಸಬೇಕಾದರೆ ಅದರ ಬಗ್ಗೆ ತಿಳುವಳಿಕೆ ಬೇಕು. ಇಲ್ಲವಾದರೆ ದ್ವೇಷ ಬರುತ್ತದೆ. ದ್ವೇಷಿಸುವುದು ಸುಲಭ, ಆದರೆ ಪ್ರೀತಿಸುವುದು ಸುಲಭವಲ್ಲ
>
> -ಪ್ರೊ.ಪುರುಷೋತ್ತಮ ಬಿಳಿಮಲೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ

ಬೆಂಗಳೂರು, ಆ.22: ರಂಗೋಲಿಯಲ್ಲಿ ಅನೇಕ ಬಣ್ಣಗಳು ಇರುವಂತೆ ಭಾರತ ಅನೇಕ ಭಾಷೆಗಳ ರಂಗೋಲಿಯಾಗಿದೆ. ರಂಗೋಲಿಗೆ ಹೆಚ್ಚು ಬಣ್ಣವಿದ್ದರೆ ಸುಂದರ ಕಾಣಿಸುತ್ತದೆ. ಹಾಗೇ ಭಾರತದಲ್ಲಿ ಹೆಚ್ಚು ಭಾಷೆಗಳಿದ್ದರೆ ಸುಂದರವಾಗಿರುತ್ತದೆ. ಅವುಗಳನ್ನು ಸಂರಕ್ಷಿಸುವ ಕೆಲಸವನ್ನು ನಾವೆಲ್ಲರೂ ಮಾಡಬೇಕಿದೆ ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪ್ರೊ.ಪುರುಷೋತ್ತಮ ಬಿಳಿಮಲೆ ಅಭಿಪ್ರಾಯಪಟ್ಟಿದ್ದಾರೆ.

ಗುರುವಾರ ನಗರದ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್, ಮ್ಯಾನೇಜ್‌ಮೆಂಟ್‌ನಲ್ಲಿ ಬುದ್ಧ-ಬಸವ-ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದೊಂದಿಗೆ ಆಯೋಜಿಸಿದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಹಾಗೂ ಕನ್ನಡ ಜಾಗೃತಿ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದ ಅವರು, ಕನ್ನಡ ಭಾಷೆಗೆ ಅಸಾಮಾನ್ಯ ಮತ್ತು ಶ್ರೀಮಂತ ಪರಂಪರೆ ಇದೆ ಎಂದರು.

ಯಾವುದೇ ಭಾಷೆಯನ್ನು ಸಂರಕ್ಷಿಸಬೇಕಾದರೆ, ಆಯಾ ಭಾಷೆಯ ಶ್ರೀಮಂತಿಕೆಯ ಬಗ್ಗೆ ನಾವು ತಿಳಿದುಕೊಳ್ಳಬೇಕು. ಅದರ ಜತೆಗೆ ಪಕ್ಕದ ಭಾಷೆಗಳ ಬಗ್ಗೆಯೂ ತಿಳಿದುಕೊಳ್ಳಬೇಕು. ಕನ್ನಡ ನಮ್ಮ ತಾಯಿ ನುಡಿಯಾಗಿರುವುದರಿಂದ ನಮ್ಮ ರಾಜ್ಯದಲ್ಲಿ ಪ್ರಾಧಾನ್ಯತೆ ದೊರೆಯಬೇಕು ಎಂದು ಹೇಳಿದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಡಾ.ಸಂತೋಷ ಹಾನಗಲ್ ಮಾತನಾಡಿ, ವಿದ್ಯಾರ್ಥಿಗಳು ಈ ಕಾರ್ಯಾಗಾರದ ಪ್ರಯೋಜನವನ್ನು ಪಡೆದುಕೊಳ್ಳಬೇಕು. ಎಲ್ಲ ಕವಿಗಳನ್ನು ನೋಡಲು ಸಾಧ್ಯವಾಗಿಲ್ಲ. ಅವರ ಸಾಹಿತ್ಯದ ಮೂಲಕ ಅವರನ್ನು ನೋಡಬೇಕು. ವಿದ್ಯಾರ್ಥಿ ಜೀವನವನ್ನು ಸಂಪೂರ್ಣವಾಗಿ ನಾಡು, ನುಡಿ, ಸಂಸ್ಕೃತಿಗೆ ಮುಡಿಪಾಗಿಡಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಎಸ್ಐಸಿಎಂ ಪ್ರಾಂಶುಪಾಲೆ ಪ್ರೊ.ವಿದ್ಯಾ ಶಿವಣ್ಣವರ್, ಬುದ್ಧ -ಬಸವ -ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಅಧ್ಯಕ್ಷ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ), ಗಾಯಕಿ ಭಾಗ್ಯಶ್ರೀಗೌಡ, ಕನ್ನಡ ವಿಭಾಗದ ಮುಖ್ಯಸ್ಥೆ ಡಾ.ಎಸ್. ಪೂರ್ಣಿಮಾ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ Thursday 22 August 2024



…ಸಿದ್ಧ, ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಶೇಷಾದ್ರಿಪುರಂ ಇನ್ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್‌ಮೆಂಟ್ ಪದವಿ ಕಾಲೇಜು ವತಿಯಿಂದ ಏರ್ಪಡಿಸಿದ್ದ ರಾಷ್ಟ್ರಮಟ್ಟದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಮತ್ತು ಕನ್ನಡ ಜಾಗೃತಿ ಸಮಾರಂಭವನ್ನು ಪ್ರಾಧಿಕಾರದ ಅಧ್ಯಕ್ಷ ಡಾ. ಪುರುಷೋತ್ತಮ ಬಿಳಿಮಲೆ ಉದ್ಘಾಟಿಸಿದರು. ನಾಡೋಜ ಡಾ. ವೂಡೇ ಪಿ. ಕೃಷ್ಣ, ಟಿ. ತಿಮ್ಮೇಶ್, ಭಾಷಾ ತಜ್ಞರಾದ ಡಾ. ಆರ್.ವಿ.ಎಸ್. ಸುಂದರಂ, ಪ್ರೊ. ವಿದ್ಯಾಶಿವಣ್ಣವರ್, ಡಾ. ರಾಮಲಿಂಗೇಶ್ವರ, ಡಾ. ಎಸ್. ಪೂರ್ಣಿಮಾ, ಪ್ರೊ. ಜಿ.ಕೆ. ಮಂಜುನಾಥ್ ಇದ್ದಾರೆ.

ಈ ಸಂಜೆ

Aug 22, 2024



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದಲ್ಲಿ ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಶಾಸ್ತ್ರೀಯ ಕನ್ನಡ ಸ್ಥಾನಮಾನ ಹಾಗೂ ಕನ್ನಡ ಜಾಗೃತಿ ಕಾರ್ಯಾಗಾರದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಪುರುಷೋತ್ತಮ್ ಬಿಳಿಮಲೆ ಅವರನ್ನು ಸನ್ಮಾನಿಸಲಾಯಿತು. ನಾಡೋಜ ಡಾ.ವೂ.ಡೇ.ಪಿ.ಕೃಷ್ಣ, ಪ್ರೊ.ವಿದ್ಯಾ ಶಿವಣ್ಣವರ್, ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ), ಡಾ.ಅರವಿಂದ್ ಸುಂದರಂ ಮತ್ತಿತರರು ಹಾಜರಿದ್ದರು.

ಬುಧವಾರ 21 ಆಗಸ್ಟ್ 2024
21 AUGUST 2024

# ಮೌಲ್ಯಯುತ ಶಿಕ್ಷಣವೇ ನಮ್ಮ ಸಂಸ್ಥೆಯ ಗುರಿ



ತುಮಕೂರು ನಗರದ ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ವಿದ್ಯಾಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಡಾ.ಗೀತಾ ರಾಮಾನುಜಮ್, ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜು ಇದ್ದರು.

ತುಮಕೂರು: ಧರ್ಮಸ್ಥಳದ ಡಾ.ಡಿ.ವಿರೇಂದ್ರ ಹೆಗ್ಗಡೆ, ಪ್ರಕಾಶ್ ಪಡುಕೋಣೆ, ಗೌತಮಾನಂದ ಜೀತಂಥ ಮಹನೀಯರೆಲ್ಲ ಶೇಷಾದ್ರಿಪುರಂ ವಿದ್ಯಾಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡಿದ್ದಾರೆ. ಮೌಲ್ಯಯುತ ಶಿಕ್ಷಣ ನೀಡುವುದೇ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಗುರಿ ಎಂದು ಸಂಸ್ಥೆಯ ಗೌರವ ಕಾರ್ಯದರ್ಶಿ ನಾಡೋಜ ವೂಡೇ ಪಿ.ಕೃಷ್ಣ ಹೇಳಿದರು.

ನಗರದ ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ಮಂಗಳವಾರ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ ಶೇ.90ಕ್ಕಿಂತ ಹೆಚ್ಚು ಅಂಕಗಳಿಸಿ ಪಿಯು ವ್ಯಾಸಾಂಗಕ್ಕೆ ದಾಖಲಾಗಿದ್ದ ಕಾಲೇಜಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ವಿತರಿಸಿ ಮಾತನಾಡಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಹಳೇ ವಿದ್ಯಾರ್ಥಿಗಳು ವಿಶ್ವದ ಅನೇಕ ದೇಶಗಳಲ್ಲಿ ಉನ್ನತ ಹುದ್ದೆ ಹಾಗೂ ಸ್ಥಾನ ಅಲಂಕರಿಸಿದ್ದಾರೆ. ನಮ್ಮ ಸಂಸ್ಥೆ ಉತ್ತಮ ಮತ್ತು ಮೌಲ್ಯಯುತ ಶಿಕ್ಷಣ ನೀಡುತ್ತಾ ಬಂದಿದೆ. ಜ್ಞಾನಾರ್ಜನೆಯೇ ನಿಮ್ಮ ಗುರಿಯಾಗಬೇಕು. ಸಮಯದ ಮಹತ್ವವನ್ನು ಅರಿಯಬೇಕು. ತಂದೆ-ತಾಯಿ ಹಾಗೂ ಶಿಕ್ಷಕರನ್ನು ಗೌರವಿಸಬೇಕು ಎಂದರು.

ಡಾ.ಗೀತಾ ರಾಮಾನುಜಮ್ ಮಾತನಾಡಿ, ಯುವ ಮನಸ್ಸುಗಳನ್ನು ಭೇಟಿಯಾಗಲು ನಾನಿಲ್ಲಿ ಬಂದಿದ್ದೇನೆ. ಮುಂದಿನ ದಿನಗಳಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯಿಂದ ವೈದ್ಯಕೀಯ ಕಾಲೇಜನ್ನು ತೆರೆಯಯುವಂತೆ ಸಲಹೆ ನೀಡಿದರು. ದ್ವಿತೀಯ ಪಿಯುಸಿಯಲ್ಲಿ ರ್‍ಯಾಂಕ್ ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು. ಟ್ರಸ್ಟಿ ಕೆ.ಕೃಷ್ಣಸ್ವಾಮಿ, ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲ ಜಿ.ಟಿ.ಜಗದೀಶ ಬಿ.ವಿ.ಬಸವರಾಜು ಉಪಸ್ಥಿತರಿದ್ದರು.

ಪ್ರಜಾ ಪ್ರಗತಿ

### ವಿದ್ಯಾರ್ಥಿವೇತನ ವಿತರಿಸಿ ನಾಡೋಜ ಡಾ.ವೂಡೇ ಪಿ ಕೃಷ್ಣ ಅಭಿಪ್ರಾಯ

# ಮೌಲ್ಯಯುತ ಶಿಕ್ಷಣ ನಮ್ಮ ಗುರಿ



● ಪ್ರಜಾಪ್ರಗತಿ.ಕಾಂ

ತುಮಕೂರು: ಧರ್ಮಸ್ಥಳದ ಡಾ ವಿರೇಂದ್ರ ಹೆಗಡೆ, ಪ್ರಕಾಶ್ ಪಡುಕೋಣೆ, ಗೌತಮಾನಂದ ಜೀ, ಇಂತಹ ಮಹನೀಯರೆಲ್ಲ ನಮ್ಮ ವಿದ್ಯಾಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡಿದ್ದಾರೆ. ಮೌಲ್ಯಯುತ ಶಿಕ್ಷಣ ನೀಡುವುದೇ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಗುರಿ ಎಂದು ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಹೇಳಿದರು.

ಇಲ್ಲಿನ ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ಆಯೋಜಿಸಿದ್ದ ಎಸ್ ಎಸ್ ಎಲ್ ಸಿ ಯಲ್ಲಿ ಶೇ 90ಕ್ಕಿಂತ ಹೆಚ್ಚು ಅಂಕಗಳನ್ನು ಗಳಿಸಿ ಪಿಯುಸಿಗೆ ದಾಖಲಾಗಿದ್ದ ಕಾಲೇಜಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ವಿತರಿಸಿ ಮಾತನಾಡಿದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾದ ಡಾ. ಗೀತಾ ರಾಮಾನುಜಮ್ ಅವರು ಮಾತನಾಡಿ, ನಾನಿಲ್ಲಿ ಬಂದಿರುವುದು ಯುವ ಮನಸ್ಸುಗಳ ಭೇಟಿಯಾಗಲು ಎಂದರು.

ಸಮಯ ನಿರ್ವಹಣೆಯ ಕಲೆ ಯಶಸ್ಸಿನ ಮೂಲ ಮೆಟ್ಟಿಲು, ನಿಮ್ಮೊಳಗೆ ಅಡಗಿರುವ ಜ್ಞಾನ, ಶಕ್ತಿಯನ್ನು ನೀವೇ ಹೊರತೆಗೆಯಬೇಕು ಎಂದರು. ಕಾರ್ಯಕ್ರಮದಲ್ಲಿ ದ್ವಿತೀಯ ಪಿಯುಸಿಯಲ್ಲಿ ರ್‍ಯಾಂಕ್ ಗಳಿಸಿದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಯಿತು. ಶಿಕ್ಷಣದತ್ತಿಯ ಉಪಾಧ್ಯಕ್ಷರಾದ ಹೆಂಜಾರಪ್ಪ.ಟಿ .ಎಸ್, ಗೌರವ ಸಹಾಯಕ ಕಾರ್ಯದರ್ಶಿಗಳಾದ ಎಂ ಎಸ್ ನಟರಾಜು, ಟ್ರಸ್ಟಿಗಳಾದ ಕೆ. ಕೃಷ್ಣಸ್ವಾಮಿ, ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲರಾದ ಜಗದೀಶ ಜಿ ಟಿ, ಪ್ರಾಂಶುಪಾಲರಾದ ಬಸವರಾಜು ಬಿ ವಿ ಅವರು ಉಪಸ್ಥಿತರಿದ್ದರು.

> ಶೇಷಾದ್ರಿಪುರಂ ಶಿಕ್ಷಣ ದತ್ತಿಯಿಂದ ವೈದ್ಯಕೀಯ ಕಾಲೇಜನ್ನು ತೆರೆಯಯುವಂತೆ ಸಲಹೆ ನೀಡಿದರು. ವಿದ್ಯಾರ್ಥಿಗಳನ್ನು ಕುರಿತು ಮಾತನಾಡಿದ ಅವರು ವೈಯಕ್ತಿಕ ನಿರ್ವಹಣೆ, ಸಮಯ ನಿರ್ವಹಣೆ, ಸ್ನೇಹಿತರು, ನಿಮ್ಮ ವರ್ತನೆ. ನಿಮ್ಮನ್ನು ನೀವು ಅರಿಯುವುದು ಮುಖ್ಯ. ಯಾವುದರಲ್ಲಿ ನಮಗೆ ಶಕ್ತಿ ಇದೆಯೊ ಆಸಕ್ತಿ ಇದೆಯೊ ಆ ದಿಕ್ಕಿನಲ್ಲಿ ನಮ್ಮನ್ನು ನಾವು ನಿರಂತರವಾಗಿ ತೊಡಗಿಸಿ ಕೊಳ್ಳಬೇಕು. ನೀವು ನೀವಾಗೆ ಇರಿ. ಬೇರೆಯವರನ್ನು ಅನುಸರಿಸಬೇಡಿ. ಸದಾ ನಿಮ್ಮ ಗುರಿಯಕಡೆಗೆ ಸಾಗಿರಿ.
>
> **ವೂಡೇ ಪಿ. ಕೃಷ್ಣ, ಸಂಸ್ಥೆಯ ಗೌರವ ಕಾರ್ಯದರ್ಶಿ**

# ಈ ಸಂಜೆ




ನಗರದ ಶೇಷಾದ್ರಿಪುರಂ ಕಾಲೇಜಿನ ಆವರಣದಲ್ಲಿ ಇಂದು 78ನೇ ಸ್ವಾತಂತ್ರ್ಯೋತ್ಸವವನ್ನು ಆಚರಿಸಲಾಯಿತು. ಡಾ.ಎಸ್.ಜಿ. ಸುಶೀಲಮ್ಮ, ನಾಡೋಜ ಡಾ. ವೂಡೇ ಪಿ. ಕೃಷ್ಣ, ಎ. ಅನಂತರಾಮು, ಟಿ.ಎಸ್. ಹೆಂಜಾರಪ್ಪ, ಎಂ.ಎಸ್. ನಟರಾಜ್, ಬಿ.ಸಿ. ಲೋಕನಾಥ್, ಆರ್.ಬಿ. ಮೃತ್ಯುಂಜಯ , ಎನ್.ಪಿ. ಕಾರ್ತಿಕ್, ಡಾ. ಎನ್. ಎಸ್. ಸತೀಶ್, ಆರ್.ಎನ್. ಮಂಜುನಾಥ್, ಜಿ.ಕೆ. ಮಂಜುನಾಥ್, ಡಾ.ಬಿ.ಜಿ. ಭಾಸ್ಕರ್, ಪ್ರೊ.ಆರ್. ಮಹಾಲಕ್ಷ್ಮಿ, ವಿದ್ಯಾಶಿವಣ್ಣವರ್, ಡಾ. ಪ್ರಣೀತ, ಡಾ. ಭಾರ್ಗವಿ, ಡಾ. ಚಿತ್ರಾ ಶಿಧರ್, ಡಾ.ವೀಣಾ ಆರ್. ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.

Bengaluru Edition Edition
Aug 16, 2024 Page No. 5
Powered by: erelego.com

ಉದಯಕಾಲ
ಕನ್ನಡಿಗರ ಜೀವಾಳ




ಬೆಂಗಳೂರು: 78ನೇ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಶೇಷಾದ್ರಿಪುರಂ ಕಾಲೇಜಿನಲ್ಲಿ ಧ್ವಜಾರೋಹಣ ನಡೆಯಿತು. ಅಧ್ಯಕ್ಷರಾದ ವೂಡೇ ಪಿ. ಕೃಷ್ಣ ಪ್ರತಿಜ್ಞಾವಿಧಿ ಬೋಧಿಸಿದರು.

Bengaluru Edition Edition
Aug 16, 2024 Page No. 8
Powered by: erelego.com

ಹೊಸ ದಿಗಂತ
12 Aug 2024



ಸುಚಿತ್ರ ಸಿನಿಮಾ ಅಂಡ್ ಕಲ್ಚರಲ್ ಅಕಾಡೆಮಿಯಲ್ಲಿ ಕೌಸ್ತುಭ ಪಬ್ಲಿಕೇಷನ್ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಭೂಸಂವೇದನೆ ಮತ್ತು ಪರಿಸರ ಪ್ರಜ್ಞೆ ಹಾಗೂ ಜಾಗತಿಕ ಹವಾಗುಣ ಬದಲಾವಣೆ ಮತ್ತು ವಿಕೋಪಗಳು ಕೃತಿಗಳನ್ನು ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಲೋಕಾರ್ಪಣೆಗೊಳಿಸಿದರು.

ಪ್ರಜಾವಾಣಿ ಬುಧವಾರ • ಆಗಸ್ಟ್ 7, 2024

# ‘ಎಲ್ಲರೂ ಸ್ವಾವಲಂಬಿಗಳಾಗಬೇಕು’



ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ರೊನಾಲ್ಡ್ ಕೊಲಾಸೊ ಅವರು ವಿದ್ಯಾರ್ಥಿನಿಗೆ ವಿದ್ಯಾರ್ಥಿವೇತನದ ಪ್ರಮಾಣಪತ್ರ ವಿತರಿಸಿದರು. ಮೈಸೂರಿನ ಸ್ವಾಮಿ ಮಹಾಮೇಧಾನಂದಜೀ, ವೂಡೇ ಪಿ. ಕೃಷ್ಣ ಭಾಗವಹಿಸಿದ್ದರು.

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಪ್ರತಿಯೊಬ್ಬರೂ ಜೀವನದಲ್ಲಿ ಸ್ವಾವಲಂಬಿಗಳಾಗಬೇಕು. ವಿದ್ಯಾರ್ಥಿಗಳು ಉದ್ಯಮಿಗಳಾಗುವ ಕ್ಷಮತೆಯನ್ನು ರೂಢಿಸಿಕೊಳ್ಳಬೇಕು’ ಎಂದು ಉದ್ಯಮಿ ರೊನಾಲ್ಡ್ ಕೊಲಾಸೊ ಹೇಳಿದರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ‘ವಿದ್ಯಾರ್ಥಿಗಳಿಗೆ ಪುನರ್‌ಮನನ ಕಾರ್ಯಾಗಾರ ಹಾಗೂ ವಿದ್ಯಾರ್ಥಿವೇತನ ವಿತರಣೆ’ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

‘ವಿದ್ಯಾರ್ಥಿಗಳು ಆದರ್ಶ ಜೀವನವನ್ನು ರೂಪಿಸಿಕೊಂಡು ಮುಂದಿನ ಪೀಳಿಗೆಗೆ ದಾರಿದೀಪವಾಗಬೇಕು. ಧರ್ಮ, ಜಾತಿಯ ಭೇದವಿಲ್ಲದೇ ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕು. ನಾವು ಮಾಡುವ ಸೇವೆಯಲ್ಲಿ ಪ್ರತಿಯೊಬ್ಬರಿಗೂ ಒಳಿತನ್ನು ಬಯಸಬೇಕು’ ಎಂದು ವಿದ್ಯಾರ್ಥಿಗಳಿಗೆ ಸಲಹೆ ನೀಡಿದರು.

ಶೇಷಾದ್ರಿಪುರ ಕಾಲೇಜಿನ ಮೊದಲ ಬ್ಯಾಚ್‌ನ ವಿದ್ಯಾರ್ಥಿಯೂ ಆಗಿರುವ ಕೊಲಾಸೊ ಅವರು, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ವಿತರಿಸಲು ಪ್ರತಿ ವರ್ಷ ₹30 ಲಕ್ಷದಂತೆ ಎರಡು ವರ್ಷ ಒಟ್ಟು ₹60 ಲಕ್ಷಗಳನ್ನು ತಾವೇ ನೀಡುವುದಾಗಿ ಘೋಷಿಸಿದರು.

ಮೈಸೂರಿನ ಸ್ವಾಮಿ ಮಹಾಮೇಧಾನಂದಜೀ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಎಂ.ಎಸ್. ನಟರಾಜ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಟ್ರಸ್ಟಿ ಕೆ. ಕೃಷ್ಣಸ್ವಾಮಿ, ಪ್ರಾಂಶುಪಾಲ ಬಿ.ಜಿ. ಭಾಸ್ಕರ್ ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ
ಮಂಗಳವಾರ 6 ಆಗಸ್ಟ್ 2024
ಬೆಂಗಳೂರು | BENGALURU

# ಸಮಾಜಸೇವೆಯಲ್ಲಿ ಭೇದಭಾವ ಸಲ್ಲ



ಶೇಷಾದ್ರಿಪುರ ಕಾಲೇಜಿನ ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದ ಕಾರ್ಯಕ್ರಮವನ್ನು ಉದ್ಯಮಿ ಡಾ.ರೊನಾಲ್ಡ್ ಕೊಲಾಸ್ಸೊ ಉದ್ಘಾಟಿಸಿದರು.

ಬೆಂಗಳೂರು: ನಾವು ಮಾಡುವ ಯಾವುದೇ ಸೇವೆಯು ಎಲ್ಲರಿಗೂ ಒಳಿತನ್ನೇ ಬಯಸಬೇಕು ಎಂದು ಉದ್ಯಮಿ, ಸಮಾಜಸೇವಕ ಹಾಗೂ ಶೇಷಾದ್ರಿಪುರಂ ಕಾಲೇಜಿನ ಮೊದಲ ಬ್ಯಾಚಿನ ವಿದ್ಯಾರ್ಥಿ ಡಾ.ರೊನಾಲ್ಡ್ ಕೊಲಾಸೊ ತಮ್ಮ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಕಾಲೇಜು ವತಿಯಿಂದ ನಗರದ ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದ ಪ್ರಸಕ್ತ ಸಾಲಿನ ನೂತನ ವಿದ್ಯಾರ್ಥಿಗಳ ಓರಿಯಂಟೇಶನ್ ಹಾಗೂ ವಿದ್ಯಾರ್ಥಿವೇತನ ವಿತರಣಾ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಪ್ರತಿಯೊಬ್ಬರು ಸ್ವಾವಲಂಬಿಗಳಾಗಿ ಬದುಕಬೇಕು. ಎಲ್ಲರೂ ಅತ್ಯುತ್ತಮ ಸಾಧನೆ ಮಾಡಬೇಕು. ತಮ್ಮ ವ್ಯಕ್ತಿತ್ವದ ಮೂಲಕ ಇಡೀ ಜಗತ್ತಿಗೆ ಮಾದರಿಯಾಗಬೇಕು. ಆ ಮೂಲಕ ಆದರ್ಶ ಜೀವನವನ್ನು ರೂಪಿಸಿಕೊಂಡು ಮುಂದಿನ ಪೀಳಿಗೆಗೆ ದಾರಿದೀಪವಾಗಬೇಕು. ನಾವು ಈ ದೇಶಕ್ಕೆ ಉದ್ಯೋಗಿಗಳಾಗುವುದರ ಜೊತೆಗೆ ಉದ್ಯಮಿಗಳಾಗುವ ಕ್ಷಮತೆಯನ್ನು ರೂಢಿಸಿಕೊಳ್ಳಬೇಕು. ಧರ್ಮ, ಜಾತಿಯ ಭೇದವಿಲ್ಲದೆ ಸಮಾಜಸೇವೆಯಲ್ಲಿ ತೊಡಗಬೇಕೆಂದು ವಿದ್ಯಾರ್ಥಿಗಳಿಗೆ ಸಲಹೆ ನೀಡಿದರು. ಇದೇ ಸಂದರ್ಭದಲ್ಲಿ ಶೇಷಾದ್ರಿಪುರಂ ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸ್ವತಃ ಎರಡು ವರ್ಷದ ವಿದ್ಯಾರ್ಥಿ ವೇತನವನ್ನು ನೀಡುವುದಾಗಿ ಘೋಷಿಸಿದರು.

ಮೈಸೂರಿನ ಸ್ವಾಮಿ ಮಹಾಮೇಧಾನಂದಜಿ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಮಾತನಾಡಿದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಕಾಲೇಜಿನ ಪ್ರಥಮ ವರ್ಷದ ಬಿಕಾಂ., ಬಿಬಿಎ, ಬಿಸಿಎ, ಪದವಿ ವಿಭಾಗದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ವಿತರಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷ ಟಿ.ಎಸ್. ಹಂಜಾರಪ್ಪ, ಕಾಲೇಜು ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಎಂ.ಎಸ್.ನಟರಾಜ್, ಶಿಕ್ಷಣ ದತ್ತಿಯ ಟ್ರಸ್ಟಿ ಕೆ.ಕೃಷ್ಣಸ್ವಾಮಿ, ಪ್ರಾಚಾರ್ಯ ಡಾ.ಬಿ.ಜಿ.ಭಾಸ್ಕರ್ ಇದ್ದರು.

ಸಮಸ್ತ ಕನ್ನಡಿಗರ ಪತ್ರಿಕೆ ಸಂಜೆ ದಿನಪತ್ರಿಕೆ
Aug 03, 2024
# ಈ ಸಂಜೆ



ನಾಡೋಜ ಪ್ರೊಡೆ.ಪಿ.ಕೃಷ್ಣ ಅವರ ನೇತೃತ್ವದಲ್ಲಿ ಶೇಷಾದ್ರಿಪುರಂನ ಎಂಕಾಂ ಕಾಲೇಜಿನ ವಿದ್ಯಾರ್ಥಿಗಳು, ಕೇರಳದ ವಯನಾಡಿನ ಸಂತ್ರಸ್ತರಿಗೆ ಇಸ್ಕಾನ್ ಸಂಸ್ಥೆಯ ಪರಿಹಾರ ಪರಿಕರ ವಿತರಣೆ ಯೋಜನೆಗೆ ಸ್ವಯಂ ಸೇವಕರಾಗಿ ಧಾನ್ಯಗಳ ಪ್ಯಾಕಿಂಗ್ ಮಾಡುವ ಮೂಲಕ ಕಿರು ಸೇವೆ ಸಲ್ಲಿಸಿದರು.

ವಿಜಯ ಕರ್ನಾಟಕ VK

ಶನಿವಾರ,3 ಆಗಸ್ಟ್ 2024,
C ಬೆಂಗಳೂರು | 07

## ಶಾಸ್ತ್ರಿ ಕೃತಿ ಬಿಡುಗಡೆ ಸಮಾರಂಭದಲ್ಲಿ ಪ್ರೊ.ಕೃಷ್ಣೇಗೌಡ ಬೇಸರ

# ಶಾಸನಸಭೆಯಲ್ಲಿ ಬೀದಿ ಮಾತು



ಬೆಂಗಳೂರಿನಲ್ಲಿ ಎಂ.ಕೆ. ಕೆಂಪೇಗೌಡ ಅವರು ಅನುವಾದಿಸಿರುವ ಲಾಲ್ ಬಹದ್ದೂರ್ ಶಾಸ್ತ್ರಿ ಕೃತಿಗಳನ್ನು ಬಿಡುಗಡೆ ಮಾಡಲಾಯಿತು. ಪ್ರೊ.ಎಂ. ಕೃಷ್ಣೇಗೌಡ, ನಾಡೋಜ ವೂಡೆ ಪಿ. ಕೃಷ್ಣ, ಸಿ. ನಾರಾಯಣಸ್ವಾಮಿ, ಬಿ.ಆರ್. ಪಾಟೀಲ್, ಕಲಾವಿದ ಪ್ರಕಾಶ್ ಚಿಕ್ಕಪಾಳ್ಯ ಭಾಗವಹಿಸಿದ್ದರು.

■ **ವಿಕ ಸುದ್ದಿಲೋಕ** ಬೆಂಗಳೂರು

ಸಾರ್ವಜನಿಕ ಜೀವನದಲ್ಲಿರುವ ವ್ಯಕ್ತಿಗಳು ಸಮಾಜದಲ್ಲಿ ಹೇಗೆ ವರ್ತಿಸಬೇಕೆಂಬ ಸಂವೇದನೆಯನ್ನೇ ಕಳೆದುಕೊಂಡಿದ್ದಾರೆ ಎಂದು ಸಂಸ್ಕೃತಿ ಚಿಂತಕ ಪ್ರೊ.ಎಂ. ಕೃಷ್ಣೇಗೌಡ ವಿಷಾದಿಸಿದರು.

ಮೈಸೂರು ಬುಕ್ ಹೌಸ್ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಎಂ.ಕೆ. ಕೆಂಪೇಗೌಡ ಅವರು ಅನುವಾದಿಸಿರುವ ಲಾಲ್ ಬಹದ್ದೂರ್ ಶಾಸ್ತ್ರಿ ಕೃತಿ ಬಿಡುಗಡೆ ಮಾಡಿ ಮಾತನಾಡಿದರು.

''ಪ್ರಸ್ತುತ ಸಂದರ್ಭದಲ್ಲಿ ರಾಜಕಾರಣಿಗಳ ಭಾಷೆ ಹಾಗೂ ನಡವಳಿಕೆ ಸಂಪೂರ್ಣ ಬದಲಾಗಿದೆ. ಬೀದಿಯಲ್ಲಿ ಮಾತನಾಡುವ ಭಾಷೆ ಶಾಸನಸಭೆಗಳಲ್ಲೂ ಪ್ರತಿಧ್ವನಿಸುತ್ತಿದೆ. ಸಾರ್ವಜನಿಕ ಜೀವನದಲ್ಲಿರುವ ನಾಯಕರು ಇಂದು ಸಂವೇದನೆಯನ್ನೇ ಕಳೆದುಕೊಂಡಿದ್ದಾರೆ.ಇದು ಆತಂಕಕಾರಿ ಬೆಳವಣಿಗೆ. ನಾಯಕರು ಸಮಾಜದಲ್ಲಿ ಸಕಾರಾತ್ಮಕ ಬದಲಾವಣೆ ತರಬೇಕು. ಈ ಹಿಂದೆ ಶಾಸನಸಭೆಗೆ ಬುದ್ಧಿವಂತರು, ಸಾಕಷ್ಟು ಓದಿಕೊಂಡ ಅಕ್ಷರಸ್ಥರು ಹೋಗುತ್ತಿದ್ದರು. ಆದರೆ, ಇಂದು ಹಣ ಮತ್ತು ತೋಳ್ಬಲವಿರುವವರು ಹೋಗುತ್ತಿದ್ದಾರೆ. ರಾಜ್ಯದ ಅಭಿವೃದ್ಧಿ ಮಾಡುವ ಜವಾಬ್ದಾರಿ ಸ್ಥಾನದಲ್ಲಿರುವವರು ಆಡಬಾರದ ಮಾತುಗಳನ್ನು ಆಡುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ,'' ಎಂದು ಕಳವಳ ವ್ಯಕ್ತಪಡಿಸಿದರು.

''ಲಾಲ್‌ಬಹದ್ದೂರ್ ಶಾಸ್ತ್ರಿ ಅವರ ಬದುಕು ಮತ್ತು ಮಾತಿಗೆ ವ್ಯತ್ಯಾಸವೇ ಇರಲಿಲ್ಲ. ಅವರು ನುಡಿದಂತೆ ಬದುಕಿದರು, ಬದುಕಿದ್ದನ್ನೇ ಮಾತನಾಡಿದರು. ಅಂತಹ ಧೀಮಂತ ವ್ಯಕ್ತಿಗಳ ಜೀವನ ಇಂದಿನ ಪೀಳಿಗೆಗೆ ಆದರ್ಶವಾಗಲು ಈ ಕೃತಿ ತುಂಬ ಉಪಯುಕ್ತವಾಗಿದೆ. ಪತ್ರಕರ್ತರಾಗಿದ್ದ ಮಾಂಕೇಕರ್ ಅವರು ಇಂಗ್ಲಿಷ್‌ನಲ್ಲಿ ರಚಿಸಿದ್ದ ಕೃತಿಯನ್ನು ಎಂ.ಕೆ.ಕೆಂಪೇಗೌಡರು ಅತ್ಯಂತ ಸಮರ್ಥವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ,'' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಅನುವಾದಕ ಎಂ. ಕೆ.ಕೆಂಪೇಗೌಡ, ನಾಡೋಜ ವೂಡೆ ಪಿ. ಕೃಷ್ಣ, ಸಿ. ನಾರಾಯಣಸ್ವಾಮಿ, ಬಿ.ಆರ್. ಪಾಟೀಲ್, ಕಲಾವಿದ ಪ್ರಕಾಶ್ ಚಿಕ್ಕಪಾಳ್ಯ ಉಪಸ್ಥಿತರಿದ್ದರು.

ಪ್ರಜಾವಾಣಿ
ಶುಕ್ರವಾರ ○ ಆಗಸ್ಟ್ 2, 2024

## ವ್ಯಸನಮುಕ್ತ ದಿನಾಚರಣೆಯಲ್ಲಿ ಮನೋವೈದ್ಯ ಡಾ.ಸಿ.ಆರ್.ಚಂದ್ರಶೇಖರ್

# 'ಸರ್ಕಾರದಿಂದಲೇ ಮದ್ಯಪಾನಕ್ಕೆ ಪ್ರೋತ್ಸಾಹ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಜನರನ್ನು ಕಾದು, ಅವರ ಜೀವನಕ್ಕೆ ಮಾರ್ಗದರ್ಶನ ಮಾಡಬೇಕಾದ ಸರ್ಕಾರಗಳೇ ಮದ್ಯಪಾನ ಮಾಡುವಂತೆ ಪ್ರೋತ್ಸಾಹ ನೀಡುತ್ತಿರುವುದು ದುರದೃಷ್ಟಕರ ಸಂಗತಿ' ಎಂದು ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್ ಬೇಸರ ವ್ಯಕ್ತಪಡಿಸಿದರು.

ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಜಂಟಿಯಾಗಿ ನಗರದಲ್ಲಿ ಗುರುವಾರ ಹಮ್ಮಿಕೊಂಡ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡಿದರು.

'ಸಿದ್ದರಾಮಯ್ಯ ಅವರ ಸರ್ಕಾರವು ಅಬಕಾರಿ ಸುಂಕದಿಂದಲೇ ₹50 ಸಾವಿರ ಕೋಟಿ ಸಂಗ್ರಹದ ಗುರಿ ಹಾಕಿಕೊಂಡಿದೆ. ಇದರಿಂದಾಗಿ ಐದನೇ ಬಾರಿ ಮದ್ಯದ ದರ ಹೆಚ್ಚಿಸಲಾಗಿದೆ. ತಡರಾತ್ರಿವರೆಗೂ ಮದ್ಯದ ಮಳಿಗೆಗಳು ಬಾಗಿಲು ತೆರೆದಿದ್ದರೂ ಅವುಗಳ ಮೇಲೆ ಕಾನೂನು ಕ್ರಮಗಳನ್ನು ಕೈಗೊಳ್ಳುತ್ತಿಲ್ಲ. ಇದರಿಂದಾಗಿ ಜನರು ಮದ್ಯಪಾನದಂತಹ ವ್ಯಸನಕ್ಕೆ ಒಳಗಾಗಿ, ಬದುಕನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ' ಎಂದು ಹೇಳಿದರು.

ಇಳಕಲ್‌ನ ಚಿತ್ತರಗಿ ವಿಜಯ ಮಹಾಂತೇಶ್ವರ ಸಂಸ್ಥಾನದ ಶಾಖಾ ಮಠದ ಬಸವಲಿಂಗ ಸ್ವಾಮೀಜಿ ಮಾತನಾಡಿ, 'ದೇಹವು ದೇವ ಮಂದಿರವಾಗಿದೆ. ಅದನ್ನು ಕಸದ ತೊಟ್ಟಿ ಮಾಡದೆ ಸ್ವಚ್ಛವಾಗಿಟ್ಟುಕೊಳ್ಳಬೇಕು' ಎಂದರು.



ಕಾರ್ಯಕ್ರಮದಲ್ಲಿ ಬಸವಲಿಂಗ ಸ್ವಾಮೀಜಿ, ಡಾ.ಸಿ.ಆರ್. ಚಂದ್ರಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಎನ್.ಎಸ್. ಮಹೇಶ್ ಅವರು ಮಹಾಂತ ಶಿವಯೋಗಿ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು —ಪ್ರಜಾವಾಣಿ ಚಿತ್ರ

### ಮೊಬೈಲ್ ವ್ಯಸನವೂ ಅಪಾಯಕಾರಿ

'ಮೊಬೈಲ್ ಬಳಕೆಯೂ ಇತ್ತೀಚೆಗೆ ವ್ಯಸನವಾಗಿ ಮಾರ್ಪಟ್ಟಿದೆ. ಒಂದೂವರೆ, ಎರಡು ತಿಂಗಳ ಮಗುವಿಗೂ ಅತ್ತಾಗ ಮೊಬೈಲ್ ನೀಡಲಾಗುತ್ತಿದೆ. ಇದು ಭವಿಷ್ಯದಲ್ಲಿ ವ್ಯಸನವಾಗಲಿದೆ. ಡ್ರಗ್ಸ್ ವ್ಯಸನವೂ ಹೆಚ್ಚುತ್ತಿದ್ದು, ರಾತ್ರಿ 9ರ ನಂತರ ಎಂ.ಜಿ.ರಸ್ತೆ, ಬ್ರಿಗೇಡ್ ರಸ್ತೆಯಲ್ಲಿ ಸಂಚರಿಸಲು ಭಯವಾಗುತ್ತದೆ. ಕೆಲವರು ಗಾಂಜಾ ಸೇವಿಸಿ ವಾಹನಗಳನ್ನು ಓಡಿಸುತ್ತಿರುತ್ತಾರೆ' ಎಂದು ಡಾ.ಸಿ.ಆರ್. ಚಂದ್ರಶೇಖರ್ ಹೇಳಿದರು.

ಹೊಸ ದಿಗಂತ
ಶುಕ್ರವಾರ, 2 ಆಗಸ್ಟ್ 2024, ಬೆಂಗಳೂರು

# ಧೂಮಪಾನದಿಂದ ಆರೋಗ್ಯಕ್ಕೆ ಹಾನಿ



**ಬೆಂಗಳೂರು:** ಮನಸ್ಸೇ ದೇವರು, ಆದರಿಂದ ಆ ದೇವರ ಮಂದಿರದಲ್ಲಿ ಧೂಮಪಾನ ಹಾಗೂ ಮಧ್ಯಪಾನ ಸೇರಿಕೊಂಡರೆ ಆರೋಗ್ಯ ಚೆನ್ನಾಗಿರುವುದಿಲ್ಲ ಎಂದು ಶಿರೂರು ಶಾಖಾ ಮಠದ ಬಸವಲಿಂಗ ಸ್ವಾಮೀಜಿ ಹೇಳಿದರು.

ಕರ್ನಾಟಕ ರಾಜ್ಯ ಮಧ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮತ್ತು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಬೆಂಗಳೂರು ಇವರ ಸಂಯುಕ್ತಾಶ್ರಯದಲ್ಲಿ ಚಿತ್ತರಗಿ ಇಳಕಲ್ ವಿಜಯ ಮಹಂತೇಶ್ವರ ಸಂಸ್ಥಾನದ ಶ್ರೀ ಮ.ನಿ.ಪ್ರ.ಡಾ.ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ಗುರುವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮ ಅವರು ಉದ್ಘಾಟಿಸಿ ಮಾತನಾಡಿ, ಮನಸ್ಸೆ ದೇವರ ಮಂದಿರವಾಗಿರುವುದರಿಂದ ತನು, ಮನ ಹಾಗೂ ಭಾವದಿಂದ ಶುಚಿಯಾಗಿರಿಸಬೇಕು, ಹೊರತಾಗಿ ಅಂತಹ ಪವಿತ್ರ ಸ್ಥಳದಲ್ಲಿ ಧೂಮಪಾನ ಹಾಗೂ ಮಧ್ಯಪಾನವು ತುಂಬಿದ್ದರೆ ಆರೋಗ್ಯಕರವಾಗಿರಲು ಸಾಧ್ಯವಿಲ್ಲ ಎಂದರು.

ಯೋಗ ಹಾಗೂ ಶಿವಯೋಗವೇ ಜಗತ್ತಿನ ರಾಜಧಾನಿಯಾಗಬೇಕು. ದಿನಕ್ಕೆ ಒಂದು ಬಾರಿ ವಚನವನ್ನು ಓದಿದರೆ ಒಳ್ಳೆಯ ಮನುಷ್ಯನಾಗುತ್ತಾನೆ ಎಂದರು. ಮನೋವೈದ್ಯಕೀಯ ತಜ್ಞ ಸಿ.ಆರ್.ಚಂದ್ರಶೇಖರ್ ಮಾತನಾಡಿ, ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ 50 ಸಾವಿರ ಕೋಟಿ ರೂ.ಅಗತ್ಯವಿದೆಂದರು.

ಹಾಗಾಗಿ ಮಧ್ಯದ ಬೆಲೆ ಏರಿಕೆ ಮಾಡಿದ್ದಾರೆ. ಎಷ್ಟು ಬೇಕಾದರೂ ಕುಡಿಯಿರಿ, ಅದಕ್ಕೆ ಯಾರೂ ಕೂಡ ತಡೆ ಹಿಡಿಯುವುದಿಲ್ಲ. ಇನ್ನು ರಾಜ್ಯವು ಜನರಿಗೆ ವ್ಯಸನ ಮುಕ್ತರಾಗಬೇಕೆಂದು ಮಾರ್ಗದರ್ಶನ ಮಾಡಬೇಕಿತ್ತು, ಅವರೇ ಮಧ್ಯಪಾನ ಮಾಡಿ ಎಂದು ಹೇಳುತ್ತಿದ್ದಾರೆ ಎಂದರು.

ಧೂಮಪಾನ ಮಾಡಲು ಬೆಂಕಿ ಹಚ್ಚುತ್ತೇವೆ, ಹಾಗೇ ಆ ಬೆಂಕಿಯನ್ನು ನಮ್ಮನ್ನೆ ಸುಟ್ಟು ಹಾಕುತ್ತದೆ. ಜತೆಗೆ ಅವರೊಂದಿಗೆ ಇದ್ದವರಿಗೂ ಹಾನಿಯಾಗುತ್ತದೆ. ಹಾಗಾಗಿ ಧೂಮಪಾನ ಮಾಡಬೇಡಿ ಹಾಗೂ ಧೂಮಪಾನ ಮಾಡುವವರ ಹತ್ತಿರ ಇರಬೇಡಿ ಎಂದು ಸಲಹೆ ನೀಡಿದರು.

ಪ್ರಸ್ತುತ ಶೇ.30ರಷ್ಟು ಹೃದಾಯಾಘಾತವಾಗುತ್ತಿರುವವರು 25ವರ್ಷಕ್ಕಿಂತ ಕೆಳಗಿನವರಾಗಿದ್ದಾರೆ. ಈ ಹಿಂದೆ ಅಮೆರಿಕಾದಲ್ಲಿ ಹೆಚ್ಚು ಹೃದಯಾಘಾತವಾಗುತ್ತಿತ್ತು ಎಂದು ಹೇಳಲಾಗುತ್ತಿತ್ತು. ಆದರೆ ಈದಿಗ ಭಾರತದಲ್ಲಿ ಹೃದಯಾಘಾತವಾಗುವವರ ಸಂಖ್ಯೆ ಹೆಚ್ಚಾಗುತ್ತಿದೆ ಎಂದು ಹೇಳಿದರು.

ಈ ವೇಳೆ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಸದಸ್ಯ ಶಶಿಧರ್ ಕೋಸಂಬೆ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ ಹಾಗೂ ವಾರ್ತ ಇಲಾಖೆಯ ಉಪನಿರ್ದೇಶಕ ರಾಮಲಿಂಗಪ್ಪ.ಬಿ.ಕೆ. ಮುಂತಾದವರು ಉಪಸ್ಥಿತರಿದ್ದರು.

ಸಂಜೆವಾಣಿ
ಶುಕ್ರವಾರ 02 ಆಗಸ್ಟ್ 2024



ನಗರದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ಪ್ರಥಮ ಪಿಯು ವಿದ್ಯಾರ್ಥಿಗಳಿಗೆ ಪುನಃಚೇತನ ಹಾಗೂ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ವಿಭೂತಿಪುರ ಮಠದ ಡಾ. ಶ್ರೀ ಮಹಾಂತೇಶ್ ಶಿವಾಚಾರ್ಯ ಸ್ವಾಮೀಜಿ, ಸಂಸ್ಥೆಯ ದತ್ತಿ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ, ಪರಮಶಿವಯ್ಯ, ವೀರಭದ್ರಯ್ಯ, ಪ್ರಾಂಶುಪಾಲರಾದ ಪ್ರೊ. ಆರ್. ಮಹಾಲಕ್ಷ್ಮಿ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ ಶುಕ್ರವಾರ 02.08.2024

**ವ್ಯಸನಮುಕ್ತ ದಿನಾಚರಣೆ** ಸರ್ಕಾರ ಪರ್ಯಾಯ ಆದಾಯದ ಮಾರ್ಗ ಕಂಡುಕೊಳ್ಳುವುದು ಸೂಕ್ತ: ಸಿ.ಆರ್.ಚಂದ್ರಶೇಖರ್

# 'ಮದ್ಯದಿಂದ ಆದಾಯ ಸಂಗ್ರಹ ದುರದೃಷ್ಟಕರ'

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮದ್ಯ ವ್ಯವಸ ಮುಕ್ತರಾಗಿ ಎಂದು ಹೇಳಬೇಕಿರುವ ರಾಜ್ಯ ಸರ್ಕಾರ ಮದ್ಯ ಮಾರಾಟದಿಂದ ₹50 ಸಾವಿರ ಕೋಟಿ ಆದಾಯ ಸಂಗ್ರಹಿಸುವ ಗುರಿ ಹೊಂದಿರುವುದು ದುರದೃಷ್ಟಕರ ಎಂದು ಮನೋವೈದ್ಯ ಸಿ.ಆರ್. ಚಂದ್ರಶೇಖರ್ ಬೇಸರ ವ್ಯಕ್ತಪಡಿಸಿದರು.

ಗುರುವಾರ ನಗರದ ಗಾಂಧಿ ಭವನದಲ್ಲಿ ಚಿತ್ತರಗಿ ಇಳಕಲ್ ವಿಜಯ ಮಹಂತೇಶ್ವರ ಸಂಸ್ಥಾನದ ಶ್ರೀ ಮಹಾಂತ ಶಿವಯೋಗಿಗಳ ಜಯಂತಿ ಅಂಗವಾಗಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕರ್ನಾಟಕ ಗಾಂಧಿ ಸ್ಮಾರಕ ಸಹಯೋಗದಲ್ಲಿ ಆಯೋಜಿಸಿದ್ದ ವ್ಯಸನಮುಕ್ತ ದಿನಾಚರಣೆಯಲ್ಲಿ ಅವರು ಮಾತನಾಡಿದರು.

ರಾಜ್ಯ ಸರ್ಕಾರಕ್ಕೆ ಮದ್ಯದ ತೆರಿಗೆಯೇ ಮೂಲ ಆದಾಯ. ಹಾಗಾಗಿ ಮಧ್ಯರಾತ್ರಿವರೆಗೂ ಮದ್ಯದಂಗಡಿ ಬಾಗಿಲು ತೆರೆದಿರುತ್ತದೆ. ಪೊಲೀಸರು ಬಾಗಿಲು ಹಾಕಿಸುವುದಿಲ್ಲ. ಇದರಿಂದ ಮದ್ಯ ವ್ಯಸನಿಗಳ ಸಂಖ್ಯೆಯೊಂದಿಗೆ ಆದಾಯವೂ ಹೆಚ್ಚಾಗುತ್ತದೆ. ಸರ್ಕಾರ ಪರ್ಯಾಯ ಆದಾಯದ ಮಾರ್ಗ ಕಂಡುಕೊಂಡು ಮದ್ಯದ ತೆರಿಗೆಯ ಮೇಲೆ ಆಧಾರವಾಗುವುದನ್ನು ನಿಲ್ಲಿಸುವ ಕಡೆಗೆ ಚಿಂತನೆ ನಡೆಸಬೇಕು ಎಂದರು.



ಇಳಕಲ್ ಶ್ರೀ ವಿಜಯ ಮಹಂತೇಶ್ವರ ಸಂಸ್ಥಾನದ ಶ್ರೀಮಹಾಂತ ಶಿವಯೋಗಿಗಳ ಜಯಂತಿ ಅಂಗವಾಗಿ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ವ್ಯವನಮುಕ್ತ ದಿನಾಚರಣೆ ಕಾರ್ಯಕ್ರಮವನ್ನು ಗುರುಮಹಾಂತ ಸ್ವಾಮೀಜಿ ಉದ್ಘಾಟಿಸಿದರು.

ಒಂದು ದೇಶವನ್ನು ನಾಶ ಮಾಡಲು ಅಣುಬಾಂಬ್ ಬೇಕಿಲ್ಲ, ಗಾಂಜಾ ಸೇರಿದಂತೆ ಮಾದಕ ವಸ್ತುಗಳೇ ಸಾಕು, ಅವು ಮನುಷ್ಯನನ್ನು ಸಾಯಿಸುತ್ತವೆ. ಬೆಂಗಳೂರಿಗೆ ನಿತ್ಯ ಟನ್‌ಗಟ್ಟಲೇ ಗಾಂಜಾ ಬೀಳುತ್ತಿದೆ. ಪ್ರೌಢಶಾಲೆ ಮಕ್ಕಳು, ಕಾಲೇಜು ವಿದ್ಯಾರ್ಥಿಗಳು; ಸಾಫ್ಟ್‌ವೇರ್ ಎಂಜಿನಿಯರ್‌ಗಳೇ ಇದರ ಟಾರ್ಗೆಟ್ ಆಗಿದ್ದಾರೆ. ಎಂದರು.

ಚಿತ್ತರಗಿ ಇಳಕಲ್ ವಿಜಯಮಹಂತೇಶ್ವರ ಸಂಸ್ಥಾನ ಶಿರೂರು ಶಾಖಾ ಮಠದ ಬಸವಲಿಂಗ ಸ್ವಾಮೀಜಿ, ನಮ್ಮ ಮನಸ್ಸಿನಲ್ಲಿಯೇ ದೇವರು ಇದ್ದಾನೆ. ದೇವರಿರುವ ಜಾಗಕ್ಕೆ ಮದ್ಯ, ಧೂಮ, ಮಾದಕ ವಸ್ತು ತುಂಬಿದರೆ ಆರೋಗ್ಯವಾಗಿರಲು ಸಾಧ್ಯವಿಲ್ಲ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ। ವೂಡೇ ಪಿ.ಕೃಷ್ಣ, ವಿಕ್ಟೋರಿಯಾ ಆಸ್ಪತ್ರೆಯ ಮನೋ ವೈದ್ಯಕೀಯ ವಿಭಾಗದ ಮುಖ್ಯಸ್ಥ ಡಾ। ಗುರುಪ್ರಸಾದ್, ವಾರ್ತಾ ಇಲಾಖೆ ಉಪನಿರ್ದೇಶಕ ರಾಮಲಿಂಗಪ್ಪ, ರಾಜ್ಯ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಮಹೇಶ್, ಶಿವರಾಜ್, ಜಿ.ಸಿ.ಚಂದ್ರಶೇಖರ್ ಉಪಸ್ಥಿತರಿದ್ದರು.

© VIJAYAVANI » BENGALURU

ಶುಕ್ರವಾರ 2 ಆಗಸ್ಟ್ 2024
2 AUGUST 2024

# ವ್ಯಸನಗಳಿಗೆ ದಾಸರಾದರೆ ಮೈ-ಮನಗಳ ಸ್ವಾಸ್ಥ್ಯ ಹಾಳು

## ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್ ಅಭಿಮತ । ಗಾಂಧಿಭವನದಲ್ಲಿ ವ್ಯಸನಮುಕ್ತ ದಿನಾಚರಣೆ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಮದ್ಯಪಾನ, ಧೂಮಪಾನದ ವ್ಯಸನಗಳಿಗೆ ದಾಸರಾದವರು ತಮ್ಮ ಮೈ-ಮನಸ್ಸುಗಳ ಜತೆಗೆ ಮಿದುಳಿಗೂ ಹಾನಿ ತಂದುಕೊಳ್ಳುತ್ತಾರೆ. ಈ ಮೂಲಕ ತಮ್ಮ ಕುಟುಂಬದ ನೆಮ್ಮದಿ ಹರಣಕ್ಕೂ ಕಾರಣರಾಗುತ್ತಾರೆ ಎಂದು ಹಿರಿಯ ಮನೋವೈದ್ಯ ಡಾ. ಸಿ.ಆರ್. ಚಂದ್ರಶೇಖರ್ ಹೇಳಿದ್ದಾರೆ.

ಚಿತ್ತರಗಿಯ ಇಳಕಲ್ ಶ್ರೀ ವಿಜಯ ಮಹಂತೇಶ್ವರ ಸಂಸ್ಥಾನದ ಡಾ. ಮಹಾಂತ ಶಿವಯೋಗಿಗಳ ಜಯಂತಿ ಅಂಗವಾಗಿ ಗಾಂಧಿ ಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ 'ವ್ಯಸನಮುಕ್ತ ದಿನಾಚರಣೆ'ಯಲ್ಲಿ ಮಾತನಾಡಿದರು. ಯುವ ಜನರು ಡ್ರಗ್ಸ್, ಕುಡಿತಕ್ಕೆ ದ್ದಾಸರಾಗುವ ಬಗ್ಗೆ ಎಚ್ಚರಿಕೆ ವಹಿಸಬೇಕಿದೆ. ದೇಹದ ಮೇಲೆ ಮಾದಕ ವಸ್ತುಗಳು ವ್ಯತಿರಿಕ್ತ ಪರಿಣಾಮವನ್ನುಂಟು ಮಾಡುತ್ತವೆ ಎಂದು ಸಲಹೆ ನೀಡಿದರು.

ಆಶೀರ್ವಚನ ನೀಡಿದ ಶಿರೂರು ಮಠದ ಶ್ರೀ ಬಸವಲಿಂಗ ಸ್ವಾಮೀಜಿ, ತನು, ಮನ, ಭಾವ, ನಡೆ- ನುಡಿಗಳಲ್ಲಿ ಶುಚಿತ್ವ ಕಾಪಾಡುವವನು ನಿಜವಾದ ಜ್ಞಾನಿ. ಮಕ್ಕಳಲ್ಲಿ ಒಳ್ಳೆಯ ಹವ್ಯಾಸ ಬೆಳೆಯಬೇಕು. ನಮ್ಮಲ್ಲಿರುವ ಒಡವೆಯೆಂದರೆ ಜ್ಞಾನ. ಮಾನವೀಯತೆಯೇ ದೇವರು. ಇತರರಿಗೆ ಒಳಿತನ್ನು ಬಯಸಿ ಅವರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸುವುದೇ ನಿಜವಾದ ಮನುಷ್ಯತ್ವ. ಮನಸ್ಸನ್ನು ಚಂಚಲಗೊಳಿಸದೆ ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಬೇಕು ಎಂದು ಕರೆ ನೀಡಿದರು.

ಇದೇ ವೇಳೆ ಡಾ. ಸಿ.ಎನ್. ಚಂದ್ರಶೇಖರ್ ರಚಿತ 'ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಹೇಗೆ- ಪರಿಹಾರ ಹೇಗೆ' ಎಂಬ ಕಿರು ಹೊತ್ತಗೆಯನ್ನು ಬಿಡುಗಡೆ ಮಾಡಲಾಯಿತು. ವಿಕ್ಟೋರಿಯಾ ಆಸ್ಪತ್ರೆಯ ಮನೋವೈದ್ಯಕೀಯ ತಜ್ಞ ಡಾ. ಗುರುಪ್ರಸಾದ್, ಗಾಂಧಿ ಸ್ಮಾರಕ ನಿಧಿ ನಿರ್ದೇಶಕ ಡಾ. ಶಿವರಾಜ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಉಪನಿರ್ದೇಶಕ' ಬಿ.ಕೆ. ರಾಮಲಿಂಗಪ್ಪ, ಕರ್ನಾಟಕ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಎಸ್.ಎನ್. ಮಹೇಶ್ ಮತ್ತಿತರರು ಉಪಸ್ಥಿತರಿದ್ದರು.



ಗಾಂಧಿ ಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಇಳಕಲ್ ಶ್ರೀ ವಿಜಯ ಮಹಂತೇಶ್ವರ ಸಂಸ್ಥಾನದ ಡಾ. ಮಹಾಂತ ಶಿವಯೋಗಿಗಳ ಭಾವಚಿತ್ರಕ್ಕೆ ಶ್ರೀ ಬಸವಲಿಂಗ ಸ್ವಾಮೀಜಿ ಪುಷ್ಪನಮನ ಸಲ್ಲಿಸಿದರು. ಡಾ. ಸಿ.ಆರ್. ಚಂದ್ರಶೇಖರ್, ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

ಮದ್ಯ ಮಾರಾಟದಿಂದ ದೇಶ ಹಾಗೂ ರಾಜ್ಯಕ್ಕೆ ಕೋಟ್ಯಂತರ ರೂ.ಗಳ ಆದಾಯ ಬರುತ್ತದೆ. ಜನರನ್ನು ಅದರಲ್ಲೂ ಯುವಜನರನ್ನು ವ್ಯಸನಮುಕ್ತಗೊಳಿಸುವುದು ನಮ್ಮೆಲ್ಲರ ಗುರಿಯಾಗಬೇಕು. ದಿನದಲ್ಲಿ ಒಂದು ಗಂಟೆ ಇತರರ ಒಳಿತಿಗೆ ಶ್ರಮಿಸಿದರೆ ನಮಗೆ ನೆಮ್ಮದಿ, ಆತ್ಮತೃಪ್ತಿ ಸಿಗುತ್ತದೆ. ಗಾಂಧೀಜಿ ಅಖಂಡ ಭಾರತ ಪ್ರವಾಸ ಮಾಡಿ ಬಡತನ, ವ್ಯಸನವನ್ನು ಮುಕ್ತವಾಗಿಸಲು ಹೋರಾಟ ನಡೆಸಿದ್ದರು. ಆ ಧ್ಯೇಯ ನಮ್ಮದಾಗಬೇಕು..

। ಡಾ. ವೂಡೇ ಪಿ. ಕೃಷ್ಣ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ

ವಿಶ್ವವಾಣಿ

02.08.2024 ಶುಕ್ರವಾರ
vishwavani.news

## ವ್ಯಸನಮುಕ್ತ ದಿನಾಚರಣೆಯಲ್ಲಿ ಬಸವಲಿಂಗ ಸ್ವಾಮೀಜಿ ಕರೆ

# ನಡೆ-ನುಡಿಯಲ್ಲಿ ಶುಚಿತ್ವ ಇರುವವನೇ ಜ್ಞಾನಿ



ಬೆಂಗಳೂರು: ತನು, ಮನ, ಭಾವ, ನಡೆ-ನುಡಿ, ಇವುಗಳಲ್ಲಿ ಶುಚಿತ್ವ ಕಾಪಾಡುವವನು ನಿಜವಾದ ಜ್ಞಾನಿ ಎಂದು ಶಿರೂರು ಮಠದ ಬಸವಲಿಂಗ ಮಹಾಸ್ವಾಮೀಜಿ ಅವರು ತಿಳಿಸಿದರು.

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಬೆಂಗಳೂರು ಇವರ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಚಿತ್ತರಗಿ ಇಳಕಲ್ ವಿಜಯ ಮಹಂತೇಶ್ವರ ಸಂಸ್ಥಾಪನದ ಪೂಜ್ಯ ಡಾ. ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ಹಮ್ಮಿಕೊಳ್ಳಲಾದ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದರು.

ಮಕ್ಕಳಲ್ಲಿ ಒಳ್ಳೆಯ ಹವ್ಯಾಸ ಬೆಳೆಯಬೇಕು. ನಮ್ಮಲ್ಲಿರುವ ಒಡವೆಯೆಂದರೆ ಜ್ಞಾನರತ್ನ ಮಾನವೀಯತೆಯೇ ದೇವರು. ಇತರರಿಗೆ ಒಳಿತನ್ನು ಬಯಸಿ ಅವರ ಕಷ್ಟ -ಕಾರ್ಪಣ್ಯಕ್ಕೆ ಸ್ಪಂದಿಸುವುದೇ ನಿಜವಾದ ಮನುಷ್ಯತ್ವ ನಮ್ಮ ಮನಸ್ಸನ್ನು ಚಂಚಲಗೊಳಿಸದೆ ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಬೇಕು ಎಂದು ಕರೆ ನೀಡಿದರು.

**ಮೆದುಳಿಗೆ ಹಾನಿ: ಎಚ್ಚರಿಕೆ**

ಪದ್ಮಶ್ರೀ ಪುರಸ್ಕೃತ ಮನೋವೈದ್ಯಕೀಯ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ಅವರು ಮಾತನಾಡಿ, ಸಿಗರೇಟ್, ಗಾಂಜಾ, ಮದ್ಯಪಾನಕ್ಕೆ ದಾಸರಾದವರು ತಮ್ಮ ಮೈಮನಸ್ಸುಗಳನ್ನು ಹಾಳುಮಾಡಿಕೊಳ್ಳುವರು. ಮುಖ್ಯವಾಗಿ ಇವು ಮೆದುಳಿಗೆ ಹಾನಿ ಉಂಟು ಮಾಡುತ್ತದೆ. ಇವುಗಳಿಗೆ ದಾಸರಾದವರು, ತಮ್ಮ ಕುಟುಂಬ, ಹಣ, ಮನಸಿನ ದೇಹದ ಸ್ವಾಸ್ಥ್ಯ ಕಳೆದುಕೊಳ್ಳುವರು. ಅಲ್ಲದೆ ದೇಹದ ಮೇಲೆ ಮಾದಕ ವಸ್ತುಗಳು ವ್ಯತಿರಿಕ್ತ ಪರಿಣಾಮವನ್ನುಂಟು ಮಾಡುತ್ತವೆ. ಯುವ ಜನರು ಇವುಗಳ ಚಟಕ್ಕೆ ಬೀಳಬಾರದೆಂದು ತಿಳಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಮಾತನಾಡಿ, ಮದ್ಯ ಮಾರಾಟದಿಂದ ದೇಶಕ್ಕೆ ಹಾಗೂ ರಾಜ್ಯಕ್ಕೆ ಕೋಟ್ಯಾಂತರ ರು. ಆದಾಯ ಬರುತ್ತದೆ. ಜನರನ್ನು ಆದರಲ್ಲೂ ಯುವಜನರನ್ನು ವ್ಯಸನಮುಕ್ತಗೊಳಿಸುವುದು ನಮ್ಮೆಲ್ಲರ ಗುರಿಯಾಗಬೇಕು.

ದಿನದಲ್ಲಿ ಒಂದು ಗಂಟೆ ಇತರರ ಒಳಿತಿಗೆ ಶ್ರಮಿಸಿದರೆ ನಮಗೆ ನೆಮ್ಮದಿ ಆತ್ಮತೃಪ್ತಿ ಸಿಗುತ್ತದೆ. ಗಾಂಧೀಜಿ ಅಖಂಡ ಭಾರತ ಪ್ರವಾಸ ಮಾಡಿ ಬಡತನ, ವ್ಯಸನವನ್ನು ಮುಕ್ತವಾಗಿಸಲು ಹೋರಾಟ ನಡೆಸಿದರು. ಆದರಲ್ಲೂ ಗ್ರಾಮೀಣ ಜನರು ಮದ್ಯಪಾನಕ್ಕೆ ದಾಸರಾಗಿ ತಮ್ಮ ಹಾಗೂ ಕುಟುಂಬದವರ ಜೀವನವನ್ನು ಹಾಳು ಮಾಡುತ್ತಿರುವುದರ ವಿರದ್ಧ ದನಿ ಎತ್ತಿದರು. ಅವರು ವ್ಯಸನಮುಕ್ತ, ಕೋಮುಸೌಹಾರ್ದ, ಅಸ್ಪೃಶ್ಯತೆ ಮುಕ್ತ ಸಮಾಜವನ್ನು ಬಯಸಿ ಹೋರಾಟ ನಡೆಸಿದರು. ಯುವಜನರು ಮದ್ಯಪಾನ, ಮಾದಕ ವಸ್ತುಗಳನ್ನು ಸೇವಿಸದೆ ಸ್ವಾಸ್ಥ್ಯ ಸಮಾಜ ನಿರ್ಮಿಸಿ, ಇತರರಿಗೂ ಈ ಕುರಿತು ತಿಳಿಸಬೇಕೆಂದರು.

ಕಾರ್ಯಕ್ರಮದಲ್ಲಿ ವಿಕ್ಟೋರಿಯಾ ಆಸ್ಪತ್ರೆಯ ಮನೋವೈದ್ಯಕೀಯ ತಜ್ಞರಾದ ಡಾ.ಗುರುಪ್ರಸಾದ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಿರ್ದೇಶಕ ಡಾ. ಶಿವರಾಜ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಉಪನಿರ್ದೇಶಕರಾದ ಬಿ.ಕೆ. ರಾಮಲಿಂಗಪ್ಪ, ಕರ್ನಾಟಕ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಎಸ್.ಎನ್. ಮಹೇಶ್ ಸೇರಿದಂತೆ ಇದ್ದರು.

ವಿಜಯ ಕರ್ನಾಟಕ
ಶುಕ್ರವಾರ,2 ಆಗಸ್ಟ್ 2024

# ಮಾದಕ ವಸ್ತು ಮಾರಾಟ: ವಿದ್ಯಾರ್ಥಿಗಳೇ ಟಾರ್ಗೆಟ್

■ ವಿಕ ಸುದ್ದಿಲೋಕ ಬೆಂಗಳೂರು

ಜನರ ಆರೋಗ್ಯ ಕಾಳಜಿಗೆ ಪೂರಕವಾಗಿ ಮಾರ್ಗದರ್ಶನ ಮತ್ತು ಕ್ರಮ ಕೈಗೊಳ್ಳಬೇಕಿರುವ ರಾಜ್ಯ ಸರಕಾರ ಮದ್ಯ ಮಾರಾಟದಿಂದ 50 ಸಾವಿರ ಕೋಟಿ ರೂ.ಆದಾಯ ಸಂಗ್ರಹಿಸುವ ಗುರಿ ಹೊಂದಿರುವುದು ದುರದೃಷ್ಟಕರ ಎಂದು ಖ್ಯಾತ ಮನೋವೈದ್ಯ ತಜ್ಞ ಡಾ.ಸಿ.ಆರ್. ಚಂದ್ರಶೇಖರ್ ವಿಷಾದ ವ್ಯಕ್ತಪಡಿಸಿದರು.

ಚಿತ್ತರಗಿ ಇಳಕಲ್ ವಿಜಯ ಮಹಂತೇಶ್ವರ ಸಂಸ್ಥಾನದ ಶ್ರೀ ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತ ಆಶ್ರಯದಲ್ಲಿ ಗುರುವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

''ಕೋವಿಡ್ ನಂತರ ಶೇ.30ರಷ್ಟು ಯುವಕರಲ್ಲಿ ಹೃದಯಾಘಾತವಾಗುತ್ತಿದೆ. ಇದಕ್ಕೆ ನಾವು ತಿನ್ನುತ್ತಿರುವ ಜಂಕ್ ಫುಡ್ ಕಾರಣ. ಕೋವಿಡ್ ಸಮಯದಲ್ಲಿ ಜಗತ್ತಿನಲ್ಲಿ 40 ಲಕ್ಷ ಜನರು ಸತ್ತರು. ಆದರೆ, ಧೂಮಪಾನದಿಂದ ಅದಕ್ಕಿಂತಲೂ ಹೆಚ್ಚು ಜನರು ಸಾಯುತ್ತಿದ್ದಾರೆ. ಹೃದಯಾಘಾತ ಮತ್ತು ಕ್ಯಾನ್ಸರ್ ಹೆಚ್ಚುತ್ತಿದೆ,'' ಎಂದು ಆತಂಕ ವ್ಯಕ್ತಪಡಿಸಿದರು.



ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮವನ್ನು ಗಣ್ಯರು ಉದ್ಘಾಟಿಸಿದರು.

**ಡಾ.ಸಿ.ಆರ್.ಚಂದ್ರಶೇಖರ್ ವಿಷಾದ**

ಆಶೀರ್ವಚನ ನೀಡಿದ ಚಿತ್ತರಗಿ ಇಳಕಲ್ ವಿಜಯಮಹಂತೇಶ್ವರ ಸಂಸ್ಥಾನ ಶಿರೂರು ಶಾಖಾ ಮಠದ ಶ್ರೀ ಬಸವಲಿಂಗ ಸ್ವಾಮೀಜಿ , ''ನಮ್ಮ ಮನಸ್ಸಿನಲ್ಲಿಯೇ ದೇವರು ಇದ್ದಾನೆ. ದೇವರಿರುವ ಜಾಗಕ್ಕೆ ಮದ್ಯ , ಧೂಮ, ಮಾದಕ ವಸ್ತುಗಳಂತಹ ಅಸಹ್ಯಗಳನ್ನು ತುಂಬಿದರೆ ಆರೋಗ್ಯವಾಗಿರಲು ಸಾಧ್ಯವಿಲ್ಲ'' ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ''ಭಾರತದ ಜನರನ್ನು ಮದ್ಯದಿಂದ ಬಿಡುಗಡೆಗೊಳಿಸಬೇಕು. ಬಡತನಕ್ಕೆ ಮದ್ಯದ ಚಟವೇ ಕಾರಣವಾಗಿದೆ. ದೇಶದ ಜನರನ್ನು ವ್ಯಸನಮುಕ್ತಗೊಳಿಸಬೇಕು ಎಂದು ಗಾಂಧಿಜೀ ಸ್ವಾತಂತ್ರ್ಯ ಚಳವಳಿ ಜತೆಗೆ ವ್ಯಸನಮುಕ್ತ ಆಂದೋಲನ ಶುರು ಮಾಡಿದರು,'' ಎಂದರು.

ವಿಕ್ಟೋರಿಯಾ ಆಸ್ಪತ್ರೆಯ ಮನೋ ವೈದ್ಯಕೀಯ ವಿಭಾಗದ ಮುಖ್ಯಸ್ಥ ಡಾ. ಗುರುಪ್ರಸಾದ್ ಮಾತನಾಡಿ, ''ಬಿಹಾರ ಮತ್ತು ಮುಂಬೈನಲ್ಲಿ ಗಾಂಜಾ ಚಾಕೋಲೆಟ್ ದಂಧೆ ಪತ್ತೆಯಾಗಿದೆ. ವಿದ್ಯಾರ್ಥಿಗಳು ಮತ್ತು ಪೋಷಕರು ಎಚ್ಚರಿಕೆಯಿಂದ ಇರಬೇಕು. ಮೊದಲು ಚಾಕೋಲೆಟ್‌ಗಳನ್ನು ಉಚಿತವಾಗಿ ನೀಡುತ್ತಾರೆ. ನಂತರ ನೀವೇ ಹಣ ಕೊಟ್ಟು ಖರೀದಿಸುವಂತೆ ಮಾಡುತ್ತಾರೆ. ಹಾಗಾಗಿ, ಉಚಿತ ಚಾಕೋಲೆಟ್‌ಗಳನ್ನು ನೀಡಿದರೆ, ಅವರನ್ನು ತಿರಸ್ಕರಿಸಿ,'' ಎಂದರು.

ಕಾರ್ಯಕ್ರಮ ಮಾದಕ ವಸ್ತುಗಳನ್ನು ಮುಟ್ಟುವುದಿಲ್ಲ ಎಂದು ವಿದ್ಯಾರ್ಥಿಗಳಿಗೆ ಪ್ರತಿಜ್ಞಾವಿಧಿ ಬೋಧಿಸಲಾಯಿತು. ವೇದಿಕೆ ಕಾರ್ಯಕ್ರಮಕ್ಕೂ ಮುನ್ನ ಮೌರ್ಯ ಸರ್ಕಲ್‌ನ ಗಾಂಧೀ ಪ್ರತಿಮೆಯಿಂದ ಗಾಂಧೀ ಭವನದವರೆಗೆ ವಿದ್ಯಾರ್ಥಿಗಳು ಜಾಗೃತಿ ಜಾಥಾ ನಡೆಸಿದರು.

ವಾರ್ತಾ ಇಲಾಖೆ ಉಪನಿರ್ದೇಶಕ ರಾಮಲಿಂಗಪ್ಪ, ಮಹೇಶ್, ಗಾಂಧಿ ಭವನದ ನಿರ್ದೇಶಕ ಶಿವರಾಜ್, ಜಿ.ಸಿ.ಚಂದ್ರಶೇಖರ್ ಉಪಸ್ಥಿತರಿದ್ದರು.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ

Aug 01, 2024



ಇಳಕಲ್‌ನ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನದ ಶ್ರೀ ಮಹಾಂತ ಶಿವಯೋಗಿಗಳ ಜಯಂತಿ ಅಂಗವಾಗಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಗಾಂಧಿ ಭವನದಲ್ಲಿಂದು ಹಮ್ಮಿಕೊಂಡಿದ್ದ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮವನ್ನು ಶ್ರೀ ಗುರುಮಹಾಂತ ಸ್ವಾಮೀಜಿ ಅವರು ಉದ್ಘಾಟಿಸಿದರು. ನಾಡೋಜ ಡಾ.ವೂಡೆ ಪಿ.ಕೃಷ್ಣ, ಮನೋವೈದ್ಯ ಡಾ.ಚಂದ್ರಶೇಖರ್, ವಾರ್ತಾ ಇಲಾಖೆಯ ಉಪನಿರ್ದೇಶಕ ರಾಮಲಿಂಗಪ್ಪ ಬಿ.ಕೆ., ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಮಹೇಶ್ ಎನ್.ಎಸ್., ಡಾ.ಗುರುಪ್ರಸಾದ್ ಮತ್ತಿತರರು ಈ ಸಂದರ್ಭದಲ್ಲಿ ಪಾಲ್ಗೊಂಡಿದ್ದರು.

ಕನ್ನಡಪ್ರಭ

Aug 01, 2024

# ಎಂ.ಕೆ.ಕೆಂಪೇಗೌಡ ಅನುವಾದಿಸಿರುವ ಲಾಲ್ ಬಹದ್ದೂರ್ ಶಾಸ್ತ್ರಿ ಕೃತಿ ಇಂದು ಲೋಕಾರ್ಪಣೆ

## ಇಂಗ್ಲಿಷ್ ಮೂಲ ಲೇಖಕರು ಡಿ.ಆರ್.ಮಾಂಕೇಕರ್ | ಹೆಸರಾಂತ ವಾಗ್ಮಿ ಪ್ರೊ. ಎಂ.ಕೃಷ್ಣೇಗೌಡ ಕೃತಿ ಕುರಿತು ಮಾತು

• **ಕನ್ನಡಪ್ರಭ ವಾರ್ತೆ** ಮೈಸೂರು

ಡಿ.ಆರ್.ಮಾಂಕೇಕರ್ ಅವರು ಇಂಗ್ಲಿಷ್‌ನಲ್ಲಿ ರಚಿಸಿರುವ ಲಾಲ್ ಬಹದ್ದೂರ್ ಶಾಸ್ತ್ರಿಯವರ ಸಮಗ್ರ ಜೀವನ ವಿವರಗಳನ್ನೊಳಗೊಂಡ ಕೃತಿಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿವೃತ್ತ ನಿರ್ದೇಶಕ ಎಂ.ಕೆ. ಕೆಂಪೇಗೌಡ ಅವರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಕೃತಿಯನ್ನು ಮೈಸೂರಿನ ವಿಸ್ಮಯ ಬುಕ್ ಹೌಸ್ ಪ್ರಕಟಿಸಿದೆ.



ಡಿ.ಆರ್.ಮಾಂಕೇಕರ್ ಅವರು ಪ್ರಸಿದ್ಧ ಪತ್ರಕರ್ತರಾಗಿದ್ದರು.60 ರ ದಶಕದಲ್ಲಿ ಲಾಲ್ ಬಹದ್ದೂರ್‌ಶಾಸ್ತ್ರೀ ಅವರನ್ನು ತುಂಬಾ ಹತ್ತಿರದಿಂದ ಬಲ್ಲವರಾಗಿದ್ದರು. ಹಾಗಾಗಿ ಮಾಂಕೇಕರ್ ಅವರ ಕೃತಿಯಲ್ಲಿನ ಲಾಲ್ ಬಹದ್ದೂರ್ ಶಾಸ್ತ್ರಿ ಅವರ ಜೀವನ ವೃತ್ತಾಂತಕ್ಕೆ ವಿಶೇಷ ಮಾನ್ಯತೆ ಇದೆ.

ಎಂ.ಕೆ. ಕೆಂಪೇಗೌಡ ಅವರು ಮೂಲತಃ ಕನ್ನಡ ಸಾಹಿತ್ಯದ ವಿದ್ಯಾರ್ಥಿ. ಕನ್ನಡ ಉಪನ್ಯಾಸಕರಾಗಿ ಕೆಲಸ ಮಾಡಿದವರು. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನಿರ್ದೇಶಕ ರಾಗಿ ಸೇವೆ ಸಲ್ಲಿಸಿದ ಅನುಭವದ ಹಿನ್ನಲೆಯಲ್ಲಿ ಕರ್ನಾಟಕ ಪಂಚಾಯತ್ ರಾಜ್ ಬಗ್ಗೆ ಗ್ರಾಮ ಸುರಾಜ್ಯ ಎಂಬ ಕೃತಿ ರಚಿಸಿದ್ದು ಈಗಾಗಲೆ ಜನಪ್ರಿಯವಾಗಿದೆ.

ಲಾಲ್ ಬಹದ್ದೂರ್‌ಶಾಸ್ತ್ರಿಯವರಿಗೆ ಭಾರತದ ಚರಿತ್ರೆಯಲ್ಲಿ ವಿಶೇಷವಾದ ಸ್ಥಾನವಿದೆ. ಅತ್ಯಂತ ಸರಳ, ಪ್ರಾಮಾಣಿಕ ಹಾಗೂ ಜನಪರ ಆಡಳಿತಗಾರರಾಗಿ ಲಾಲ್ ಬಹದ್ದೂರ್‌ಶಾಸ್ತ್ರಿಯವರು ವಿಶೇಷವಾಗಿ ಗುರುತಿಸಲ್ಪಟ್ಟಿದ್ದಾರೆ. ಅವರ ಬದುಕು ಪ್ರಸಕ್ತ ಕಾಲಘಟ್ಟದಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿದೆ.




ಲಾಲ್ ಬಹದ್ದೂರ್‌ಶಾಸ್ತ್ರಿ ಕೃತಿಯನ್ನು ಆ. 1 ರಂದು ಸಂಜೆ 4ಕ್ಕೆ ಬೆಂಗಳೂರಿನ ಶೇಷಾದ್ರಿಪುರಂನಲ್ಲಿರುವ ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಲೋಕಾರ್ಪಣೆ ಮಾಡುವರು. 5ನೇ ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷ ಸಿ. ನಾರಾಯಣಸ್ವಾಮಿ ಅಧ್ಯಕ್ಷತೆ ವಹಿಸುವರು.

ಹೆಸರಾಂತ ವಾಗ್ಮಿ ಪ್ರೊ. ಎಂ. ಕೃಷ್ಣೇಗೌಡ ಕೃತಿ ಕುರಿತು ಮಾತನಾಡುವರು. ಹಿರಿಯಗಾಂಧಿ ವಿಚಾರಧಾರೆ ಪ್ರತಿಪಾದಕರಾದ ಡಿ.ಆರ್. ಪಾಟೀಲ್, ರಾಜ್ಯ ವಿಕೇಂದ್ರೀಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿ ಉಪಾಧ್ಯಕ್ಷ ಪ್ರಮೋದ ಹೆಗಡೆ ಹಾಗೂ ರಾಜ್ಯ ಪಂಚಾಯತ್ ಪರಿಷತ್ತಿನ ಕಾರ್ಯಾಧ್ಯಕ್ಷ ವಿ.ವೈ.ಘೋರ್ಪಡೆ ಮುಖ್ಯ ಅತಿಥಿಗಳಾಗಿರುವರು.

ಲಾಲ್ ಬಹದ್ದೂರ್‌ಶಾಸ್ತ್ರಿ ಕೃತಿ ಲೋಕಾರ್ಪಣೆ ಸಮಾರಂಭದಲ್ಲಿ ಸಜ್ಜನಬಂಧುಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕೆಂದು ಮೈಸೂರಿನ ವಿಸ್ಮಯ ಬುಕ್‌ಹೌಸ್‌ನ ಮುಖ್ಯಸ್ಥರು ಹಾಗೂ ಖ್ಯಾತ ಚಿತ್ರಕಲಾವಿದ ಪ್ರಕಾಶ್ ಚಿಕ್ಕಪಾಳ್ಯ ಮನವಿ ಮಾಡಿದ್ದಾರೆ.

ಸಂಜೆವಾಣಿ

ಗುರುವಾರ 01 ಆಗಸ್ಟ್ 2024



ನಗರದ ಗಾಂಧಿ ಭವನದಲ್ಲಿ ಇಂದು ನಡೆದ ಡಾ. ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮದಲ್ಲಿ ಗುರುಮಹಾಂತ ಸ್ವಾಮಿಗಳು. ನಾಡೋಜ. ಡಾ. ವೂಡೇ ಪಿ. ಕೃಷ್ಣ. ಡಾ. ಗುರುಪ್ರಸಾದ್. ರಾಮಲಿಂಗಪ್ಪ. ಶಿವರಾಜ್. ಡಾ. ಚಂದ್ರಶೇಖರ್ ಸಿ.ಆರ್ ಮತ್ತಿತರರು ಉಪಸ್ಥಿತರಿದ್ದರು.